# ಸುರಪುರ: ವಿಮೋಚನಾ ಹೋರಾಟ

## ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಶುಭಾ



ಮಾರ್ಗದರ್ಶಕರು
ಡಾ. ಟಿ.ವಿಜಯ್ ಪೂಣಚ್ಚ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೬

# ಸುರಪುರ: ವಿಮೋಚನಾ ಹೋರಾಟ

## ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಶುಭಾ

ಮಾರ್ಗದರ್ಶಕರು
ಡಾ. ಟಿ.ವಿಜಯ್ ಪೂಣಚ್ಚ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೬

# ಮಾರ್ಗದರ್ಶಕರ ಪ್ರಮಾಣಪತ್ರ

ಸುರಪುರ: ವಿಮೋಚನಾ ಹೋರಾಟ (ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ) ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಕುಮಾರಿ ಶುಭಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಟಿ.ವಿಜಯ್ ಪೂಣಚ್ಚ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 06-06-2006

# ಪ್ರಮಾಣ ಪತ್ರ

ಸುರಪುರ: ವಿಮೋಚನಾ ಹೋರಾಟ (ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ) ಎಂಬ ನಿಬಂಧವನ್ನು ಡಾ. ಟಿ.ವಿಜಯ್ ಪೂಣಚ್ಚ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 06-06-2006

ಶುಭಾ
ಸಂಶೋಧಕಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ನಿಬಂಧವನ್ನು ಸಿದ್ಧಪಡಿಸಲು ಸೂಕ್ತ ಸಲಹೆಗಳೊಂದಿಗೆ ಮಾರ್ಗದರ್ಶನ ನೀಡಿದ ಪ್ರೊ.ಟಿ.ವಿಜಯ್ ಪೂಣಚ್ಚ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ನಿಬಂಧದ ಅಧ್ಯಯನಕ್ಕೆ ಎಲ್ಲ ರೀತಿಯ ನೆರವು ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ಕೆ.ಮೋಹನಕೃಷ್ಣ ರೈ ಅವರಿಗೆ ಕೃತಜ್ಞತೆಗಳು. ಅಧ್ಯಯನದ ಅವಧಿಯಲ್ಲಿ ವಿವಿಧ ಆಯಾಮಗಳನ್ನು ಬೋಧಿಸಿದ ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ಸಿ.ಆರ್.ಗೋವಿಂದರಾಜು, ಡಾ.ಚಿನ್ನಸ್ವಾಮಿ ಸೋಸಲೆ ಮತ್ತು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಸಹಕಾರವನ್ನು ನೆನೆಯುತ್ತೇನೆ. ನನ್ನ ಸಂಶೋಧನೆಯನ್ನು ನಡೆಸಲು ಸೂಕ್ತ ವಾತಾವರಣವನ್ನು ಕಲ್ಪಿಸಿದ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಅಧ್ಯಯನಾಂಗದ ನಿರ್ದೇಶಕರಿಗೆ, ಗ್ರಂಥಪಾಲಕರಿಗೆ ಅಭಾರಿಯಾಗಿದ್ದೇನೆ. ಚರಿತ್ರೆ ವಿಭಾಗದ ಬೋಧಕೇತರ ಸಿಬ್ಬಂದಿಗಳಾದ ಸೋಮಶೇಖರ ಎಸ್. ಕಣವಿ ಮತ್ತು ಗಂಗಾಧರ ಅವರ ಸಹಕಾರವನ್ನು ನೆನೆಯುತ್ತೇನೆ.

ನಿಬಂಧಕ್ಕೆ ಸಂಬಂಧಿಸಿದ ಆಕರಗಳನ್ನು ಪರಿಶೀಲಿಸಲು ಅನುವು ಮಾಡಿಕೊಟ್ಟ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟಗಾರರಿಗೆ ಮತ್ತು ಅವರ ಕುಟುಂಬಸ್ಥರಿಗೆ ನನ್ನ ಕೃತಜ್ಞತೆಗಳು. ನಿಬಂಧಕ್ಕೆ ಸಂಬಂಧಿಸಿದ ಸೂಕ್ತ ಕೃತಿಗಳನ್ನು ನೀಡಿ ಸಹಕರಿಸಿದ ಶ್ರೀ ಪ್ರಹ್ಲಾದರಾವ್ ಕುಳಗೇರಿ, ಶ್ರೀ ಕಿಶನರಾವ್ ಮಳ್ಳಿ, ಶ್ರೀ ಬುದ್ದಿವಂತಶೆಟ್ಟಿ, ಶ್ರೀ ಹರಿ ಆದವಾನಿ, ಶ್ರೀ ವೀರಣ್ಣದಂಡೆ, ಶ್ರೀ ವಿರೇಶ ಹಳ್ಳೂರ, ಸ್ವಾಮಿರಾವ್ ಕುಲಕರ್ಣಿ ಮತ್ತು ಮೂಡಬೂಳು ಭಾಸ್ಕರರಾವ್ ಇವರನ್ನು ನೆನೆಯುತ್ತೇನೆ. ಅಧ್ಯಯನದ ಆರಂಭದಿಂದ ಅಂತ್ಯದವರೆಗೆ ಜೊತೆಯಲ್ಲಿದ್ದು ಸಲಹೆ ಸೂಚನೆಗಳನ್ನು ನೀಡಿದ ಸ್ನೇಹಿತರಾದ ವಿಜು, ಸುಮನ, ದೀಪಾ, ಗಾಯತ್ರಿ, ಅನು ಮತ್ತು ಆನಂದ ಇವರಿಗೆ ನನ್ನ ಕೃತಜ್ಞತೆಗಳು. ಸದಾ ಮಗಳ ಏಳ್ಗೆಯನ್ನು ಬಯಸುವ ತಂದೆ ತಾಯಿಯವರಾದ ಶಾಂತಪ್ಪ ಮತ್ತು ಲಕ್ಷ್ಮಿಬಾಯಿ ಅವರಿಗೆ, ಅಣ್ಣ- ಅತ್ತಿಗೆಯರಾದ ಬಸವರಾಜ-ಮಂಜುಳಾ, ನಾಗರಾಜ-ರೂಪಾ,ಅಕ್ಕ ಭಾವರಾದ ಪ್ರತಿಭಾ-ಸುರೇಶ ಅವರಿಗೆ ನನ್ನ ಪ್ರೀತಿಯ ಕೃತಜ್ಞತೆಗಳು. ಅಕ್ಷರ ಸಂಯೋಜನೆ ಮಾಡಿಕೊಟ್ಟ ಎ.ಎಂ.ಕೃಪಾಶಂಕರ್ ಮತ್ತು ರಶ್ಮಿಕೃಪಾಶಂಕರ್ ಅವರಿಗೆ ಕೃತಜ್ಞತೆಗಳು.

- ಶುಭಾ

# ಪರಿವಿಡಿ

ದಕ್ಷಿಣ ಭಾರತದ ಅದರಲ್ಲೂ ಮುಖ್ಯವಾಗಿ ಕರ್ನಾಟಕದ ಆಧುನಿಕ ಚರಿತ್ರೆಯ ಬರವಣಿಗೆಗಳನ್ನು ಅವಲೋಕಿಸಿದರೆ ಬಹುತೇಕವಾಗಿ ವಸಾಹತು ವಿರೋಧಿ ಹೋರಾಟಗಳೇ ಕಂಡುಬರುತ್ತವೆ. ಅವುಗಳನ್ನು ರಾಷ್ಟ್ರೀಯ ಹೋರಾಟವೆಂದೂ, ರಾಷ್ಟ್ರೀಯತೆಯ ಪ್ರತೀಕಗಳೆಂದು ಅರ್ಥ ಮಾಡಿಕೊಳ್ಳುವ ಬರವಣಿಗೆಗಳನ್ನು ಸ್ವಾತಂತ್ರೋತ್ತರ ದಿನಗಳಲ್ಲಿ ನಾವು ನೋಡಬಹುದು. ಕರ್ನಾಟಕದ ಸಂದರ್ಭದಲ್ಲಿ ಇವುಗಳೆಲ್ಲವೂ ಬಹುತೇಕವಾಗಿ ಮೈಸೂರು ಸಂಸ್ಥಾನಗಳ ಚರಿತ್ರೆಗೆ ಸಂಬಂಧಪಟ್ಟದ್ದಾಗಿವೆ.[1] ಕರ್ನಾಟಕದ ಉತ್ತರ ಭಾಗದ ಅದರಲ್ಲೂ ಮುಖ್ಯವಾಗಿ ಹೈದರಾಬಾದ ಕರ್ನಾಟಕದ ಆಧುನಿಕ ಚರಿತ್ರೆಯಲ್ಲಿ ಗಮನಾರ್ಹವಾಗಿ ಕಾಣುವ ಮುಖ್ಯವಾದ ಘಟ್ಟ ಈ ಪ್ರದೇಶಗಳ ವಿಮೋಚನಾ ಹೋರಾಟ. ಭಾರತದ ಎಲ್ಲಾ ಪ್ರದೇಶಗಳು ೧೫ ಆಗಸ್ಟ್ ೧೯೪೭ ರಂದು ಸಾಮ್ರಾಜ್ಯಶಾಹಿ ಆಡಳಿತದಿಂದ ಮುಕ್ತವಾದರೆ ಹೈದರಾಬಾದ ಕರ್ನಾಟಕದ ಭಾಗಗಳು ಪ್ರಜಾಪ್ರಭುತ್ವೀಯ ಸರ್ಕಾರದ ಕೆಳಗೆ ಬರಲು ೧೯೪೮ ರವರೆಗೆ ಕಾಯಬೇಕಾಯಿತು. ಹಿಂದು ಮತ್ತು ಮುಸ್ಲಿಂ ಬಹುಸಂಖ್ಯಾತರಿರುವ ಪ್ರದೇಶಗಳು ಎಂಬ ವಿಚಾರದ ಹಿನ್ನೆಲೆಯಲ್ಲಿ ಭಾರತದ ವಿಭಜನೆಯಾಗಿರುವ ಅಂಶಗಳು ನೇರವಾಗಿ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟಕ್ಕೆ ಸ್ಫೂರ್ತಿಯಾಯಿತು. ಈ ಹಿನ್ನೆಲೆಯಲ್ಲಿ ಒಂದೆಡೆ ಪಾಕಿಸ್ತಾನದ ನಿರ್ಮಾಣವಾಯಿತು. ಇನ್ನೊಂದೆಡೆ ಮುಸ್ಲಿಂ ಬಹುಸಂಖ್ಯಾತರಿರುವ ಹೈದರಾಬಾದ ಸಂಸ್ಥಾನವು ತನ್ನ ಇರುವಿಕೆಯನ್ನು ಸ್ಪಷ್ಟಪಡಿಸಿತು. ಹೀಗಾಗಿ ಭಾರತದ ಉಪಖಂಡದಲ್ಲಿ ನಾವು ಗೋವಾ, ಡಿಯು-ಡಾಮನ್ ಮುಂತಾದ ಕೆಲವು ಅಪವಾದ ಗಳನ್ನು ಹೊರತುಪಡಿಸಿ ಭಾರತ, ಪಾಕಿಸ್ತಾನ (ಈಗಿನ ಬಾಂಗ್ಲಾದೇಶವನ್ನು ಸೇರಿಸಿದಂತೆ) ಹಾಗೂ ಹೈದರಾಬಾದ ಸಂಸ್ಥಾನಗಳನ್ನು ಪ್ರಮುಖವಾಗಿ ಭಾರತವು ಸ್ವತಂತ್ರವಾದ ಸಂದರ್ಭದಲ್ಲಿ ನೋಡಬಹುದು.

ಹೈದರಾಬಾದ ಸಂಸ್ಥಾನವು ಪ್ರಜಾಪ್ರಭುತ್ವೀಯ ಭಾರತದ ಭೂಪಟದ ಮಧ್ಯಭಾಗದಲ್ಲಿದ್ದರಿಂದ ಪರಿಸ್ಥಿತಿಯು ಇನ್ನು ಬಿಗಡಾಯಿಸಿತು. ತನ್ನ ಮಡಿಲೊಳಗೆ ಸ್ವತಂತ್ರ ರಾಷ್ಟ್ರವೊಂದಿರುವುದು ಭಾರತ ಸರ್ಕಾರಕ್ಕೆ ಮುಜುಗರದ ಸಂಗತಿಯಾಯಿತು. ಇದರಿಂದಾಗಿ ಭದ್ರತೆಯ ಪ್ರಶ್ನೆಯೂ ಭಾರತಕ್ಕೆ ಎದುರಾಯಿತು. ಹಿಂದೂ ಮತೀಯವಾದಿ ಸಂಘಟನೆಗಳು ಹೈದರಾಬಾದ ಸಂಸ್ಥಾನದಲ್ಲಿನ ಹಿಂದುಗಳ ಭವಿಷ್ಯವು ಮುಸಲ್ಮಾನರ ಆಡಳಿತದಲ್ಲಿ ಸುರಕ್ಷವಾಗಿಲ್ಲ ಎಂಬ ರೀತಿಯಲ್ಲಿ ಆಂದೋಲವನ್ನು ಆರಂಭಿಸಿತು. ಇನ್ನೊಂದೆಡೆ "ಅಸುರಕ್ಷಿತ" ಎಂದು ಭಾವಿಸಿದ ಹೈದರಾಬಾದನ ನಿಜಾಂ ತನ್ನ ಉಳಿವಿಗಾಗಿ ಮುಸ್ಲಿಂ ಐಡೆಂಟಿಟಿಯನ್ನು ಉಪಯೋಗಿಸಿದರು. ಪರಿಣಾಮವಾಗಿ, ನಿಜಾಂ ಅರಸರು ಹೈದರಾಬಾದ ಸಂಸ್ಥಾನದ ಕನ್ನಡ ಪ್ರದೇಶಗಳಲ್ಲಿ ಭುಗಿಲೆದ್ದ ಸ್ವಾತಂತ್ರ್ಯ ಹೋರಾಟವನ್ನು ಹದ್ದುಬಸ್ತಿನಲ್ಲಿಡಲು 'ರಜಾಕಾರರು' ಎಂಬ ಪಡೆಯನ್ನು ನಿರ್ಮಿಸಿದರು. ಹೈದರಾಬಾದ ಕರ್ನಾಟಕದ ವಿಮೋಚನೆಗಾಗಿ ಹೋರಾಡುತ್ತಿದ್ದ

ಜನರಿಗೆ ಹೈದರಾಬಾದನ ಒಳಗೆ ಮತ್ತು ಹೊರಗೆ ಪ್ರಬಲವಾಗಿದ್ದ ಕಾಂಗ್ರೆಸ್, ಹಿಂದೂ ಮಹಾಸಭಾ, ಆರ್ಯಸಭಾ ಮುಂತಾದ ಸಂಘಟನೆಗಳು ಬೆಂಬಲಿಸಿದವು. ವಿಮೋಚನಾ ಹೋರಾಟಗಾರರು ತಮ್ಮ ಹೋರಾಟವನ್ನು ತೀವ್ರಗೊಳಿಸಲು "ಶಿಬಿರಗಳನ್ನು" ಹೈದರಾಬಾದ ಕರ್ನಾಟಕದ ಹೊರಗಿರುವ ಕನ್ನಡ ಪ್ರದೇಶಗಳಲ್ಲಿ, ಮರಾಠವಾಡ ಪ್ರದೇಶಗಳಲ್ಲಿ ಮತ್ತು ತೆಲಂಗಾಣದಲ್ಲಿ ಆರಂಭಿಸಿದರು. ಪರಿಣಾಮವಾಗಿ ತೀವ್ರವಾದ ಸಂಘರ್ಷಗಳುಂಟಾದವು. ಈ ಸಂಘರ್ಷಗಳ ಮೂರ್ತರೂಪವೇ ಹೈದರಾಬಾದ ಕರ್ನಾಟಕ ಪ್ರದೇಶದ ವಿಮೋಚನೆ ಎಂದೇ ಹೇಳಬಹುದು.

ಹೈದರಾಬಾದ ಕರ್ನಾಟಕ ಪ್ರದೇಶದ ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದಂತೆ ಈಗಾಗಲೇ ಹಲವಾರು ಮಹತ್ವದ ಸಂಶೋಧನೆಗಳು ಮತ್ತು ಬರಹಗಳು ಪ್ರಕಟಗೊಂಡಿವೆ. ಬಿ.ಸಿ.ಮಹಾಬಲೇಶ್ವರಪ್ಪ ಅವರ ಕೃತಿಯು ಸೇರಿದಂತೆ ಬಹುತೇಕವಾಗಿ ಅನೇಕ ವಿದ್ವಾಂಸರು ಈ ನಿಟ್ಟಿನಲ್ಲಿ ತಮ್ಮ ಕೃತಿಗಳನ್ನು ಪ್ರಕಟಿಸಿದ್ದಾರೆ. ಪ್ರಸ್ತುತ ನಿಬಂಧವು ಹೈದರಾಬಾದ ಕರ್ನಾಟಕದಲ್ಲಿ ಪ್ರಭಾವೀ ಪ್ರದೇಶವಾದ ಸುರಪುರ (ಸುರಪುರ ಸಂಸ್ಥಾನ)ದಲ್ಲಿ ವಿಮೋಚನಾ ಹೋರಾಟಗಾರರು ಮತ್ತು ರಜಾಕಾರರ ನಡುವಿನ ಸಂಘರ್ಷಗಳ ವಿವಿಧ ಮುಖಗಳನ್ನು ದಾಖಲಿಸಲು ಪ್ರಯತ್ನಪಟ್ಟಿದೆ. ಬಹುತೇಕವಾಗಿ ಕೋಮುವಾದಿ ಬರವಣಿಗೆಗಳು, ಹಿಂದೂ ರಾಷ್ಟ್ರೀಯವಾದಿ ಬರಹಗಳು ಈ ಹೋರಾಟವನ್ನು ಹಿಂದೂ-ಮುಸ್ಲಿಂ ಹೋರಾಟವೆಂದೇ ಬಿಂಬಿಸಿರುವುದನ್ನು ಸ್ವಾತಂತ್ರ್ಯೋತ್ತರ ಚರಿತ್ರೆ ಬರವಣಿಗೆಗಳಲ್ಲಿ ನಾವು ನೋಡಬಹುದು. ಮೇಲ್ನೋಟಕ್ಕೆ ಇವುಗಳು ಹಿಂದೂ-ಮುಸ್ಲಿಂ ಕೋಮುವಾದಿ ಹೋರಾಟಗಳು ಎಂಬ ರೀತಿಯಲ್ಲಿ ತೋರ್ಪಡಿಸಿಕೊಂಡರೂ ಆಂತರಿಕವಾಗಿ ಇವುಗಳು ರಾಜ್ಯಾಧಿಕಾರದ ಪ್ರಶ್ನೆಗಳಿಗೆ ಸಂಬಂಧಿಸಿದವುಗಳಾಗಿದೆ. ಈ ಎಲ್ಲಾ ವಿವರಗಳನ್ನು ನಿಬಂಧದಲ್ಲಿ ಸುರಪುರ ಸಂಸ್ಥಾನವನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಲಾಗಿದೆ.

* * *

ಭಾರತವು ಸ್ವಾತಂತ್ರ್ಯಗಳಿಸುವುದಕ್ಕಿಂತ ಮೊದಲಿದ್ದ ೫೬೫ ಸಂಸ್ಥಾನಗಳಲ್ಲಿ ಹೈದರಾಬಾದ ಸಂಸ್ಥಾನವು ಅತ್ಯಂತ ದೊಡ್ಡ ಸಂಸ್ಥಾನವಾಗಿತ್ತು. ಇದರ ವಿಸ್ತೀರ್ಣ ೮೨೦೦೦ ಚದುರ ಮೈಲು. ಇದು ಒಂದು ಮುಕ್ಕಾಲು ಕೋಟಿ ಜನಸಂಖ್ಯೆಯನ್ನು ಹೊಂದಿದ ಸಂಸ್ಥಾನವಾಗಿತ್ತು. ಕ್ರಿ.ಶ.೧೭೨೪ರಲ್ಲಿ ಔರಂಗಜೇಬನ ಮರಣಾನಂತರ ಹೈದರಾಬಾದ ಸುಬೇದಾರನಾಗಿದ್ದ ಮೀರ ಕಮರುದ್ದೀನನು ಹೈದರಾಬಾದ ಸಂಸ್ಥಾನವನ್ನು ಸ್ವತಂತ್ರವೆಂದು ಘೋಷಿಸಿದನು. ಈ ಸಂಸ್ಥಾನವು ತೆಲಂಗಾಣದ ೮ ಜಿಲ್ಲೆ, ಮರಾಠವಾಡದ ೫ ಜಿಲ್ಲೆ ಮತ್ತು ಕನ್ನಡದ ೩ ಪ್ರದೇಶಗಳನ್ನು ಒಳಗೊಂಡಿತ್ತು. ಕ್ರಿ.ಶ.೧೭೨೪ ರಿಂದ ೧೯೪೮ರವರೆಗೆ ಒಟ್ಟು ೭ ಜನ ನಿಜಾಂ ಅವರು ಹೈದರಾಬಾದ ಸಂಸ್ಥಾನವನ್ನು ಆಳಿದರು. ಹೈದರಾಬಾದ ಕರ್ನಾಟಕ ಎಂದು ಕರೆಯಲ್ಪಡುವ ಗುಲಬರ್ಗಾ, ರಾಯಚೂರ, ಬೀದರ್ ಇಂದಿನ ಬಳ್ಳಾರಿ ಮತ್ತು ಕೊಪ್ಪಳ ಪ್ರದೇಶಗಳು ಹೈದರಬಾದ್ ಸಂಸ್ಥಾನದ ವಶದಲ್ಲಿದ್ದವು. ಈ ಪ್ರದೇಶವು ಐತಿಹಾಸಿಕವಾಗಿ ಮಹತ್ವ

ಪಡೆದಿರುವುದರ ಜೊತೆಗೆ ಇಲ್ಲಿ ಅನೇಕ ರಾಜವಂಶಗಳು ಆಳ್ವಿಕೆ ನಡೆಸಿವೆ. ಆದರೆ ಗುಲಬರ್ಗಾ ಪ್ರದೇಶಗಳಾದ ಸುರಪುರ, ಶಹಾಪುರ ಮತ್ತು ಜೇವರ್ಗಿ ಪ್ರದೇಶಗಳು ೧೭೦೭ ರಿಂದ ೧೮೫೭ರವರೆಗೆ ಸುರಪುರ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟಿದ್ದವು. ೧೮೫೭ರಲ್ಲಿ ವಸಹಾತುಶಾಹಿಗಳ ವಿರುದ್ಧ ನಡೆದ ಹೋರಾಟದ ಸಂದರ್ಭದಲ್ಲಿ ಸುರಪುರದ ದೊರೆ ರಾಜಾ ವೆಂಕಟಪ್ಪನಾಯಕನು ಬ್ರಿಟಿಷರ ವಿರುದ್ಧ ಬಂಡೆದ್ದಿದ್ದನು. ಆದರೆ ಅವನ ಪ್ರಯತ್ನವು ವಿಫಲವಾಯಿತು. ನಂತರ ಸುರಪುರವು ಬ್ರಿಟಿಷರ ಸಹಾಯದಿಂದ ನಿಜಾಂ ಅದರ ಆಳ್ವಿಕೆಗೆ ಒಳಗಾಯಿತು. ನಿಜಾಂ ಅವಳ ಆಳ್ವಿಕೆಯು ೧೯೪೮ರವರೆಗೆ ಮುಂದುವರೆಯಿತು.[೨]

೧೮೬೩ರಲ್ಲಿ ಹೈದರಾಬಾದಿನ ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸಿದ ಸಾಲಾರಜಂಗನು ಆಡಳಿತದ ಸುಧಾರಣೆಗಾಗಿ ಜಿಲ್ಲಾಬಂಧಿ ವ್ಯವಸ್ಥೆಯನ್ನು ಮಾಡಿದನು. ಇದರಿಂದ ಸುರಪುರ ಅಂದಿನ ಜಿಲ್ಲೆಯಾಯಿತು. ಜಿಲ್ಲೆಗೆ ರಾಯಚೂರು, ಲಿಂಗಸುಗೂರು, ಕಲಬುರ್ಗಿ ಮತ್ತು ನಳದುರ್ಗಗಳನ್ನು ಸೇರಿಸಲಾಯಿತು. ೧೮೭೩ರಲ್ಲಿ ಕಲಬುರ್ಗಿಯನ್ನು ಸುರಪುರ ಜಿಲ್ಲೆಯಿಂದ ಪ್ರತ್ಯೇಕಗೊಳಿಸಿದ ನಂತರ ಸುರಪುರ ೧೯೦೧ರಲ್ಲಿ ಕೇವಲ ತಾಲೂಕಾಗಿ ಉಳಿಯಿತು. ಸುರಪುರ ತಾಲೂಕನ್ನು ಕಲಬುರ್ಗಿ ಜಿಲ್ಲೆಗೆ ಸೇರಿಸಲಾಯಿತು. ೧೫ನೇ ಆಗಸ್ಟ್ ೧೯೪೭ರಂದು ಭಾರತದ ಬಹುತೇಕ ಪ್ರಾಂತ್ಯಗಳಿಗೆ ಸ್ವಾತಂತ್ರ್ಯ ಬಂದರೂ, ಹೈದರಾಬಾದ ಕರ್ನಾಟಕ ಸ್ವಾತಂತ್ರ್ಯಕ್ಕಾಗಿ ೧೭ನೇ ಸೆಪ್ಟೆಂಬರ್ ೧೯೪೮ವರೆಗೆ ಕಾಯಬೇಕಾಯಿತು.

* * *

## ಉದ್ದೇಶ, ವಿಧಾನ ಮತ್ತು ವ್ಯಾಪ್ತಿ

ಸುರಪುರಕ್ಕೆ ಸಂಬಂಧಿಸಿದಂತೆ ಅನೇಕ ಬರವಣಿಗೆಗಳಿವೆ. ಅವುಗಳಲ್ಲಿ ಮುಖ್ಯವಾದವು. ಎನ್. ಎಚ್. ಕುಲಕರ್ಣಿಯವರ "British Relations with the Principality of Surpur"(೧೯೭೨), ರಂಗರಾಜ ವನದುರ್ಗ ಅವರ "ಸುರಪುರ ಸಂಸ್ಥಾನ : ಒಂದು ಚಾರಿತ್ರಿಕ ಅಧ್ಯಯನ(೧೯೯೫)", ಅಬ್ದುಲ್ ಕರೀಂ ಅವರ "ಸಗರನಾಡು : ಒಂದು ಸಾಂಸ್ಕೃತಿಕ ಅಧ್ಯಯನ"(೧೯೯೯), ಲಕ್ಷ್ಮೀಕಾಂತ ಮೊಹರೇರ್ ಅವರ "ಸಂಸ್ಕೃತ ಸಾಹಿತ್ಯಕ್ಕೆ ಸುರಪುರ ಸಂಸ್ಥಾನದ ಕೊಡುಗೆ : ಒಂದು ಅಧ್ಯಯನ"(೨೦೦೧), ಶಿವಶರಣ ಅರುಣಿಯವರ "ಸುರಪುರ ಸಂಸ್ಥಾನದ ವಾಸ್ತುಶಿಲ್ಪ : ಒಂದು ಅಧ್ಯಯನ" ಎ.ಆರ್ .ನಾಯಕ ಅವರ "ಸಗರನಾಡಿನ ಬೇಡರು : ಒಂದು ಸಾಂಸ್ಕೃತಿಕ ಅಧ್ಯಯನ" ಇತ್ಯಾದಿ. ಇವುಗಳು ಸುರಪುರ ಸಂಸ್ಥಾನಕ್ಕೆ ಸಂಬಂಧಿಸಿದಂತೆ ಅನೇಕ ಮಾಹಿತಿಗಳನ್ನು ನೀಡುತ್ತದೆ. ಪ್ರಸ್ತುತ ನಿಬಂಧದಲ್ಲಿ ಇವುಗಳನ್ನು ಪರಾಮರ್ಶಿಸಲಾಗಿದೆ. ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಮಗ್ಗುಲಗಳನ್ನು ಈ ಮೂಲಕ ಒಂದೆಡೆ ತರಲು ಪ್ರಯತ್ನಿಸಲಾಗಿದೆ.

ಸುರಪುರ ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದಂತೆ ಹೋರಾಟದಲ್ಲಿ ಪಾಲ್ಗೊಂಡ ಅನೇಕರು ದಾಖಲೆಗೆ ಸೇರದೇ ಹೊರಗುಳಿದಿದ್ದಾರೆ. ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರವಹಿಸಿದ ಶಿಬಿರಗಳಲ್ಲಿ ತಾಳಿಕೋಟೆ ಶಿಬಿರವು ಮಾತ್ರ ಜನರಿಗೆ ಪರಿಚಿತವಾಗಿದೆ. ಆದರೆ, ಈ ಶಿಬಿರದ ಅಧೀನದಲ್ಲಿದ್ದ ಸಾಲವಾಡಗಿ, ನಾಗರಬೆಟ್ಟ ಮತ್ತು ಬಂಟನೂರ ಶಿಬಿರಗಳು ಅಷ್ಟಾಗಿ ವಿದ್ವಾಂಸರ ಗಮನಸೆಳೆದಿಲ್ಲ. ಇವುಗಳ ಬಗ್ಗೆ ಹಾಗೂ ಇವುಗಳು ರಜಾಕಾರರ ಜೊತೆ ನಡೆಸಿದ ಹೋರಾಟಗಳ ವಿವರಗಳನ್ನು ನಿಬಂಧದಲ್ಲಿ ದಾಖಲಿಸಲು ಪ್ರಯತ್ನಿಸಲಾಗಿದೆ.

* * *

ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕರಗಳನ್ನಾಗಿ ಚಾರಿತ್ರಿಕ ಮತ್ತು ಮೌಖಿಕ ಆಕರಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕಪಟರಾಳ ಕೃಷ್ಣರಾಯರ "ಸುರಪುರ ಸಂಸ್ಥಾನದ ಇತಿಹಾಸ" (೧೯೭೭) ಸೂರ್ಯನಾಥ ಕಾಮತ್ ಅವರ "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು-೩"(೧೯೮೦), ಬಿ.ಸಿ.ಮಹಾಬಲೇಶ್ವರಪ್ಪನವರ "ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು"(೧೯೯೭), ಎಂ.ಬಿ.ಪಾಟೀಲರ "ಗುಲಬರ್ಗಾ ಜಿಲ್ಲೆಯ ಗ್ಯಾಸೆಟಿಯರ್ "(೧೯೯೭), ಎಸ್.ಆರ್.ರಾಮಸ್ವಾಮಿಯವರ "ಸ್ವಾತಂತ್ರ್ಯೋದಯದ ಮೈಲುಗಲ್ಲುಗಳು" (೧೯೯೭ (೧೯೯೮), ಎಚ್.ಎಸ್.ಪಾಟೀಲ್‌ರ "ವಿಮೋಚನೆ"(೧೯೯೯), ಗೋಪಾಲರಾವ್ ಹೇಜೀಬ್‌ರ "ಹೈದರಾಬಾದ ಮುಕ್ತಿ ಸಂಘರ್ಷ" (೨೦೦೧), ಭಾಸ್ಕರರಾವ್ ಮೂಡಬೂಳರ "ಮರೆತು ಹೋದ ಸುರಪುರ ಇತಿಹಾಸ"(೨೦೦೧), ಬಸವರಾಜ ಪೋಲೀಸ ಪಾಟೀಲ್‌ರ "ಬಿಡುಗಡೆ" (೨೦೦೨) ಅಮರೇಶ ನುಗಡೋಣಿಯವರ "ಹೈದರಾಬಾದು ಕರ್ನಾಟಕ ಹಾಡು-ಪಾಡು"(೨೦೦೩), ಚಂದ್ರಶೇಖರ ಲೋಖಂಡೆಯವರ "ಹೈದರಾಬಾದ ಮುಕ್ತಿ ಸಂಗ್ರಾಮ ಕಾ ಇತಿಹಾಸ"(೨೦೦೪), ಬಾಲಚಂದ್ರ ಜಯಶೆಟ್ಟಿಯವರ "ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ"(೨೦೦೬).

ಈ ಎಲ್ಲಾ ಕೃತಿಗಳ ಜೊತೆಗೆ ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳಾದ ಎನ್.ಎಚ್.ಕುಲಕರ್ಣಿಯವರ "British Relation with the Principality of Surpur"(1972), ಮಂಜುಳಾ ಚಿಂಚೋಳಿಯವರ "Depressed Classes in Hyderabad Karnataka Area"(Under the Nizam Dominian)(1989), ಪ್ರಭಾತ್ ಪದ್ಮನೈನಾರವರ "Freedom Movement in Hyderabad Karnataka Area"(1992), ಉಷಾ ದೇಸಾಯಿಯವರ "Freedom Movement in Raichur District"(1994), ವೆಂಕಟರಾವ್ ಪಲಾತಿಯವರ "Role of Freedom Fighters in

Bidar District"(2002), ಡಿ.ಎಸ್.ಅಶ್ವಥ್ ಅವರ ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ (೨೦೦೧), ಸುಭಾಸ್‌ಚಂದ್ರ ದೊಡ್ಮನಿಯವರ "ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ"(೨೦೦೨), ಶರಣಪ್ಪ ಉಮಚಗಿಯವರ "ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲಾ ಶಿಬಿರಗಳು"(೨೦೦೪) ಎಂಬ ಪ್ರಬಂಧಗಳ ಅವಲೋಕನೆಯನ್ನು ಪ್ರಸ್ತುತ ನಿಬಂಧದಲ್ಲಿ ಮಾಡಲಾಗಿದೆ.

ಇಲ್ಲಿಯವರೆಗೆ ಪ್ರಕಟಿತವಾದ ಬರಹಗಳನ್ನು ೩ ವರ್ಗಗಳನ್ನಾಗಿ ಸಂಶೋಧನೆ ವಿಧಾನದ ದೃಷ್ಟಿಯಿಂದ ಮಾಡಲಾಗಿದೆ.

೧. ಪ್ರಬಲವಾಗಿರುವ ಬರಹಗಾರರ ವರ್ಗವನ್ನು "ಹಿಂದೂ ರಾಷ್ಟ್ರೀಯವಾದಿ" ಬರಹಗಾರರು/ವಿದ್ವಾಂಸರು/ಚರಿತ್ರಕಾರರು ಎನ್ನಬಹುದು. ಇವರು ಪ್ರಥಮವಾಗಿ "ಹಿಂದೂ" ಪರವಾದ ಮತ್ತು "ಮುಸ್ಲಿಂ" ವಿರೋಧಿಯಾದ ನಿಲುವುಗಳನ್ನು ಸೈದ್ಧಾಂತಿಕವಾಗಿ ಎತ್ತಿಹಿಡಿಯುವುದನ್ನು ಕಾಣಬಹುದು. ಇದರಲ್ಲಿ ಮುಖ್ಯರಾದವರು ಬಿ.ಸಿ.ಮಹಾಬಲೇಶ್ವರಪ್ಪ, ಗೋಪಾಲರಾವ್ ಹೇಜೀಬ್, ಬಸವರಾಜ ಪೋಲೀಸ್ ಪಾಟೀಲ್ ಮತ್ತು ಬಾಲಚಂದ್ರ ಜಯಶೆಟ್ಟಿ ಇವರೆಲ್ಲರು ಮೊದಲನೆಯ ವರ್ಗದಲ್ಲಿ ಕಂಡುಬರುತ್ತಾರೆ.

೨. ಎರಡನೇಯ ವರ್ಗದ ಬರಹಗಾರರಲ್ಲಿ ಪ್ರಗತಿಪರ ಧೋರಣೆಗಳನ್ನು ಕಾಣಬಹುದು. ಅವರಲ್ಲಿ ಅಮರೇಶ ನುಗಡೋಣಿ, ಬಿ.ಶೇಷಾದ್ರಿ ಮತ್ತು ಟಿ.ಆರ್ .ಚಂದ್ರಶೇಖರ್ ಮುಂತಾದ ವಿದ್ವಾಂಸರ ಕೃತಿಗಳು ಇಲ್ಲಿ ಮುಖ್ಯವಾಗುತ್ತವೆ.

೩. ಮೂರನೇಯ ವರ್ಗದಲ್ಲಿ "ಜನಾಭಿಪ್ರಾಯಗಳು" ಮುಖ್ಯವಾಗಿ ಪಾತ್ರವನ್ನು ವಹಿಸಿವೆ. ಈ "ಜನಾಭಿಪ್ರಾಯಗಳು" ಬಹುತೇಕವಾಗಿ ಮೊದಲನೇಯ ವರ್ಗದ ವಿದ್ವಾಂಸರ ಬರಹಗಳಿಂದ ಪ್ರೇರಿತರಾಗಿರುವುದನ್ನು ನೋಡಬಹುದು. ಬದುಕುಳಿದ ಬಹುತೇಕ ಅಂದಿನ ಹೈದರಾಬಾದ ಕರ್ನಾಟಕದ ಹೋರಾಟಗಾರರ ಅಥವಾ ಅವರ ಸಂಬಂಧಿಗಳ ಸಂದರ್ಶನಗಳು "ಜನಾಭಿಪ್ರಾಯಗಳ" ಭಾಗವೇ ಆಗಿರುವುದನ್ನು ನೋಡಬಹುದು. ಇವರ ನಡುವೆಯೂ ಇವರಲ್ಲಿ ಕೆಲವರು "ಹಿಂದೂ-ಮುಸ್ಲಿಂ" ಸಮನ್ವತೆಯ ಬಗ್ಗೆ ಮಾತಾಡುವುದುಂಟು. "ಸೆಕ್ಯುಲರ್" ಸಿದ್ಧಾಂತದಿಂದ ಪ್ರೇರಿತರಾಗಿರುವುದು ಉಂಟು. ಬಹುಶಃ ಇತ್ತೀಚಿನ ಈ ಬಗೆಯ ವಿದ್ಯಮಾನಗಳಿಂದ ಇವರು ಪ್ರೇರಿತರಾಗಿ ತಮ್ಮ ನಿಲುವುಗಳನ್ನು ಬದಲಾಯಿಸಿಕೊಂಡಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಈ ಬಗೆಯ ವಿನ್ಯಾಸದಲ್ಲಿ ಮಾತಾಡುವವರ ಪೈಕಿ ಸರ್ದಾರ ಶರಣಗೌಡ ಮತ್ತು ಮಳ್ಳಿ ಕಿಶನರಾವ್ ಅವರು

ಮುಖ್ಯರಾಗಿರುತ್ತಾರೆ. ಇತ್ತೀಚಿಗೆ ಹೊರಬಂದ ಕೆಲವು ಅಪ್ರಕಟಿತ ಕೃತಿಗಳಲ್ಲಿ ಅದರಲ್ಲೂ ಮುಖ್ಯವಾಗಿ ಎಂ.ಫಿಲ್. ಮತ್ತು ಪಿಎಚ್.ಡಿ.ನಿಬಂಧಗಳಲ್ಲಿ ಕೂಡ ಈ ಬಗೆಯ ನಿಲುವುಗಳು ಗೋಚರಿಸುತ್ತವೆ.

ಹೋರಾಟಗಾರರ ವಿವಿಧ ಮಾದರಿಗಳು ಪ್ರಸ್ತುತ ಅಧ್ಯಯನದಲ್ಲಿ ಒಳಗೊಳ್ಳುತ್ತವೆ. ಹಾಗೆಯೇ ಈ ಹೋರಾಟಗಾರರು ನಿಜಾಂ ಅವರ ವಿರುದ್ಧ ಹೋರಾಟ ಮಾಡಲು ರೂಪಿಸಿದ ತಂತ್ರಗಳನ್ನು ಕೂಡಾ ಇದರಲ್ಲಿ ಅಧ್ಯಯನ ಮಾಡಲಾಗಿದೆ. ಈ ವಿಮೋಚನಾ ಹೋರಾಟಗಾರರಲ್ಲಿ ಕೆಲವರ ಹೆಸರುಗಳು ಮಾತ್ರ ಪ್ರಸಿದ್ಧಿಗೆ ಬಂದಿವೆ. ಈ ಹೋರಾಟದಲ್ಲಿ ಪಾಲ್ಗೊಂಡ ಅನೇಕರು ದಾಖಲೆಗೆ ಸೇರದೆ ಹೊರಗುಳಿದಿದ್ದಾರೆ. ಈ ಹೋರಾಟದಲ್ಲಿ ಮುಸ್ಲಿಂರು ಭಾಗವಹಿಸಿರುವುದು ಹೋರಾಟಗಾರರ ಸಂದರ್ಶನಗಳ ಮೂಲಕ ತಿಳಿದು ಬಂದಿದೆ. ಆದರೆ ಅವರ ಹೆಸರು ಎಲ್ಲೂ ಉಲ್ಲೇಖವಾಗದಿರುವುದು ವಿಪರ್ಯಾಸವಾಗಿದೆ. ವಿಮೋಚನಾ ಹೋರಾಟದಲ್ಲಿ ಪಾಲ್ಗೊಂಡಿರುವ ಹೋರಾಟಗಾರರನ್ನು ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿ, ಸಂದರ್ಶನ ಮತ್ತು ವಿಮೋಚನಾ ಹೋರಾಟಗಾರರ ಕುರಿತು ಬಂದಿರುವ ಗ್ರಂಥಗಳನ್ನು ಅವಲೋಕಿಸಲಾಗಿದೆ. ಈ ಹೋರಾಟದಲ್ಲಿ ಬದುಕುಳಿದ ಹೋರಾಟಗಾರರನ್ನು ಸಂದರ್ಶನ ಮಾಡುವುದರ ಮೂಲಕ ಈ ಹೋರಾಟದ ಬಗ್ಗೆ ಅವರಿಂದ ಮಾಹಿತಿ ಸಂಗ್ರಹಿಸಲಾಗಿದೆ. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಸುರಪುರದಲ್ಲಿ ನಡೆದ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ಸ್ವರೂಪವನ್ನು ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ.

* * *

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಸುರಪುರ ಪ್ರದೇಶಗಳಿಗೆ ಸೀಮಿತಗೊಳಿಸಲಾಗಿದೆ. ಸುರಪುರದ ರಾಜಕೀಯ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಸಂಶೋಧನೆಗಳು ನಡೆದಿದೆ. ಚರಿತ್ರೆಯ ಉಳಿದ ಮಗ್ಗುಲಗಳ ಬಗ್ಗೆ ಅಧ್ಯಯನಗಳು ಕಡಿಮೆಯಿರುವುದು ಗಮನಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಚರಿತ್ರೆಯ ವಿವಿಧ ಮಗ್ಗುಲುಗಳನ್ನು ಅಧ್ಯಯನದ ವಿಮರ್ಶೆಗೆ ಒಳಪಡಿಸುವ ಪ್ರಯತ್ನವನ್ನು ಪ್ರಸ್ತುತ ನಿಬಂಧದಲ್ಲಿ ಮಾಡಲು ಯತ್ನಿಸಲಾಗಿದೆ. ಆದ್ದರಿಂದ ಈ ಹೋರಾಟದಲ್ಲಿ ಭಾಗಿಯಾದ ಹೋರಾಟಗಾರರನ್ನು ಮತ್ತು ಅವರು ಸ್ಥಾಪಿಸಿದ ಶಿಬಿರಗಳನ್ನು ಅಧ್ಯಯನ ವ್ಯಾಪ್ತಿಗೆ ತರಲಾಗಿದೆ. ೧೫ ಅಗಸ್ಟ್ ೧೯೪೭ ರಿಂದ ೧೮ ಸೆಪ್ಟೆಂಬರ್ ೧೯೪೮ರ ಕಾಲಾವಧಿಯನ್ನು ಮಾತ್ರ ಸೀಮಿತಗೊಳಿಸಿಕೊಂಡು ಪ್ರಸ್ತುತ ಅಧ್ಯಯನ ಮಾಡಲಾಗಿದೆ. ಈ ಅವಧಿಯಲ್ಲಿ ಸುರಪುರದಲ್ಲಿ ಕಂಡುಬಂದ ಹೋರಾಟದ ಸ್ವರೂಪವನ್ನು ಹಂತಹಂತವಾಗಿ ವಿವರಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಸುರಪುರದ ವ್ಯಾಪ್ತಿಯಲ್ಲಿ ಚರ್ಚಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಅಡಿಟಿಪ್ಪಣಿಗಳು

೧. ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿರುವ ಷೇಕ್ ಅಲಿ ಸಂಪಾದಕತ್ವದ ಕರ್ನಾಟಕ ಚರಿತ್ರೆಯ ೭ ಸಂಪುಟಗಳನ್ನು ಇಲ್ಲಿ ಉದಾಹರಿಸಬಹುದು (ಷೇಕ್‌ಅಲಿ, ಕರ್ನಾಟಕ ಚರಿತ್ರೆ ಸಂ.೧ ರಿಂದ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭)

೨. ಈ ಭಾಗದ ಚರಿತ್ರೆಗೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳು ಹೀಗಿವೆ. ಔರಂಗಜೇಬನು ದಕ್ಷಿಣ ಭಾರತದ ದಂಡಯಾತ್ರೆ ಕೈಗೊಂಡಿದ್ದರಿಂದ ಬಹಮನಿ ಸಾಮ್ರಾಜ್ಯದ ಪ್ರದೇಶಗಳು ಮೊಗಲ್‌ರ ವಶವಾದವು. ಇವನ ಮರಣಾನಂತರ ಮೊಗಲ್ ಸಾಮ್ರಾಜ್ಯದ ಪತನ ಆರಂಭವಾಯಿತು. ೧೭೧೩ರಲ್ಲಿ ಫರೂಕ್ ಶಿಯಾರ್ ಎಂಬ ಮೊಗಲ್ ಸಾಮ್ರಾಟನು ಮೀರ್ ಕಮರುದ್ದಿನನ್ನು "ನಿಜಾಂ ಉಲ್ ಮುಲ್ಕ ಫಿರೋಜ ಜಂಗ" ಎಂಬ ಬಿರುದನ್ನು ನೀಡಿ ದಖನ್ನಿನ ಸುಭೇದಾರನನ್ನಾಗಿ ನೇಮಿಸಿದನು. ಮುಂದೆ ಈತನಿಗೆ ಮೊಗಲ್ ಸುಲ್ತಾನನಾದ ಮಹ್ಮದ ಶಹಾ "ಅಸಫ್ ಜಹಾ" ಎಂಬ ಬಿರುದನ್ನು ನೀಡಿದರು. ೧೭೨೪ರಲ್ಲಿ ಮೀರ್ ಕಮರುದ್ದೀನನು ಶಿಖಾರಖೇಡ ಎಂಬ ಯುದ್ಧದಲ್ಲಿ ಮುಖೇರಿಜ್ ಖಾನನನ್ನು ಸೋಲಿಸಿದನು. ಈ ಸಂದರ್ಭದಲ್ಲಿ ಮೊಗಲ್ ಸಾಮ್ರಾಜ್ಯದಲ್ಲಿ ಉತ್ತರಾಧಿಕಾರಕ್ಕಾಗಿ ಕಲಹ ಉಂಟಾದಾಗ ೧೭೨೪ರಲ್ಲಿ ಮೀರ ಕಮರುದ್ದೀನನು ಸ್ವತಂತ್ರವೆಂದು ಘೋಷಿಸಿಕೊಂಡನು. ಆ ಸಮಯದಲ್ಲಿ ಸುರಪುರ, ಶಹಾಪುರ ಮತ್ತು ಜೇವರ್ಗಿ ಈ ಪ್ರದೇಶಗಳು 'ಸುರಪುರ ಸಂಸ್ಥಾನ'ದ ಅಧೀನದಲ್ಲಿದ್ದವು. ಸುರಪುರ ಅರಸರ ಅಧೀನದಲ್ಲಿ ೧೭೦೭ ರಿಂದ ೧೮೫೭ರವರೆಗೆ ಈ ಪ್ರದೇಶಗಳು ಸ್ವತಂತ್ರ ಸಂಸ್ಥಾನವಾಗಿ ರೂಪತಳೆಯುತ್ತವೆ.

೧೭೨೪ರಲ್ಲಿ ಮೀರ್ ಕಮರುದ್ದೀನನು ಸ್ವತಂತ್ರವಾದ "ಹೈದರಾಬಾದ ಸಂಸ್ಥಾನ"ವನ್ನು ದಕ್ಷಿಣ ಭಾರತದಲ್ಲಿ ಸ್ಥಾಪಿಸಿದನು (ಮಹಾಬಲೇಶ್ವರಪ್ಪ ೧೯೯೭:೧೧). ಹೀಗೆ ರಾಜ್ಯವನ್ನು "ಸ್ವತಂತ್ರವೆಂದು" ಘೋಷಿಸಿ ಹೈದರಾಬಾದ ನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ತಮ್ಮ ಮನೆತನಕ್ಕೆ "ಅಸಫಜಾಹಿ" ಎಂಬ ಹೆಸರಿನಿಂದ ಇವರು ಆಳ್ವಿಕೆ ಮಾಡತೊಡಗಿದರು. ಇವರು ತಮ್ಮ ಹೆಸರಿನ ಮೊದಲು "ನಿಜಾಂ" ಎಂಬ ಹೆಸರನ್ನು ಸೇರಿಸಿದರು. "ನಿಜಾಂ" ಶಬ್ದದ ಮೂಲ ಅರ್ಥ "ವ್ಯವಸ್ಥಾಪಕ", ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವನು, ರಕ್ಷಕ ಮತ್ತು ನಿಯಮಕ ಎಂಬ ಅರ್ಥವನ್ನು ಕೊಡುತ್ತದೆ.

ಹೈದರಾಬಾದನ ನಿಜಾಂ ಮೀರ್ ಕಮರುದ್ದೀನನಿಗೆ ಮಿಲಿಟರಿ ಜ್ಞಾನವಾಗಲೀ/ರಾಜಕೀಯ ಮುತ್ಸದ್ದಿತನವಾಗಲೀ ಇರಲಿಲ್ಲ. ನೆರೆಯ ಶತ್ರುಗಳ ಆಕ್ರಮಣವನ್ನು ತಡೆಯಲು ಹಾಗೂ ತನ್ನ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವವನ್ನು ಕಾಪಾಡಿಕೊಂಡು ಹೋಗಲು ನಿಜಾಂ ಅವರು ಬ್ರಿಟಿಷರ ನೆರವನ್ನು ಬಯಸಿದರು. ಈ ಸಮಯವನ್ನು ಉಪಯೋಗಿಸಿಕೊಂಡ ಬ್ರಿಟಿಷರು ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿಯ "ಸಹಾಯಕ ಸೈನ್ಯ ಪದ್ಧತಿ"ಯ ಒಪ್ಪಂದಕ್ಕೆ ೧೭೯೮ರಲ್ಲಿ ನಿಜಾಂ ಅವರಿಂದ ಸಹಿ ಹಾಕಿಸಿದರು (ಮಹಾಬಲೇಶ್ವರಪ್ಪ ೧೯೯೭:೧೨). ಹೀಗೆ ಕ್ರಮೇಣವಾಗಿ ಹೈದರಾಬಾದ ಸಂಸ್ಥಾನದಲ್ಲಿ ಬ್ರಿಟಿಷರು ಹಸ್ತಕ್ಷೇಪ ಮಾತತೊಡಗಿದರು. ಟಿಪ್ಪುಸುಲ್ತಾನನ ಪತನದ ನಂತರ ಹಲವಾರು ಏಳು-ಬೀಳುಗಳನ್ನು ಕಂಡ

ಹೈದರಾಬಾದ ಸಂಸ್ಥಾನವು ಒಂದು ಸ್ಥಿರತೆಯನ್ನು ಪಡೆದುಕೊಂಡಿತು. ಬೀದರ, ಗುಲಬರ್ಗಾ ಮತ್ತು ರಾಯಚೂರಿನ ಕನ್ನಡ ಪ್ರದೇಶಗಳೂ, ಮರಾಠವಾಡ ಮತ್ತು ತೇಲಂಗಾಣ ಪ್ರದೇಶಗಳನ್ನು ಪ್ರಮುಖವಾಗಿ ಒಳಗೊಂಡ ಹೈದರಾಬಾದ ಸಂಸ್ಥಾನವು ದಿನದಿಂದ ದಿನಕ್ಕೆ ಪ್ರಬಲವಾಯಿತು. ಹೀಗೆ ಸ್ವಾತಂತ್ರ್ಯಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ೫೬೫ ಸಂಸ್ಥಾನಗಳಲ್ಲಿಯೇ "ಹೈದರಾಬಾದ ಸಂಸ್ಥಾನ"ವು ಅತ್ಯಂತ ಪ್ರಭಾವಿಯಾದ ಸಂಸ್ಥಾನವಾಗಿತ್ತು. ಹೈದರಾಬಾದ ಸಂಸ್ಥಾನದ ವಿಸ್ತೀರ್ಣ ೮೨೦೦೦ ಚದುರ ಮೈಲುಗಳು. ಈ ಸಂಸ್ಥಾನವು ಒಂದು ಮುಕ್ಕಾಲು ಕೋಟಿ ಜನಸಂಖ್ಯೆಯನ್ನು ಹೊಂದಿತ್ತು.

ನಿಜಾಂ ಅವರ ಆಳ್ವಿಕೆಯ ಕಾಲದಲ್ಲಿ ಬ್ರಿಟಿಷರ ಹಸ್ತಕ್ಷೇಪಕ್ಕೊಳಗಾದ ಸಂಸ್ಥಾನಗಳಲ್ಲಿ "ಸುರಪುರ ಸಂಸ್ಥಾನ"ವು ಒಂದು. ಆರಂಭದಲ್ಲಿ ಸುರಪುರ ಸಂಸ್ಥಾನವು ಕೂಡಾ ನಿಜಾಂ ಅವರ ಆಳ್ವಿಕೆಗೆ ಒಳಪಟ್ಟಿತ್ತು. ಇದರ ಪರಿಣಾಮವಾಗಿ ಈ ಸಂಸ್ಥಾನದಲ್ಲಿ ಬ್ರಿಟಿಷರ ಆಡಳಿತ ನೆಲೆಯೂರಿತು. ಬ್ರಿಟಿಷರ ಆಳ್ವಿಕೆಯ ಸಮಯದಲ್ಲಿ ಸುರಪುರ ಸಂಸ್ಥಾನದಲ್ಲಿ ಆರ್ಥಿಕ ಪರಿಸ್ಥಿತಿ ಹದಗೆಟ್ಟಿತು. ಈ ಆರ್ಥಿಕ ಪರಿಸ್ಥಿತಿಯನ್ನು ಪರಿಶೀಲಿಸಿ ವರದಿ ಮಾಡಲು ಬ್ರಿಟಿಷ್ ಸರ್ಕಾರ ೧೮೪೨ರಲ್ಲಿ ಕ್ಯಾಪ್ಟನ್ ಗ್ರಿಸ್ಲೇ ಎಂಬ ಅಧಿಕಾರಿಯನ್ನು ನೇಮಿಸಿದರು. ಈತನು ನಿಜಾಂ ಸರ್ಕಾರದ ಪರವಹಿಸಿ ಸುರಪುರದ ಪರಗಣೆಯನ್ನು ಸಂಸ್ಥಾನಿಕರಿಂದ ವಸೂಲಿ ಮಾಡಿ ನಿಜಾಂ ಸರ್ಕಾರಕ್ಕೆ ಕೊಡಬೇಕೆಂದು ತನ್ನ ವರದಿಯಲ್ಲಿ ಸೂಚಿಸಿದನು (ಪಾಟೀಲ್ ೧೯೯೭;೮೧). ಕ್ಯಾಪ್ಟನ್ ಗ್ರಿಸ್ಲೆ ಇರುವಾಗಲೇ ಸುರಪುರದ ಅರಸ ಕೃಷ್ಣಪ್ಪನಾಯಕ ಮರಣ ಹೊಂದಿದನು. ಈತನ ನಂತರ ೭ ವರ್ಷದ ನಾಲ್ವಡಿ ವೆಂಕಟಪ್ಪನಾಯಕರು ೧೮೪೨ರಲ್ಲಿ ಅಧಿಕಾರಕ್ಕೆ ಬಂದನು. ನಾಲ್ವಡಿ ವೆಂಕಟಪ್ಪನಾಯಕನು ಅಪ್ರಾಪ್ತವಯಸ್ಕನಾಗಿದ್ದರಿಂದ ಈತನ ತಾಯಿ ಈಶ್ವರಮ್ಮ ಆಡಳಿತ ನಡೆಸಿದಳು. ಬ್ರಿಟಷರು ಹೈದರಾಬಾದಿನ ನಿಜಾಂ ಅವರ ಬೆಂಬಲ ಪಡೆದು ಕ್ಯಾಪ್ಟನ್ ಗ್ರಿಸ್ಲೇಯ ಬದಲು ಕ್ಯಾಪ್ಟನ್ ಮೆಡೋಸ್ ಟೇಲರನನ್ನು ರಾಜಕೀಯ ಪ್ರತಿನಿಧಿಯಾಗಿ ಬ್ರಿಟಿಷ್ ಸರ್ಕಾರ ೧೮೪೩ರಲ್ಲಿ ನೇಮಕ ಮಾಡಿತು. ಮೆಡೋಸ ಟೇಲರನು ಆಡಳಿತ ಸುಧಾರಣೆಗೊಳಿಸಿ ಸಂಸ್ಥಾನದ ರಾಜಕೀಯ ಪರಿಸ್ಥಿತಿಯನ್ನು ಉತ್ತಮ ಪಡಿಸಿದನು. ಹೀಗೆ ಸುರಪುರ ಸಂಸ್ಥಾನದ ನಾಯಕರು ಸ್ವತಂತ್ರ ಅಧಿಕಾರವನ್ನು ಹೊಂದದೇ ಕೇವಲ ಬ್ರಿಟಿಷರ ಅಧೀನರಾಗಿ ಮುಂದುವರೆಯಬೇಕಾಯಿತು. ೧೮೫೩ರಲ್ಲಿ ನಾಲ್ವಡಿ ವೆಂಕಟಪ್ಪನಾಯಕನು ಪ್ರಾಪ್ತವಯಸ್ಸಿಗೆ ಬಂದ ನಂತರ ಮೆಡೋಸ ಟೇಲರನು ವೆಂಕಟಪ್ಪನಾಯಕನಿಗೆ ಅಧಿಕಾರ ಮರಳಿ ಒದಗಿಸಿಕೊಟ್ಟರು. ಸುರಪುರ ಸಂಸ್ಥಾನದಲ್ಲಿ ಅನಗತ್ಯವಾಗಿ ಹಸ್ತಕ್ಷೇಪ ಮಾಡುತ್ತಿದ್ದ ಬ್ರಿಟಿಷರನ್ನು ಎದುರಿಸಲು ನಾಲ್ವಡಿ ವೆಂಕಟಪ್ಪನಾಯಕ ಸಿದ್ಧರಾದರು. ತನ್ನ ಸಂಸ್ಥಾನದ ರಕ್ಷಣೆಗೆ ಅವಶ್ಯಕವಾದ ಸೇನೆಯನ್ನು ಅರಬ್ಬರಿಂದ ಮತ್ತು ರೋಹಿಲರಿಂದ ಸಿದ್ಧಗೊಳಿಸಿದರು. ಬ್ರಿಟಿಷರ ನಿರಂಕುಶ ವರ್ತನೆ ಮತ್ತು ಹಸ್ತಕ್ಷೇಪದ ನೀತಿಯಿಂದ ರೋಸಿ ಹೋದ ರಾಜಾ ನಾಲ್ವಡಿ ವೆಂಕಟಪ್ಪನಾಯಕನಿಗೆ ನೆರೆಯ ಸಂಸ್ಥಾನಗಳ ಅರಸರು ಸಹಾಯ ಮಾಡಿದರು. ಈ ಎಲ್ಲವುಗಳ ಪರಿಣಾಮವಾಗಿ ೧೮೫೭ರಲ್ಲಿ ರಾಜಾ ನಾಲ್ವಡಿ ವೆಂಕಟಪ್ಪನಾಯಕ ಬ್ರಿಟಿಷರ ವಿರುದ್ಧ ದಂಗೆಯೆದ್ದರು. ಇದು ವಿದೇಶಿಯರ ವಿರುದ್ಧ ಕೈಗೊಂಡ ಹೋರಾಟವಾಗಿದ್ದರಿಂದ ಇದನ್ನು "ಸಿಪಾಯಿದಂಗೆ"/"ಪ್ರಥಮ ಸ್ವಾತಂತ್ರ್ಯ ಸಂಗ್ರಾಮ" ಎಂದು ಕರೆಯುತ್ತಾರೆ.

ರಾಷ್ಟ್ರೀಯ ಪರಿಕಲ್ಪನೆಯ ಜೊತೆಗೆ ಕ್ರಾಂತಿಯ ನೆಲೆಯಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ದೇಶಿ ಅರಸರು ಹಚ್ಚಿದರು. ಸ್ವಧರ್ಮ ಮತ್ತು ಸ್ವದೇಶದ ರಕ್ಷಣೆಗಾಗಿ ಅವರು ನಡೆಸಿದ ಈ ಹೋರಾಟ ಅವಿಸ್ಮರಣೀಯವಾಗಿದೆ ಎಂದು ಬರಗೂರು ರಾಮಚಂದ್ರ ಅವರು ಹೇಳುತ್ತಾರೆ(ಬರಗೂರ ೨೦೦೨;೧೧೫). ಈ ಹೋರಾಟವು ಮುಂದೆ ಭಾರತದ ಸ್ವಾತಂತ್ರ್ಯಕ್ಕೆ ಮತ್ತು ಹೈದರಾಬಾದ ವಿಮೋಚನಾ ಹೋರಾಟಕ್ಕೆ ಪ್ರೇರಣೆ ನೀಡಿತು. ಹೈದರಾಬಾದನ ನಿಜಾಂ ಮತ್ತು ಅವರ ಮುಖ್ಯಮಂತ್ರಿಯಾಗಿದ್ದ ಸಾಲಾರಜಂಗ ಅವರು ಬ್ರಿಟಿಷರ ವಿರುದ್ಧ ದೇಶಿಯ ಸಂಸ್ಥಾನಗಳು ನಡೆಸಿದ ಈ ಹೋರಾಟವನ್ನು ಹತ್ತಿಕ್ಕಲು ಸಹಾಯ ಮಾಡಿದರು. ಒಂದು ವೇಳೆ ಸಾಲಾರಜಂಗ ಅವರು ಈ ದಂಗೆಯನ್ನು ಹತ್ತಿಕ್ಕದೇ ಹೋಗಿದ್ದರೆ "ಹೈದರಾಬಾದ ಸಂಸ್ಥಾನ ೧೯೪೮ರ ಬದಲು ೧೮೫೭ರಲ್ಲಿಯೇ ಭಾರತದಲ್ಲಿಯೇ ವಿಲೀನವಾಗುತ್ತಿತ್ತು" ಎಂದು ಹೈದರಾಬಾದಿನ ಸೇನಾ ದಂಡನಾಯಕ ಎಲ್. ಎಂಡ್ರೂಸ್‌ರು ಅಭಿಪ್ರಾಯಪಟ್ಟಿದ್ದಾರೆ(ಪೋಲಿಸ್ ಪಾಟೀಲ್ ೨೦೦೨;೨೨).

"ಸಿಪಾಯಿ ದಂಗೆ"ಯಲ್ಲಿ ಸುರಪುರದ ದೊರೆ ನಾಲ್ವಡಿ ವೆಂಕಟಪ್ಪನಾಯಕರು ಬ್ರಿಟಿಷರ ಕುಟಿಲ ನೀತಿಯಿಂದ ಸೋಲನ್ನು ಅನುಭವಿಸಿದರು. ಇವರ ನಂತರ ಸುರಪುರ ನಿಜಾಂ ಅವರ ಆಳ್ವಿಕೆಗೆ ಒಳಗಾಯಿತು. ನಿಜಾಂ ಅವರ ಅಧೀನದಲ್ಲಿ ಹೋದ ನಂತರ ಸುರಪುರವು "ಶೋರಾಪುರ"ವಾಗಿ ಮಾರ್ಪಟ್ಟಿತು. ನಿಜಾಂ ಸಂಸ್ಥಾನದಲ್ಲಿ ಸಾಲಾರಜಂಗನು ಕೈಗೊಂಡ ಆಡಳಿತ ಸುಧಾರಣೆಗಳಲ್ಲಿ "ಜಿಲ್ಲಾ ಬಂಧಿ" ಮುಖ್ಯವಾದದ್ದು. ಈ ಸಂದರ್ಭದಲ್ಲಿ ಗುಲಬರ್ಗಾವು ಸುರಪುರ ಜಿಲ್ಲೆಯ ಒಂದು ಭಾಗವಾಯಿತು. ಆರಂಭದಲ್ಲಿ ಸುರಪುರ ಜಿಲ್ಲೆ ೫ ತಾಲೂಕುಗಳನ್ನು ಒಳಗೊಂಡಿತ್ತು. ಆಡಳಿತಕ್ಕನುಗುಣವಾಗಿ ೧೮೭೩ರಲ್ಲಿ ಸುರಪುರ ಜಿಲ್ಲೆಯನ್ನು ಗುಲಬರ್ಗಾ ಮತ್ತು ಸುರಪುರ ಜಿಲ್ಲೆಗಳಾಗಿ ವಿಭಾಗಿಸಲಾಯಿತು (ಪಾಟೀಲ್ ೧೯೯೭:೬). ೧೯೦೧ರಲ್ಲಿ ಸುರಪುರ ಕೇವಲ ತಾಲೂಕಾಗಿ ಉಳಿಯಿತು (ರೇವಣಸಿದ್ದಯ್ಯ ೧೯೮೬:೧೫). ನಂತರ ಸುರಪುರವನ್ನು ಗುಲಬರ್ಗಾ ಜಿಲ್ಲೆಗೆ ಸೇರಿಸಲಾಯಿತು.

೧೯೧೧ರಲ್ಲಿ ಸಂಸ್ಥಾನಕ್ಕೆ ಮೀರ ಉಸ್ಮಾನ ಅಲೀಖಾನ ಅವರು ಅಧಿಕಾರಕ್ಕೆ ಬಂದರು. ಇವರು ಸ್ವತಂತ್ರವಾದ "ಮುಸ್ಲಿಂ ರಾಜ್ಯ"ವನ್ನು ಸ್ಥಾಪಿಸುವ ಉದ್ದೇಶ ಹೊಂದಿದ ಪರಿಣಾಮವಾಗಿ ಇವರ ಕಾಲದಲ್ಲಿ "ದೀನದಾರ್ ಮತ್ತು ಇತ್ತೇಹಾದ" ಎಂಬ ಮತಾಂತರದ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಹೈದರಾಬಾದ ಸಂಸ್ಥಾನದಲ್ಲಿ ಹಿಂದೂಗಳು ಬಹುಸಂಖ್ಯಾತರಾಗಿದ್ದರು ಮತ್ತು ಮುಸ್ಲಿಂರು ಅಲ್ಪಸಂಖ್ಯಾತರಾಗಿದ್ದರು. ಆದ್ದರಿಂದ ಮುಸ್ಲಿಂರ ಸಂಖ್ಯೆಯನ್ನು ಹೆಚ್ಚಿಸಲು ಮತಾಂತರದ ಪದ್ಧತಿಯನ್ನು ಜಾರಿಗೊಳಿಸಿದರು ಎಂಬುದು ಜನಜನಿತ ಅಭಿಪ್ರಾಯವಾಗಿದೆ. ಇದಕ್ಕೆ ಪೂರಕವೆಂಬಂತೆ "ಮುಸ್ಲಿಂರು ಒಂದು ರಾಷ್ಟ್ರ ಅವರಿಗೆ ಅವರದೇ ಆದಂತಹ ಮಾತೃಭೂಮಿ ಹಾಗೂ ಅವರದೇ ಆದ ರಾಜ್ಯಭಾರ ಇರಬೇಕು" ಎಂಬ ದ್ವಿರಾಷ್ಟ್ರ ಸಿದ್ಧಾಂತಕ್ಕೆ ಪ್ರೇರಣೆ ನೀಡಿದ ಪಾಕಿಸ್ತಾನದ ಪಿತಾಮಹ ಮಹಮ್ಮದ ಅಲೀಜಿನ್ನಾ ಅವರ ಮಾತುಗಳಿಂದ ಹೈದರಾಬಾದಿನ ನಿಜಾಂ ಮೀರ ಉಸ್ಮಾನ ಅಲೀಖಾನ ಪ್ರೇರಣೆ ಹೊಂದಿದರು (ಮುಜುಂದಾರ ೧೯೪೮:೭೬). ಈ ಎಲ್ಲವುಗಳ ಮಧ್ಯ ಬ್ರಿಟಿಷರು ಭಾರತದಿಂದ ಹೊರಹೋಗುವ ಮೊದಲು 'ಯಥಾಸ್ಥಿತಿ' ಒಪ್ಪಂದವನ್ನು ಜಾರಿಯಲ್ಲಿಟ್ಟು

ಹೋಗಲು ನಿಶ್ಚಿಯಿಸಿದರು. ಆದೇನೆಂದರೆ ಹೈದರಾಬಾದ ಸಂಸ್ಥಾನ ಸ್ವತಂತ್ರ ಭಾರತದಲ್ಲಾದರೂ ಸೇರಬಹುದು, ಪಾಕಿಸ್ತಾನಕ್ಕಾದರೂ ಸೇರಬಹುದು ಅಲ್ಲದೇ ಸ್ವತಂತ್ರವಾಗಿ ಇರಬಹುದು ಎಂದು ಹೇಳಿದರು. ೧೫ ಆಗಸ್ಟ ೧೯೪೭ ರಂದು ಭಾರತ ಬ್ರಿಟಿಷರ ಆಳ್ವಿಕೆಯಿಂದ ಮುಕ್ತಿ ಪಡೆದು ಸ್ವತಂತ್ರವಾಯಿತು. ಸ್ವತಂತ್ರ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ದೇಶಿಯ ಸಂಸ್ಥಾನಗಳು ಸ್ವತಂತ್ರ ಭಾರತದಲ್ಲಿ ವಿಲೀನವಾದವು. ಆದರೆ ಹೈದರಾಬಾದ ಸಂಸ್ಥಾನದ ನಿಜಾಂ ಮೀರ ಉಸ್ಮಾನ ಅಲೀಖಾನ ಭಾರತದೊಂದಿಗೆ ವಿಲೀನವಾಗದೇ ಸ್ವತಂತ್ರ ರಾಜ್ಯವನ್ನು ಸ್ಥಾಪಿಸುವ ಇಚ್ಚೆಯನ್ನು ವ್ಯಕ್ತಪಡಿಸಿದನು. ಆದರೆ ತನ್ನ ಆಳ್ವಿಕೆಗೊಳಪಟ್ಟ ಪ್ರಾಂತ್ಯಗಳಲ್ಲಿ ಭಾರತದ ರಾಷ್ಟ್ರಧ್ವಜವನ್ನು ಹಾರಿಸಬಾರದೆಂದು ನಿಜಾಂ ಆಜ್ಞೆಯನ್ನು ಹೊರಡಿಸಿದರು (ಪೋಲೀಸ ಪಾಟೀಲ್ ೨೦೦೨; ೫೫), ಆದರೂ ದೇಶದ ಬಗ್ಗೆ ಅಭಿಮಾನ ಹೊಂದಿದ್ದ ಸುರುಪುರ ಜನತೆ ಭಾರತ ಸ್ವತಂತ್ರವಾದ ದಿನದಂದು ರಾಷ್ಟ್ರಧ್ವಜವನ್ನು ಹಾರಿಸಿದರು. ಇದರ ಜೊತೆಗೆ ರಾಷ್ಟ್ರಧ್ವಜ ಮೆರವಣಿಗೆ ಮಾಡುವುದರ ಮೂಲಕ ನಿಜಾಂ ಅನರ ಕೋಪಕ್ಕೂ ಗುರಿಯಾದರು. ಈ ಕಾರ್ಯಚಟುವಟಿಕೆಗಳಿಂದ ಪೋಲೀಸರು ಈ ಮೆರವಣಿಗೆಯಲ್ಲಿ ಭಾಗವಹಿಸಿದವರನ್ನು ಸೆರೆಮನೆಗೆ ಹಾಕಿದರು.

ಭಾರತ ಸ್ವತಂತ್ರ ಪಡೆದಂದಿನಿಂದ ನಿಜಾಂ ಅವರ ದಬ್ಬಾಳಿಕೆ ಅವರ ಅಧೀನಕ್ಕೊಳಪಟ್ಟ ಪ್ರಾಂತ್ಯಗಳ ಜನರ ಮೇಲೆ ಹೆಚ್ಚಾಯಿತು. ನಿಜಾಂ ಅವರ ಸರ್ವಾಧಿಕಾರವನ್ನು ಖಂಡಿಸಿ ಜನರು ಅವರ ವಿರುದ್ಧ ಉಗ್ರ ಸ್ವರೂಪದ ಹೋರಾಟವನ್ನು ಕೈಗೊಂಡರು ಸುರಪುರ ಪ್ರಾಂತ್ಯದ ಜನರು ರಾಜಾ ವೆಂಕಟಪ್ಪ ನಾಯಕ ಅವರ ನಾಯಕತ್ವದಲ್ಲಿ ತಾಳಿಕೋಟೆಯಲ್ಲಿ ಶಿಬಿರವನ್ನು ಸ್ಥಾಪಿಸಿದರು. ಅಪ್ಪಾರಾವ ವಕೀಲ, ವೆಂಕನಗೌಡ ವಿರುಪಾಕ್ಷಪ್ಪಗೌಡ ಮತ್ತು ಮಹಾದೇವಪ್ಪ ಹೂಗಾರ ಇವರೆಲ್ಲರು ಗಡಿಶಿಬಿರಗಳನ್ನು ಸ್ಥಾಪಿಸುವದರ ಮೂಲಕ ನಿಜಾಂ ಅವರ ಖಾಸಗೀ ಸೈನ್ಯವಾದ ರಜಾಕಾರರೊಂದಿಗೆ ಉಗ್ರ ಚಟುವಟಿಕೆಗಳನ್ನು ಕೈಗೊಂಡರು. ಆರ್ಯ ಸಮಾಜ ಮತ್ತು "ರಾಜ್ಯ ಕಾಂಗ್ರೆಸ" ಈ ಸಂಘ ಸಂಸ್ಥೆಗಳ ಮುಖಂಡರು ಮತ್ತು ಗಡಿಶಿಬಿರಗಳ ನಾಯಕರು ಇವರೆಲ್ಲರು ಹೋರಾಡಿದ ಫಲವಾಗಿ "ಪೋಲೀಸ ಕಾರ್ಯಾಚರಣೆ" ಆರಂಭವಾಯಿತು. ಹೀಗೆ ಸರ್ದಾರ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ ನಿಜಾಂ ಸರ್ಕಾರದ ನಿರಂಕುಶ ಸಾರ್ವಭೌಮತ್ವವನ್ನು ಕೊನೆಗಾಣಿಸಲು "ಪೋಲೀಸ ಕಾರ್ಯಾಚರಣೆ"ಯು ಆರಭವಾಯಿತು. ಈ "ಪೋಲೀಸ ಕಾರ್ಯಾಚರಣೆ"ಯ ೧೩ ಸೆಪ್ಟೆಂಬರ ೧೯೪೮ ರಲ್ಲಿ ಆರಂಭವಾಗಿ ೧೮ ಸೆಪ್ಟೆಂಬರ ೧೯೪೮ ರವರೆಗೆ ಜರುಗಿತು. ೫ ದಿನಗಳವರೆಗೆ ನಡೆದ ಈ ಕಾರ್ಯಾಚರಣೆಯಲ್ಲಿ ರಜಾಕಾರರು ಹೈದರಾಬಾದ ಸಂಸ್ಥಾನದಿಂದ ಪಲಾಯನ ಮಾಡಿದರು. ಹೈದರಾಬಾದ ನಿಜಾಂ ಮೀರ್ ಉಸ್ಮಾನ ಅಲೀಖಾನ್ ಅವರು ತಮ್ಮ ಮಂತ್ರಿ ಮಂಡಲದ ಸದಸ್ಯರೊಂದಿಗೆ ಭಾರತ ಸರ್ಕಾರಕ್ಕೆ ಶರಣಾದರು. ಹೀಗೆ ೨೨೫ ವರ್ಷಗಳ ವರೆಗೆ ಆಳಿದ ನಿಜಾಂ ಸಂಸ್ಥಾನದ ಆಳ್ವಿಕೆ ೧೮ ಸೆಪ್ಟೆಂಬರ ೧೯೪೮ ರಂದು ಕೊನೆಗೊಂಡಿತು.

ಗುಲಬರ್ಗಾ ಜಿಲ್ಲೆಯ ತಾಲೂಕುಗಳಲ್ಲಿ ಪ್ರಮುಖವಾದುದು ಸುರುಪುರ. ಗುಡ್ಡಗಳಿಂದ ಆವೃತ್ತವಾಗಿರುವ ಈ ಪ್ರದೇಶವು ಪ್ರಾಚೀನ ಕಾಲದಿಂದಲೂ ಮತ್ತು ಐತಿಹಾಸಿಕ ದೃಷ್ಟಿಯಿಂದಲೂ ಬಹಳ ಮಹತ್ವವನ್ನು ಪಡೆದಿದೆ. ಪ್ರಾಗೈತಿಹಾಸಿಕ/ಇತಿಹಾಸ ಪೂರ್ವದ ಕಾಲದಿಂದಲೂ ಈ ಪ್ರದೇಶದ ಸುತ್ತಮುತ್ತ ಅನೇಕ ಪ್ರಾಚೀನ ಅವಶೇಷಗಳು ದೊರಕಿವೆ. ದೊರಕಿರುವ ಈ ಅವಶೇಷಗಳು ಈ ಪ್ರದೇಶದಲ್ಲಿ ಇತಿಹಾಸಪೂರ್ವದ ಜನವಸತಿ ಇತ್ತೆಂಬುದಕ್ಕೆ ಮಾಹಿತಿ ನೀಡುತ್ತವೆ. ಈ ಪ್ರದೇಶವನ್ನು ಆಳಿದ ಅನೇಕ ರಾಜಮನೆತನಗಳಲ್ಲಿ 'ಸುರಪುರ ಸಂಸ್ಥಾನ'ವು ಒಂದು. ಸುರಪುರವನ್ನು ಗೋಸಲ ವಂಶದ ನಾಯಕರು ಕ್ರಿ.ಶ.೧೬೩೫ ರಿಂದ ೧೮೫೭ರವರೆಗೆ ಸುಮಾರು ೨೨೨ ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ.

ಸುರಪುರದಲ್ಲಿ ಕಂಡುಬರುವ ರಾಜನಕೋಳೂರು, ಹಗರಟಿಗಿ, ಹುಣಸಗಿ, ಬೂದಿಹಾಳ ಮುಂತಾದ ಪ್ರದೇಶಗಳಲ್ಲಿ ಪ್ರಾಚೀನ ಕಾಲದ ಕುರುಹುಗಳು ಕಂಡುಬಂದಿವೆ ಎಂಬುದು ಕೆ.ಪೆದ್ದಯ್ಯನವರ ಸಂಶೋಧನೆಯಿಂದ ತಿಳಿದುಬಂದಿದೆ (ಕೃಷ್ಣ, ೧೯೯೬:೧೫). ಅದರಂತೆ ಕೆಂಭಾವಿ, ಏವೂರ, ಹಗರಟಗೆ, ಸಗರ ಈ ಎಲ್ಲ ಪ್ರದೇಶಗಳು ವಿವಿಧ ರಾಜಮನೆತನಗಳ ಆಡಳಿತ ಘಟಕಗಳಾಗಿದ್ದವು ಎಂಬುದನ್ನು ತಿಳಿಸುತ್ತವೆ. ಸುರಪುರ ಪ್ರದೇಶದ ವ್ಯಾಪ್ತಿಯಲ್ಲಿ ಕೇವಲ ಪ್ರಾಚೀನ ಕಾಲದ ಕುರುಹುಗಳಲ್ಲದೆ ಧಾರ್ಮಿಕ ಸಾಮರಸ್ಯವನ್ನು ಮತ್ತು ಸಮನ್ವಯತೆಯನ್ನು ಎತ್ತಿಹಿಡಿಯುವ ಪ್ರೇಕ್ಷಣೀಯ ಸ್ಥಳಗಳಾಗಿ ಕಂಡುಬರುತ್ತವೆ. ಅವುಗಳಲ್ಲಿ ತಿಂಥಣಿಯ ಮೌನೇಶ್ವರ ಮತ್ತು ಕೊಡೇಕಲ್ ಬಸವಣ್ಣ ಮುಖ್ಯವಾದವು. ಇವು ಹಿಂದು-ಮುಸ್ಲಿಂ ಧರ್ಮದ ಸಮನ್ವಯತೆಯನ್ನು ಸಾರುವ ಕುರುಹುಗಳಾಗಿವೆ ಎಂಬುದು ಜನಜನಿತ ಅಭಿಪ್ರಾಯವಾಗಿದೆ.

ಸುರಪುರ ಪ್ರದೇಶವು ರಾಜಕೀಯವಾಗಿ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯಿಂದ ನಿಜಾಂ ಅವರ ಆಳ್ವಿಕೆಯವರೆಗೂ ಒಳಪಟ್ಟಿತ್ತು. ಸುರಪುರವು ೧೮೫೭ರ "ಸಿಪಾಯಿ ದಂಗೆಯಿಂದ" ಹೆಚ್ಚಿನ ಮಹತ್ವವನ್ನು ಪಡೆಯಿತು. ೧೮೫೭ರಲ್ಲಿ ಸುರಪುರದ ದೊರೆ ರಾಜಾ ವೆಂಕಟಪ್ಪನಾಯಕನು ತೋರಿದ ದಿಟ್ಟ ಹೋರಾಟವು ಕರ್ನಾಟಕ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ಈ ಹೋರಾಟವು ಮುಂದೆ ಸುರಪುರದಲ್ಲಿ ನಡೆದ ಹೋರಾಟಕ್ಕೆ ಮತ್ತು "ಹೈದರಾಬಾದ ವಿಮೋಚನಾ ಹೋರಾಟಕ್ಕೆ" ಪ್ರೇರಣೆಯಾಗಿದೆ.

ಸುರಪುರ ಪ್ರದೇಶವು ಕವಿಗಳ ವಚನಕಾರರ ನೆಲೆವೀಡಾಗಿದೆ. ಮುದನೂರಿನ ದಾಸಿಮಯ್ಯನು ಆದ್ಯ ವಚನಕಾರನೆಂದು ಪ್ರಸಿದ್ಧನಾಗಿದ್ದಾನೆ. ಈತನು ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯವನ್ನು

ವಚನಗಳ ಮೂಲಕ ವಿಡಂಬಿಸಿದ್ದಾನೆ. ಕೆಂಭಾವಿಯ ಭೋಗಣ್ಣ ಎಂಬ ಶಿವಶರಣನು ಜಾತೀಯತೆಯನ್ನು ವಿರೋಧಿಸಿ ರಾಜತ್ವವನ್ನು ಪ್ರತಿಭಟಿಸಿದನು. ಸಾಮಾಜಿಕ ಪರಿವರ್ತನೆಯ ಕಾಳಜಿಯುಳ್ಳವನಾಗಿದ್ದ ಭೋಗಣ್ಣನು, ಈತನ ಕುರಿತಂತೆ ಕೆಂಭಾವಿಯಲ್ಲಿ ಕೆಲವೊಂದು ಸ್ಮಾರಕಗಳನ್ನು ಈಗಲೂ ಗುರುತಿಸಬಹುದು. ಅಸ್ಪೃಶ್ಯರ ಪರವಾಗಿ ಹೋರಾಡಿದ ಈತನ ಕಾಲದಲ್ಲಿ ಸಮಾಜೋಧಾರ್ಮಿಕ ಆಂದೋಲನವು ಅಸ್ಪೃಶ್ಯರನ್ನು ಶಿವಭಕ್ತರನ್ನಾಗಿ ಪರಿವರ್ತಿಸಿತಲ್ಲದೆ ಅವರಲ್ಲಿ ಸಾಮಾಜಿಕ ಸ್ಥಾನವನ್ನು ಕಲ್ಪಿಸಿಕೊಟ್ಟಿತು. ಕವಿಲಕ್ಷ್ಮೀಶ, ಕೊಡೇಕಲ್ಲ ಬಸವಣ್ಣ, ತಿಂಥಿಣಿ ಮೌನೇಶ್ವರ ಇವುರುಗಳು ಇದೇ ಭಾಗದವರಾಗಿದ್ದರು. ಈ ಪ್ರಮುಖ ಶರಣರಲ್ಲದೆ ಸುರಪುರದಲ್ಲಿ ಸಮಗಾರ ಹರಳಯ್ಯ, ಹಾವಿನಾಳದ ಕಲ್ಲಯ್ಯ, ಕಕ್ಕೇರಿಯ ಡೋಹರ ಕಕ್ಕಯ್ಯರು ಕೂಡ ಈ ತಾಲೂಕಿನಲ್ಲಿದ್ದರೆಂದು ತಿಳಿದುಬರುತ್ತದೆ. ಕವಿ ಲಕ್ಷ್ಮೀಶನು ಸುರಪುರ ತಾಲೂಕಿನ ದೇವಪುರದವನು. 'ಸೋದರ ಹತ್ಯೆಯಾದುದ್ದಕ್ಕಾಗಿ ವ್ಯಥೆ ಪಡುತ್ತಿದ್ದ ಪಾಂಡವರು ಮಾಡಿದ ಅಶ್ವಮೇಧವನ್ನು' ಜೈಮಿನಿ ಭಾರತಕ್ಕೆ ಕಥಾವಸ್ತುವನ್ನಾಗಿಟ್ಟುಕೊಂಡನು. ತನ್ನ ಕಾವ್ಯ ರಚಿಸುವಾಗ ಪೂರ್ಣವಾಗಿ ಸಂಸ್ಕೃತದ ಜೈಮಿನಿ ಭಾರತವನ್ನು ಮೂಲವಾಗಿಟ್ಟುಕೊಂಡಿದ್ದಾನ. ೧೫ನೇ ಶತಮಾನದ ಪ್ರಮುಖ ಶರಣ ಕೊಡೇಕಲ್ ಬಸವಣ್ಣನಾಗಿದ್ದಾನೆ. ಬಸವಣ್ಣನು ಶರಣ ಸಾಹಿತ್ಯ-ಸಂಸ್ಕೃತಿಯ ಜೊತೆ ಜಾತ್ಯಾತೀತ ಸಮಾಜದ ಅಪೇಕ್ಷೆ, ಹಿಂದೂ-ಮುಸ್ಲಿಂ ಧರ್ಮ, ಸಂಸ್ಕೃತಿಯನ್ನು ಸಮರಸದಿಂದ ಕಂಡಿದ್ದಾರೆ.

> “ವಂದು ಪಾದದಲ್ಲಿ ಕಂಸಿಯು ಮ
> ತ್ತೊಂದು ಪಾದದಲ್ಲಿ ರಕ್ಷಿಯು
> ಹೊಂದಿ ದೇಹದಲ್ಲಿ ಚರ್ಮಾಂಬರವ ತೊಟ್ಟಿರಲು
> ಹಿಂದುವರು ಅವರೊಳಗೆ ಅಲ್ಲವು
> ಬಂದಿಗೆಯ ಮುಸಲ್ಮಾನನಲ್ಲವು
> ಹಿಂದು ಮುಂದು ಉಭಯಸ್ಥಲವನ್ನು ಮೆಟ್ಟಿ ನಡೆವವನು||” (ಕೃಷ್ಣ ೧೯೮೫ ೧೭-೧೮)

ಹೀಗೆ ಹಿಂದೂ-ಮುಸ್ಲಿಂ ಇಬ್ಬರ ಒಂದೊಂದು ಪಾದರಕ್ಷೆಗಳನ್ನು ಹಾಕಿಕೊಳ್ಳುವುದರ ಮೂಲಕ ಭಿನ್ನ ಸಂಸ್ಕೃತಿಯನ್ನು ಮತ್ತು ಭಿನ್ನ ಮಾರ್ಗಗಳನ್ನು ಒಂದೇ ಮಾರ್ಗದಲ್ಲಿ ತರುವ ಉದ್ದೇಶ ಬಸವಣ್ಣನವರದಾಗಿತ್ತು. ಕೊಡೇಕಲ್ ಬಸವಣ್ಣನು ಧರ್ಮ ಸಮಾನತೆಯ ದೃಷ್ಟಿ ಹೊಂದಿದ್ದನು. ಈತನ ಮಹತ್ವದ ಕೃತಿ 'ಕಾಲಜ್ಞಾನ'. ಮುಸ್ಲಿಂ ದೊರೆಗಳ ಕೋಪದಿಂದಾಗಿ ತನ್ನ ಶರಣ ಸಾಹಿತ್ಯ ಕೃತಿ ನಾಶವಾಗದಿರಲೆಂದು 'ಹನ್ನೊಂದು ಅಮರಗನ್ನಡ ಲಿಪಿ'ಯಂತಹ ಸಾಂಕೇತಿಕ ಭಾಷೆಯಲ್ಲಿ ದಾಖಲಿಸಿದನು.

**ತಿಂಥಣಿಯ ಮೌನೇಶ್ವರ :** ತಿಂಥಣಿಯ ಮೌನೇಶ್ವರರು ಸುರಪುರ ತಾಲೂಕಿನ ದೇವರ ಗೋನಾಲದವರು. ೧೭೫೩-೧೭೭೪ರವರೆಗೆ ಆಳಿದ ಸುರಪುರ ದೊರೆ ಪಾಮನಾಯಕನ ಮಂತ್ರಿಯಾಗಿದ್ದ ನಿಷ್ಠಿ ವೀರಪ್ಪನು ಗೋನಾಲ ಮತ್ತು ತಿಂಥಣಿ ಎಂಬ ಸ್ಥಳದಲ್ಲಿ ದೇವಾಲಯವನ್ನು ಕಟ್ಟಿಸಿದ್ದಾರೆ. ಮೌನೇಶ್ವರರು ತಮ್ಮ ವಚನಗಳಿಗೆ 'ಬಸವಣ್ಣ' ಎಂಬ ಅಂಕಿತ ಬಳಸಿದ್ದಾರೆ. ಇವರು ಕುಲಭೇದಗಳನ್ನು ಇವುಗಳನ್ನು ಪೋಷಿಸುವ ಶಾಸ್ತ್ರಗಳನ್ನು, ಸಂಪ್ರದಾಯಗಳನ್ನು, ಜನರ ಅಜ್ಞಾನವನ್ನು ಅಲ್ಲಗಳೆದಿದ್ದಾರೆ. ಮಾನವರೆಲ್ಲಾ ಒಂದಾಗಿ ಬದುಕಬೇಕೆಂಬ ಸಂದೇಶಸಾರಿದ ಇವರು ನಾನಾ ದೇವತೆಗಳು ಹೇಗೆ ಮನುಜ ನಿರ್ಮಿತವೋ, ಅದರಂತೆ ನಾನಾ ಜಾತಿಗಳು ಮನುಜ ನಿರ್ಮಿತವಾದುದು ಎಂಬ ಸತ್ಯವನ್ನು ತಮ್ಮ ವಚನಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಮೌನೇಶ್ವರರು ಹಿಂದೂ-ಮುಸ್ಲಿಂರಲ್ಲಿ ಐಕ್ಯತೆಯನ್ನು ತರಲು ಶ್ರಮಿಸಿದ್ದಾರೆ. ಹಿಂದೂಗಳಿಗೆ ಮೌನೇಶ್ವರನಾಗಿ, ಮುಸ್ಲಿಂರಿಗೆ ಮೌನದೀನನಾಗಿಯು ಆಗಿದ್ದಾನೆ. ಗೋನಾಲ ಮತ್ತು ತಿಂಥಣಿಯಲ್ಲಿ ಕಟ್ಟಿರುವ ಕಟ್ಟಡವು ಹಿಂದೂ-ಮುಸ್ಲಿಂ ವಾಸ್ತು ಶೈಲಿಯಲ್ಲಿದೆ.

"ಹುಟ್ಟಿದ್ದು ಗೋನಾಲ, ಕುರುಹು ತೋರಿದ್ದು ವರವಿ
ಮೆರೆಯುವುದು ಲಿಂಗನಬಂಡಿ, ಸ್ಥಿರವಾದುದ್ದು ತಿಂಥಣಿ"

ಎಂದು ಮೌನೇಶ್ವರನನ್ನು ಕುರಿತ ಮಾತು ಇನ್ನು ಜನಜನಿತವಾಗಿವೆ (ಪಾಟೀಲ ೨೦೦೦:೮೪).

ಸುರಪುರ ತಾಲೂಕಿನಲ್ಲಿ ಅನೇಕ ಕವಿಗಳು, ಶಿವಶರಣರು, ವಚನಕಾರರು, ಐತಿಹಾಸಿಕ ವ್ಯಕ್ತಿಗಳು ಕಂಡುಬಂದಿದ್ದಾರೆ. ಈ ತಾಲೂಕಿನಲ್ಲಿ ೧೧೦ ಐತಿಹಾಸಿಕ ಪ್ರಸಿದ್ಧವಾದ ಶಾಸನಗಳು ದೊರೆತಿವೆ. ಹೀಗೆ ಪ್ರಾಚೀನ ಕಾಲದ ಅವಶೇಷಗಳು ಮತ್ತು ಪುರಾಣ ಕಾಲದ ಅವಶೇಷಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ೧೮೫೭ರಲ್ಲಿ ಸುರಪುರ ದೊರೆ ರಾಜಾ ವೆಂಕಟಪ್ಪನಾಯಕನು ಪ್ರಥಮಬಾರಿಗೆ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ಘಟನೆ ಇತಿಹಾಸ ಪ್ರಸಿದ್ಧವಾದ ಘಟನೆಯಾಗಿದೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಸುರಪುರದ ಇತಿಹಾಸವು ಅನೇಕ ಸಾಹಿತ್ಯಾಸಕ್ತರ, ಇತಿಹಾಸಕಾರರ ಮತ್ತು ಭೂ ವಿಜ್ಞಾನಿಗಳನ್ನು ಆಕರ್ಷಿಸಿದೆ. ಹೊಸ ಹೊಸ ತರಹದ ಸಂಶೋಧನೆಗಳಿಂದ ಸುರಪುರವು ಇನ್ನು ಐತಿಹಾಸಿಕ ಮಹತ್ವವುಳ್ಳ ಪ್ರದೇಶವಾಗಿ ಕಂಗೊಳಿಸುತ್ತದೆ ಎನ್ನುವ ಮಾತಿನಲ್ಲಿ ಸತ್ಯಾಂಶವಿದೆ.

## ೨.೧. ಭೌಗೋಳಿಕ ಹಿನ್ನೆಲೆ

ಸುರಪುರವು ಗುಲಬರ್ಗಾ ಜಿಲ್ಲೆಯ ದಕ್ಷಿಣ ಭಾಗದಲ್ಲಿದೆ. ಈ ಪ್ರದೇಶವು ಕಲ್ಯಾಣಿ ಚಾಲುಕ್ಯರಿಂದ ಹಿಡಿದು ಸುರಪುರದ ಅರಸರ ಕಾಲದವರೆಗೂ, ಔರಂಗಜೇಬನ ಆಳ್ವಿಕೆಯಿಂದ ಹೈದರಾಬಾದಿನ ನಿಜಾಂನವರೆಗೂ ವಿವಿಧ ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟಿತ್ತು. ಸುರಪುರವನ್ನು (ದೇವತೆಗಳ

ಊರು) ಶೂರರಪುರ ಎಂದು ಕರೆಯುವ ವಾಡಿಕೆ ಇಂದಿಗೂ ಜನರಲ್ಲಿ ಪ್ರಚಲಿತವಿದೆ. ಸುರಪುರವನ್ನು ಶೋರಾಪುರ ಎಂತಲೂ ಕರೆಯುತ್ತಾರೆ. ಸುರಪುರವು ೨೦೧ ಗ್ರಾಮಗಳನ್ನು ಹೊಂದಿ ಎಲ್ಲ ತಾಲೂಕುಗಳಿಗಿಂತ ದೊಡ್ಡದೆನಿಸಿಕೊಂಡಿದೆ. ಸುರಪುರವು ವಿಸ್ತೀರ್ಣದಲ್ಲಿ ೭ನೇ ಸ್ಥಾನವನ್ನು ಹೊಂದಿದೆ. ಇದರ ವಿಸ್ತೀರ್ಣ ೧೮೨೦ ಚದುರ ಕಿಲೋ ಮೀಟರ್ ಇದೆ. ಉತ್ತರ ಅಕ್ಷಾಂಶ ೭೬°೧೮ ರಿಂದ ೭೬°೫೪ ಹಾಗೂ ಪೂರ್ವ ರೇಖಾಂಶ ೧೬°೧೫ ರಿಂದ ೧೬°೪೪ ಇದೆ (ಪಾಟೀಲ್, ೧೯೯೭ : ೪). ಸುರಪುರ ತಾಲೂಕಿನ ಉತ್ತರಕ್ಕೆ ಜೇವರ್ಗಿ ತಾಲೂಕು, ಪೂರ್ವಕ್ಕೆ ಶಹಾಪೂರ ತಾಲೂಕು, ಪಶ್ಚಿಮಕ್ಕೆ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕು ಮತ್ತು ದಕ್ಷಿಣಕ್ಕೆ ಹರಿದು ಹೋಗುವ ಕೃಷ್ಣಾನದಿ ಸುರಪುರವನ್ನು ರಾಯಚೂರು ಜಿಲ್ಲೆಯಿಂದ ಪ್ರತ್ಯೇಕಿಸುತ್ತದೆ(ರೇವಣಸಿದ್ದಯ್ಯ, ೧೯೮೬ : ೪).

ಸುರಪುರದ ಭೌಗೋಳಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಎಂ.ವಿ.ಕೃಷ್ಣರಾವ ಮತ್ತು ಎಂ.ಕೇಶವಭಟ್ಟರ 'ಕರ್ನಾಟಕ ಇತಿಹಾಸ ದರ್ಶನ'(೧೯೭೦) ಕಪಟರಾಳ ಕೃಷ್ಣರಾಯರ 'ಸುರಪುರ ಸಂಸ್ಥಾನದ ಇತಿಹಾಸ'(೧೯೭೭), ಎ.ಕೃಷ್ಣರವರ 'ಸಗರನಾಡಿನ ದರ್ಶನ'(೧೯೮೫), ಆರ್.ರೇವಣ್ಣ ಸಿದ್ದಯ್ಯನವರ 'ಶೋರಾಪುರ ತಾಲೂಕು ದರ್ಶನ'(೧೯೮೬), ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್' (೧೯೯೭), ಎಂ.ಎಸ್.ಪಾಟೀಲರ 'ಕಲ್ಲರಳಿ ಹೂವಾಗಿ'(೨೦೦೦), ಈ ಕೃತಿಗಳ ಜೊತೆಗೆ 'ಜನಗಣತಿ ವರದಿ'(೨೦೦೧), 'ಆಡಳಿತ ವರದಿ'(೨೦೦೧), ಬಿ.ಕೃಷ್ಣಮಾಚಾರ್ಯರ 'ಮರೆಯಲಾಗದ ಸುರಪುರ ರಾಜರ ಚರಿತ್ರೆ'(೨೦೦೩) ಈ ಎಲ್ಲಾ ಗ್ರಂಥಗಳನ್ನು ಅವಲೋಕನೆ ಮಾಡುವುದರ ಮೂಲಕ ಈ ವಿಷಯಕ್ಕೆ ಸಂಬಂಧಿಸಿದಂತೆ ಮಹತ್ವದ ಆಕರಗಳನ್ನು ಬಳಸಿಕೊಳ್ಳಲಾಗಿದೆ.

* * * * *

ಈ ಪ್ರದೇಶದಲ್ಲಿ ಅನೇಕ ರಾಜ ಮನೆತನಗಳು ಆಳ್ವಿಕೆ ಮಾಡಿವೆ. ೧೭೦೭ರಲ್ಲಿ ಪಿತಾಂಬರಿ ಬಹರಿ ಪಿಡ್ಡನಾಯಕನು ಸುರಪುರ ಸಂಸ್ಥಾನವನ್ನು ಸ್ಥಾಪಿಸಿದನು. ಭಾರತದ ಉಪಖಂಡದಲ್ಲಿ ಅದರಲ್ಲೂ ಕರ್ನಾಟಕದ ಬೇರೆ ಬೇರೆ ಪ್ರದೇಶಗಳ ಅಥವಾ ರಾಜ್ಯಗಳ ಉಗಮಕ್ಕೆ ಸಂಬಂಧಿಸಿದ ಜನಪ್ರಿಯ 'ಮೂಲ'ವನ್ನು ಸುರಪುರದಲ್ಲಿಯು ನೋಡಬಹುದು. ಸುರಪುರದ ಸ್ಥಾಪನೆಯ ಸಮಯದಲ್ಲಿ ಪಿತಾಂಬರಿ ಬಹರಿ ಪಿಡ್ಡನಾಯಕನು ತನ್ನ ಗುರು ಗೋಪಣ್ಣನೊಂದಿಗೆ ಹೊರಟಾಗ "ಮೊಲವೇ ನಾಯಿಯನ್ನು ಹಿಡಿಯುವ ದೃಶ್ಯವನ್ನು" ಕಂಡು ಇದು "ಸಂಸ್ಥಾನದ ಸ್ಥಾಪನೆಗೆ ಸೂಕ್ತ ಸ್ಥಳವೆಂದು" ಗುರುತಿಸಿದನು (ಮೂಡಬೂಳ ೨೦೦೧:೧೫).

ಸುರಪುರ ಪ್ರದೇಶವು ಸುತ್ತಲೂ ಗುಡ್ಡಗಳಿಂದ ಆವೃತವಾಗಿರುವುದರಿಂದ ನಿಸರ್ಗದ ದುರ್ಗದಂತೆ ಗೋಚರಿಸುತ್ತದೆ. ಪಿತಾಂಬರಿ ಬಹರಿ ಪಿಡ್ಡನಾಯಕನು ಈ ಸ್ಥಳದ ಮಹತ್ವವನ್ನು ಕಂಡು ತನ್ನ

ರಾಜಧಾನಿಯನ್ನಾಗಿ ಮಾಡಿದ್ದುದು ಅವನ ಜಾಣ್ಮೆಯನ್ನು ತೋರಿಸುತ್ತದೆ ಎಂದು ಕಪಟರಾಳ ಕೃಷ್ಣರಾವ್ ಅವರು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ (ಕಪಟರಾಳ ೧೯೭೭:೭೪).

ಕೃಷ್ಣಾನದಿಯು ಈ ಭಾಗದ ಮುಖ್ಯ ನದಿಯಾಗಿದೆ. ಕೃಷ್ಣಾ ಮೇಲ್ದಂಡೆ ಯೋಜನೆಯ ಮೂಲಕ ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯವಿದೆ. ಜನರು ಕೆರೆ, ಕಾಲುವೆ, ಹಳ್ಳಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಇಲ್ಲಿ ನೀರಾವರಿಯಿರುವುದರಿಂದ ಕೃಷಿಯು ಪ್ರಧಾನವಾದ ಉದ್ಯೋಗವಾಗಿದೆ. ಇಲ್ಲಿ ಮುಂಗಾರು ಬೆಳೆ ಮತ್ತು ಹಿಂಗಾರು ಬೆಳೆ ಹೀಗೆ ಎರಡು ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಕೃಷಿ ಭೂಮಿಯು ಎರೆ ಭೂಮಿ, ಕರ್ಲಿ ಭೂಮಿ, ಕೆಂಪು ಭೂಮಿ, ಉಸುಕು ಮಿಶ್ರಿತ ಭೂಮಿಯಿಂದ ಕೂಡಿದೆ. ಬಿಳಿಜೋಳ, ಹೆಸರು, ಉದ್ದು, ತೊಗರಿ, ಸಜ್ಜೆ, ಗೋಧಿ, ಕುಸುಬೆ, ಸೇಂಗಾ, ಸೂರ್ಯಕಾಂತಿ ಇತ್ತೀಚೆಗೆ ಭತ್ತವನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಾರೆ. ಕುಂಬಾರಿಕೆ, ನೇಕಾರಿಕೆ, ಕಮ್ಮಾರಿಕೆ, ಬಿದರಿನಿಂದ ಬುಟ್ಟಿ ಹೆಣೆಯುವುದು, ನಾರಿನಿಂದ ಹಗ್ಗವನ್ನು ಹೊಸೆಯುವುದು, ಹೈನುಗಾರಿಕೆ ಮುಂತಾದ ಉಪಕುಸುಬುಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

ಸುರಪುರ ತಾಲೂಕಿನಲ್ಲಿ ಒಟ್ಟು ೨೦೧ ಗ್ರಾಮಗಳಿವೆ. ೫ ಹೋಬಳಿಗಳಿವೆ. ಅವುಗಳೆಂದರೆ ಹುಣಸಗಿ, ಕಕ್ಕೇರಾ, ಕೊಡೇಕಲ್, ಕೆಂಭಾವಿ ಮತ್ತು ಸುರಪುರ ಆಗಿವೆ. ಈ ಪ್ರದೇಶದಲ್ಲಿ ಒಟ್ಟು ೬ ಮಳೆ ಮಾಪನ ಕೇಂದ್ರಗಳಿವೆ. ೪೨ ಗ್ರಾಮ ಪಂಚಾಯತಿಗಳಿವೆ. ಪ್ರತಿಯೊಂದು ಗ್ರಾಮಗಳಲ್ಲಿ ಕನ್ನಡ ಮಾಧ್ಯಮದ ಕಿರಿಯ ಪ್ರಾಥಮಿಕ ಶಾಲೆಗಳು, ಹಿರಿಯ ಪ್ರಾಥಮಿಕ ಶಾಲೆಗಳು ಮತ್ತು ಪ್ರೌಢಶಾಲೆಗಳು ಇವೆ. ಸುರಪುರದಲ್ಲಿ ೯ ಕಿರಿಯ ಮಹಾವಿದ್ಯಾಲಯಗಳು, ೩ ಪದವಿ ಮಹಾವಿದ್ಯಾಲಗಳು ಇವೆ. ಅದರಲ್ಲೂ ಸರ್ಕಾರಿ ಶಾಲೆಗಳು, ಖಾಸಗಿ ಶಾಲೆಗಳು, ಅನುದಾನ ರಹಿತ ಶಾಲೆ, ಅನುದಾನ ಸಹಿತ ಶಾಲೆಗಳು ಕಂಡುಬರುತ್ತವೆ. ಈ ಭಾಗದ ಒಟ್ಟು ಸಾಕ್ಷರತಾ ಪ್ರಮಾಣ ೪೮.೪ ಇದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ೩೫ ರಷ್ಟಿದೆ. ಈ ಭಾಗದ ಆಡಳಿತವನ್ನು ತಹಸೀಲ್ದಾರ, ಕ್ಷೇತ್ರಾಭಿವೃದ್ಧಿ ಅಧಿಕಾರಿ, ಗ್ರಾಮಸೇವಕರು, ತಲಾಟಿಯವರು ನೋಡಿಕೊಂಡು ಹೋಗುತ್ತಾರೆ. ೫ ಪೊಲೀಸ್ ಠಾಣೆಗಳನ್ನು ಒಂದು ನ್ಯಾಯಾಲಯವನ್ನು ಸುರಪುರವು ಹೊಂದಿದೆ (ಆಡಳಿತ ವರದಿ, ೨೦೦೧).

ಸುರಪುರ ತಾಲೂಕು ಜನಸಂಖ್ಯೆಯಲ್ಲಿ ಮೂರನೇ ಸ್ಥಾನವನ್ನು ಪಡೆದಿದೆ. ಸುರಪುರ ತಾಲೂಕಿನ ಒಟ್ಟು ಜನಸಂಖ್ಯೆ ೨೦೦೧ರ ಜನಗಣತಿ ಪ್ರಕಾರ ೩,೩೬,೭೫೫ ಇದೆ. ಈ ಜನಸಂಖ್ಯೆಯಲ್ಲಿ ಪುರುಷರ ಸಂಖ್ಯೆ ೧,೭೦,೧೯೨, ಸ್ತ್ರೀಯರ ಸಂಖ್ಯೆ ೧,೬೬,೬೬೩ ಇದೆ. ಸುರಪುರ ನಗರ ಪ್ರದೇಶದ ಒಟ್ಟು ಜನಸಂಖ್ಯೆ ೪೫೦೦೦ ಇದೆ. ಈ ಪ್ರದೇಶದಲ್ಲಿ ಎಲ್ಲ ವರ್ಗದ ಜನರು ಕಂಡುಬರುತ್ತಾರೆ. ಅವರೆಂದರೆ ಬ್ರಾಹ್ಮಣರು, ಕುರುಬರು, ಲಿಂಗಾಯತರು, ಉಪ್ಪಾರರು, ವೈಶ್ಯರು, ಮರಾಠರು, ಮಾರವಾಡಿಗಳು,

ಅಕ್ಕಸಾಲಿಗರು, ರಜಪೂತರು, ಮುಸ್ಲಿಂರು, ಒಡ್ಡರು, ಕ್ರಿಶ್ಚಿಯನ್ನರು, ಜೈನರು ಮತ್ತು ಕೆಳವರ್ಗದ ಜನರು, ದಲಿತರು ಹೀಗೆ ವಿವಿಧ ಜನವರ್ಗದವರು ಕಂಡುಬರುತ್ತಾರೆ (ಜನಗಣತಿ ವರದಿ, ೨೦೦೧).

## ಖನಿಜ ಸಂಪತ್ತು

ಸುರಪುರ ಪ್ರದೇಶವು ವೈವಿಧ್ಯಮಯ ಖನಿಜ ನಿಕ್ಷೇಪಗಳಿಂದ ಕೂಡಿದ ಸ್ಥಳವಾಗಿದೆ. ಅತ್ಯಂತ ಬೆಲೆಯುಳ್ಳ ವಸ್ತುವೆಂದು ಪರಿಗಣಿಸಲ್ಪಡುವ ಚಿನ್ನವು ಸುರಪುರ ತಾಲೂಕಿನ ಮಂಗಳೂರು ಮತ್ತು ಮೂಕನಗವಿಯ ಸುತ್ತಮುತ್ತ ಬಂಗಾರದ ಗಣಿಗಳಿದ್ದವೆಂದು ಭೂಗರ್ಭ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ (ರೇವಣಸಿದ್ದಯ್ಯ ೧೯೮೬:೫).

ತಂತಿ ಮತ್ತು ಶಿಲೀಂದ್ರ ನಾಶಕಗಳ ತಯಾರಿಕೆಯಲ್ಲಿ ತಾಮ್ರವನ್ನು ವ್ಯಾಪಕವಾಗಿ ಉಪಯೋಗಿಸಿಸುತ್ತಾರೆ. ೧೮೮೧, ೧೮೯೪ ಮತ್ತು ಮತ್ತು ೧೮೯೯ರಲ್ಲಿ 'ಡೆಕ್ಕನ್ ಮೈನಿಂಗ್' ಕಂಪನಿಯವರು ತಿಂಥಣಿ ಪ್ರದೇಶವನ್ನು ಪರೀಕ್ಷಿಸಿ ಅವು ತಾಮ್ರದ ಅದಿರಿಗಾಗಿ ತೋಡಿದ ಗಣಿಗಳೆಂದು ಅಭಿಪ್ರಾಯ ಪಟ್ಟಿರುವುದನ್ನು ಎಂ.ಬಿ.ಪಾಟೀಲ ಅವರು ಸಂಪಾದಿಸಿರುವ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭)ನಲ್ಲಿ ನೋಡಬಹುದು. ೧೯೬೩ರಲ್ಲಿ 'ಭೂವಿಜ್ಞಾನ ಮತ್ತು ಸರ್ವೇಕ್ಷಣೆ' ಇಲಾಖೆಯು ತಿಂಥಣಿ ಪ್ರದೇಶವನ್ನು ಪರೀಕ್ಷಿಸಿ ಸು.೧೩೫ ಮೀ. ಆಳದವರೆಗೆ ಈ ನಿಕ್ಷೇಪ ವ್ಯಾಪಿಸಿರುವುದೆಂದು ಊಹಿಸಿದ್ದಾರೆ. ಕೆಲವು ತಿಂಗಳ ಕಾಲ ಈ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಡೆಸಿ ಲಾಭ ಕಂಡುಬರದೆ ಇರುವುದರಿಂದ ಗಣಿಗಾರಿಕೆಯನ್ನು ನಿಲ್ಲಿಸಲಾಯಿತು. ಇವಲ್ಲದೆ ಬೆಣಚುಕಲ್ಲು, ಸುಣ್ಣಶಿಲೆಗಳ ನಿಕ್ಷೇಪಗಳು ದೊರೆಯುತ್ತವೆ ಎಂಬುದು ತಿಳಿದುಬರುತ್ತದೆ.

ವೈವಿಧ್ಯಮಯವಾದಂತಹ ಖನಿಜ ನಿಕ್ಷೇಪಗಳನ್ನು ಹೊಂದಿದ ಸುರಪುರ ತಾಲೂಕು ಆರ್ಥಿಕವಾಗಿ ಕೂಡಾ ಅಭಿವೃದ್ಧಿ ಹೊಂದುತ್ತಿದೆ. ಈ ತಾಲೂಕಿನಲ್ಲಿ ಮೊದಲು ೩ ಸಿಮೆಂಟು ಕಾರ್ಖಾನೆಗಳಿದ್ದವು. ಆದರೆ ಕಚ್ಚಾ ಸಾಮಗ್ರಿ ಹಾಗೂ ನಿಷ್ಣಾತ ಕಾರ್ಮಿಕರು ಸಿಗದ ಕಾರಣ ಅವು ಮುಚ್ಚಿ ಹೋಗಿವೆ. ಈ ಪ್ರದೇಶದಲ್ಲಿ ತಯಾರಾಗುತ್ತಿದ್ದ ಕೈಮಗ್ಗದ ಸೀರೆಗಳು ಪ್ರಸಿದ್ಧವಾಗಿದ್ದವು ಸಿದ್ಧಪಡಿಸಿದ ಉಡುಪು ಬಂದಿದ್ದರಿಂದ ಈ ಸೀರೆಗಳು ಬೇಡಿಕೆಯನ್ನು ಕಳೆದುಕೊಂಡಿವೆ. ಇಂದು ನೇಕಾರಿಕೆಯು ಅವನತಿಯ ಅಂಚಿನಲ್ಲಿದೆ. ಇಟ್ಟಿಗೆ ಭಟ್ಟಿಗಳು, ಕಲ್ಲು ಪಾಲೀಶ್ ಮಾಡುವ ಯಂತ್ರಗಳು, ಖಾದಿ ಗ್ರಾಮೋದ್ಯೋಗದ ಉತ್ಪಾದನಾ ಕೇಂದ್ರಗಳು ಈ ಭಾಗದಲ್ಲಿವೆ.

## ನಗರ ರಚನೆ

೧೮೫೭ರಲ್ಲಿ ಸುರಪುರದ ದೊರೆ ವೆಂಕಟಪ್ಪನಾಯಕನು ವಿದೇಶಿಯರಾದ ಬ್ರಿಟಿಷರ ನಿರಂಕುಶ ವರ್ತನೆಯಿಂದ ರೋಸಿ ಹೋಗಿ ನೆರೆಹೊರೆಯ ಸಂಸ್ಥಾನಗಳ ಸಹಾಯ ಪಡೆದು ಬ್ರಿಟಿಷರ ವಿರುದ್ಧ

ದಂಗೆಯೆದ್ದನು. ಆದರೆ ಬ್ರಿಟಿಷರು ದಂಗೆಯೆದ್ದ ವೆಂಕಟಪ್ಪನಾಯಕನನ್ನು ಕುಟೀಲ ನೀತಿಯಿಂದ ಸೋಲಿಸಿ ಸುರಪುರವನ್ನು ಆಕ್ರಮಿಸಿಕೊಂಡರು. ಆಕ್ರಮಿಸಿಕೊಂಡ ಈ ಪ್ರದೇಶವನ್ನು ಅನೇಕ ಯುದ್ಧಗಳಲ್ಲಿ ಸಹಾಯ ಸಲ್ಲಿಸಿದ ಹೈದರಾಬಾದಿನ ನಿಜಾಂ ಅವರಿಗೆ ಒಪ್ಪಿಸಿದರು. ಸುರಪುರವು ಆಂಗ್ಲರಿಂದ ನಿಜಾಂ ಅವರ ವಶಕ್ಕೆ ಹೋದ ನಂತರ ಶೋರಾಪುರವಾಗಿ ಮಾರ್ಪಟ್ಟಿತು.

ನಿಜಾಂ ಸಂಸ್ಥಾನದ ಮುಖ್ಯ ಮಂತ್ರಿಯಾಗಿದ್ದ ಸಾಲಾರ ಜಂಗನು ಕೈಗೊಂಡ ಆಡಳಿತ ಸುಧಾರಣೆಗಳಲ್ಲಿ 'ಜಿಲ್ಲಾ ಬಂಧಿ'ಯು ಮುಖ್ಯವಾಗಿದೆ. ಈ ಸಂದರ್ಭದಲ್ಲಿ ಗುಲಬರ್ಗಾವು ಸುರಪುರ ಜಿಲ್ಲೆಯ ಒಂದು ಭಾಗವಾಗಿತ್ತು. ಸುರಪುರವು ಪ್ರಾರಂಭದಲ್ಲಿ ೫ ತಾಲೂಕುಗಳನ್ನು ಒಳಗೊಂಡಿತ್ತು. ಆಡಳಿತಕ್ಕನುಗುಣವಾಗಿ ನಂತರ ಸುರಪುರವನ್ನು ೧೮೭೩ರಲ್ಲಿ ಸುರಪುರ ಜಿಲ್ಲೆಯನ್ನು ಗುಲಬರ್ಗಾ ಮತ್ತು ಸುರಪುರ ಜಿಲ್ಲೆಗಳೆಂದು ವಿಭಾಗಿಸಿದರು. ನಂತರ ಸುರಪುರ ೧೯೦೧ರಲ್ಲಿ ಕೇವಲ ತಾಲೂಕಾಗಿ ಉಳಿಯಿತು. ಇದನ್ನು ಗುಲಬರ್ಗಾ ಜಿಲ್ಲೆಗೆ ಸೇರಿಸಲಾಯಿತು (ಪಾಟೀಲ್ ೧೯೯೭:೬).

ಸುರಪುರ ತಾಲೂಕು ಪುರಾತನ ಸಂಸ್ಕೃತಿಗಳ ನೆಲೆವೀಡಾಗಿದೆ. ರಾಜನ ಕೋಳೂರು, ಹಗರಟಿಗಿ, ಕೊಡೇಕಲ್, ಬೂದಿಹಾಳಗಳಲ್ಲಿರುವ ಅವಶೇಷಗಳು ಪ್ರಾಗೈತಿಹಾಸಿಕದಿಂದ ನೂತನ ಶಿಲಾಯುಗದವರೆಗಿನ ಇತಿಹಾಸವನ್ನು ವಿವರಿಸುತ್ತವೆ. ಮಲ್ಲಾ, ಮುದನೂರ, ಕೆಂಭಾವಿಗಳಲ್ಲಿ ಶೈವ ಮತ್ತು ಜೈನ ಮಂದಿರಗಳಿವೆ. ತಿಂಥಣಿ, ಕೊಡೇಕಲ್, ಈ ಪ್ರದೇಶಗಳು ಧಾರ್ಮಿಕ ಸಾಮರಸ್ಯವನ್ನು ಪ್ರತಿಬಿಂಬಿಸುವ ಪ್ರದೇಶಗಳಾಗಿವೆ. ಗೋಪಾಲಸ್ವಾಮಿ ದೇವಸ್ಥಾನ, ವಾಗಣಗೇರಾ ಕೋಟೆ, ಛಾಯಾಭಗವತಿ ಮತ್ತು ನಾರಾಯಣಪುರ ಇವು ಈ ಭಾಗದ ಆಕರ್ಷಣೀಯ ಸ್ಥಳಗಳಾಗಿ ಕಂಡುಬಂದಿವೆ.

## ೨.೨. ಐತಿಹಾಸಿಕ ಹಿನ್ನೆಲೆ

ಪ್ರಾಚೀನ ಕಾಲದಿಂದಲೂ ಪೌರಾಣಿಕ ಹಿನ್ನೆಲೆ ಹೊಂದಿರುವ ಸುರಪುರ ಪ್ರದೇಶವು ಐತಿಹಾಸಿಕ ದೃಷ್ಟಿಯಿಂದಲೂ ಅನೇಕ ರಾಜಮನೆತನಗಳ ಆಳ್ವಿಕೆ ಮಾಡಿದ ನಾಡಾಗಿದೆ. ಪ್ರಾಗೈತಿಹಾಸಿಕ ದೃಷ್ಟಿಯಿಂದ ಈ ಪ್ರದೇಶದ ವಿವಿಧ ಭಾಗಗಳಲ್ಲಿ ಪ್ರಾಚೀನ ಅವಶೇಷಗಳು ಕಂಡುಬರುತ್ತವೆ. ರಾಬರ್ಟ್ ಬ್ರೂಸಫೂಟ್[೧] ಮೇಡೋಸ ಟೇಲರ[೨], ಅ.ಸುಂದರ[೩] ಮತ್ತು ಕೆ.ಪೆದ್ದಯ್ಯನವರ ಸಂಶೋಧನೆಗಳ ಮೂಲಕ ಈ ಪ್ರದೇಶದಲ್ಲಿ ಉತ್ಖನನ ಮಾಡಿ ಇತಿಹಾಸದ ಕಾಲಗರ್ಭದಲ್ಲಿ ಅಡಗಿ ಹೋಗಿರುವ ಅವಶೇಷಗಳನ್ನು ಹೊರತೆಗೆಯಲಾಯಿತು. ಹೀಗೆ ಹೊರ ತೆಗೆದ ಅವಶೇಷಗಳನ್ನು ಪರೀಕ್ಷಿಸಿ ಆಯಾ ಇತಿಹಾಸದ ಕಾಲಕ್ಕೆ ವರ್ಗೀಕರಿಸಲಾಯಿತು. ಅಂದರೆ ಪ್ರಾಗೈತಿಹಾಸಿಕ ಯುಗ, ನೂತನ ಶಿಲಾಯುಗ, ತಾಮ್ರ ಶಿಲಾಯುಗದ ಅವಶೇಷಗಳನ್ನಾಗಿ ವಿಂಗಡಿಸಿದರು. ಈ ಎಲ್ಲಾ ಶೋಧನೆಗಳಿಂದ ಸುರಪುರ ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದಲೂ ಇತಿಹಾಸದಲ್ಲಿ ದಾಖಲೆಯಾಗಿರುವುದು ತಿಳಿದುಬರುತ್ತದೆ.

'ಐತಿಹಾಸಿಕ ಹಿನ್ನೆಲೆ'ಗೆ ಸಂಬಂಧಿಸಿದಂತೆ ಕಪಟರಾಳ ಕೃಷ್ಣರಾಯರ 'ಸುರಪುರ ಸಂಸ್ಥಾನದ ಇತಿಹಾಸ'(೧೯೭೭), ಎ.ಕೃಷ್ಣರವರ 'ಸಗರನಾಡ ದರ್ಶನ'(೧೯೮೫), ಆರ್.ರೇವಣಸಿದ್ಧಯ್ಯನವರ 'ಶೋರಾಪುರ ತಾಲೂಕಾ ದರ್ಶನ'(೧೯೮೬), 'ತವನಿಧಿ' ಎಂಬ ಸ್ಮರಣ ಸಂಚಿಕೆ (೧೯೯೬), ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭), ಎಂ.ಎಸ್.ಪಾಟೀಲರ 'ಕಲ್ಲರಳಿ ಹೂವಾಗಿ'(೨೦೦೦), ಭಾಸ್ಕರರಾವ ಮೂಡಬೂಳರ 'ಮರೆತು ಹೋದ ಸುರಪುರ ಇತಿಹಾಸ'(೨೦೦೧), ಬಿ.ಕೃಷ್ಣಮಾಚಾರ್ಯರ 'ಮರೆಯಲಾಗದ ಸುರಪುರ ರಾಜರ ಚರಿತ್ರೆ'(೨೦೦೩), ಈಶ್ವರಯ್ಯ ಮಠರ 'ವಚನ ವಾಹಿನಿ'(೨೦೦೪), ಮುಂತಾದ ಕೃತಿಗಳು ಈ ಅಧ್ಯಯನದ ಅವಲೋಕನೆಗೆ ನೆರವಾಗಿವೆ.

* * * * *

**ಇತಿಹಾಸ ಪೂರ್ವಕಾಲ**

ಇತಿಹಾಸ ಪೂರ್ವಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಭೂ ಶೋಧನೆಗಳ ವರದಿಯನ್ನು, ನಿವೇಶನಗಳಲ್ಲಿ ಸಂಗ್ರಹಿಸಲಾದ ವಿವಿಧ ಬಗೆಯ ಅವಶೇಷಗಳನ್ನು ಅವಲಂಬಿಸಬೇಕಾಗುತ್ತದೆ. ಆದಿಶಿಲಾಯುಗ ಸಂಸ್ಕೃತಿಗೆ ಸೇರಿದ ಹಲವಾರು ನಿವೇಶನಗಳಿಂದ ಸಂಗ್ರಹಿಸಲಾಗಿರುವ ನಿವೇಶನಗಳೆಂದರೆ ಶಿಲೋಪಕರಣಗಳು, ಬೇಟೆ ವಿಧಾನ, ಆಹಾರ ಸಂಗ್ರಹಣ ವಿಧಾನ, ಪ್ರಾಣಿಗಳ ಪಳೆಯುಳಿಕೆ ಮತ್ತು ವಾಸದ ನೆಲೆಗಳು ಮೊದಲಾದವುಗಳಾಗಿವೆ. ಸುರಪುರ ಪ್ರದೇಶಕ್ಕೆ ಸಂಬಂಧಿಸಿದಂತೆ ಭೂ ವಿಜ್ಞಾನಿ ರಾಬರ್ಟ್ ಬ್ರೂಸ್‌ಫೂಟ್, ಮೆಡೋಸ ಟೇಲರ, ಅ.ಸುಂದರ ಮತ್ತು ಕೆ.ಪೆದ್ದಯ್ಯನವರು ನಡೆಸಿದ ಸಂಶೋಧನೆಗಳಿಂದ ಸುರಪುರವು ಕೂಡ ಪ್ರಾಗೈತಿಹಾಸಿಕ್ಕೆ ಒಳಪಟ್ಟಿರುವುದು ಕಂಡುಬರುತ್ತದೆ (ಪಾಟೀಲ ೧೯೯೭:೩೫).

ರಾಬರ್ಟ್ ಬ್ರೂಸಫೂಟ ಎಂಬ ಭೂವಿಜ್ಞಾನಿಯು ಸುರಪುರ ತಾಲೂಕಿನ ಕೃಷ್ಣಾನದಿ ದಂಡೆಯ ಮೇಲಿರುವ ಎಡೆಹಳ್ಳಿಯಲ್ಲಿ ಆದಿ ಹಳೇ ಶಿಲಾಯುಗದ ಕೊಡಲಿಗಳನ್ನು ಪತ್ತೆ ಮಾಡಿದ್ದಾರೆ. ಕೆ.ಪದ್ದಯ್ಯನವರು ೧೯೭೦ರ ಆ ವಿಭಾಗದಲ್ಲಿ ಬ್ರೂಸಫೂಟರ ಸಂಶೋಧನೆಯನ್ನು ಗಮನಿಸಿ ಮತ್ತೆ ಆ ಪ್ರದೇಶಗಳಲ್ಲಿ ಸಂಶೋಧನೆ ಆರಂಭಿಸಿದರು. ಅವರು "ಶೋರಾಪುರ ಸಂಗಮ ಪ್ರದೇಶದ ಪ್ರಾಗ್ ಇತಿಹಾಸ ಮತ್ತು ಪೂರ್ವದ ಇತಿಹಾಸ' ಎಂಬ ವಿಷಯವನ್ನು ಕುರಿತಂತೆ ಅಧ್ಯಯನಕ್ಕೆ ಆರಿಸಿಕೊಂಡಿದ್ದರು. ಪದ್ದಯ್ಯನವರು ಉತ್ಖನನಗಳನ್ನು ಮಾಡಿ ಅದರಿಂದ ಬೆಳಕಿಗೆ ಬಂದ ಅವಶೇಷಗಳನ್ನು ವಿಮರ್ಶಾತ್ಮಕ ವಿಶ್ಲೇಷಿಸಿ ವಿವರಣೆ ನೀಡಿದ್ದಾರೆ(ಪಾಟೀಲ ೧೯೯೭:೩೫).

ಆದಿ ಮಾನವನಿಗೆ ಸಂಬಂಧಿಸಿದ ಆಯುಧ ಮತ್ತು ಅವಶೇಷಗಳು ಆಕಾರ ಮತ್ತು ಅವಶೇಷಗಳನ್ನು ತಯಾರಿಸಿದ ತಾಂತ್ರಿಕ ವಿಧಾನಗಳಲ್ಲಿ ಒಂದು ಬಗೆಯ ಹೋಲಿಕೆ ಕಂಡುಬರುತ್ತದೆ. ಅವುಗಳನ್ನು ಅವು

ದೊರೆತ ಸ್ಥಳದ ಹೆಸರಿನಿಂದಲೇ ಆಯಾ ಸಂಸ್ಕೃತಿಗೆ ಸೇರಿದವು ಎಂದು ಗುರುತಿಸುತ್ತಾರೆ. ಅದರಂತೆ ಕೆ.ಪದ್ದಯ್ಯನವರು ಹುಣಸಗಿಯಲ್ಲಿ ಆದಿಮಾನವನಿಗೆ ಸಂಬಂಧಿಸಿದಂತಹ ಪ್ರಾಚ್ಯವಸ್ತುಗಳನ್ನು ಶೋಧಿಸಿದ್ದಾರೆ. ಅಲ್ಲದೆ ಈ ಸ್ಥಳದಲ್ಲಿ ಕಡುಗತ್ತಿ, ಕೈ ಕೊಡಲಿ, ಕೈಗುದ್ದಲಿ, ಉಳಿ ಮುಂತಾದವುಗಳನ್ನು ಪತ್ತೆ ಹಚ್ಚಿರುವುದು ಅವರ ಸಂಶೋಧನೆಗಳಿಂದ ತಿಳಿದುಬರುತ್ತದೆ. ಹೀಗೆ ಸಂಶೋಧಿಸಿದ ಪ್ರಾಚ್ಯವಸ್ತುಗಳನ್ನು 'ಅಶೂಲಿಯನ್ ಸಂಸ್ಕೃತಿ'ಗೆ' ಸೇರಿವೆ ಎಂದಿದ್ದಾರೆ. ಇವು ಆದಿಮಾನವನ ಕುರುಹುಗಳಾಗಿವೆ. 'ಜಗತ್ತಿನ ಬೇರೆಲ್ಲಿಯೂ ಹಳೆಯ ಶಿಲಾಯುಗದ ಆಯುಧಗಳು ಮೃದುವಾದ ಸುಣ್ಣಕಲ್ಲಿನಲ್ಲಿ ಮಾಡಿರುವುದು ಬೆಳಕಿಗೆ ಬಂದಿಲ್ಲ. ಆದರೆ ಇಂತಹ ಸುಣ್ಣಕಲ್ಲಿನ ಆಯುಧಗಳು ಪ್ರಪ್ರಥಮ ಬಾರಿಗೆ ದೊರೆತಿರುವುದು ಹುಣಸಗಿಯಲ್ಲಿ ಮಾತ್ರ' ಎಂದು ಪ್ರಾಕ್ತನ ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ (ಕೃಷ್ಣ ೧೯೯೬:೧೬).

ಕೆ.ಪದ್ದಯ್ಯನವರ ಇನ್ನೊಂದು ಮಹತ್ವದ ಸಂಶೋಧನೆಯೆಂದರೆ ಬೂದಿಹಾಳ ಪ್ರದೇಶದಲ್ಲಿ ನಡೆಸಿದ ಉತ್ಖನನವಾಗಿದೆ. ಈ ಊರಿನಲ್ಲಿ ಅತ್ಯಂತ ಹಳೆಯದೆನ್ನಬಹುದಾದ 'ಮಾನವ ಸಂಸ್ಕೃತಿ'ಯ ಕುರುಹುಗಳು ಕಂಡುಬಂದಿವೆ. ಬೂದಿಹಾಳದಲ್ಲಿ ದೊರೆತಿರುವ ಬೂದಿಗುಡ್ಡಗಳು ಗತಕಾಲದ ಜನರ ಜೀವನದ ಮೇಲೆ ಬೆಳಕು ಚೆಲ್ಲಬಲ್ಲ ಅನೇಕ ಅವಶೇಷಗಳು ದೊರೆತಿವೆ. ಈ ಸಂಸ್ಕೃತಿಯ ವೈಶಿಷ್ಟ್ಯವೆಂದರೆ ಇವರು ಸಾಕು ಪ್ರಾಣಿಗಳನ್ನು ಸಾಕುವುದರ ಜೊತೆಗೆ ಸಗಣಿಯನ್ನು ಒಂದೆಡೆ ಕೂಡಿ ಹಾಕುತ್ತಿದ್ದರು. ತಮ್ಮ ವಸತಿ ನೆಲೆಯನ್ನು ಬಿಟ್ಟು ಹೋಗುವ ಮುನ್ನ ಸಗಣಿ ರಾಶಿಗೆ ಬೆಂಕಿ ಹಚ್ಚುತ್ತಿದ್ದರು. ಇವೇ ಬೂದಿಗುಡ್ಡಗಳು. ಹೀಗೆ ಪದ್ದಯ್ಯನವರು ಸುರಪುರ ಸಂಗಮ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಮಾಡುವಾಗ ಕಕ್ಕೇರಾ, ಕೊಡೇಕಲ್‌ಗಳಲ್ಲಿ ಶಿಲಾ ತಾಮ್ರಯುಗದ ಹಂತದಲ್ಲಿಯ ನೂತನ ಶಿಲಾಯುಗ ಹಂತದ ಸಂಸ್ಕೃತಿಯನ್ನು ಪತ್ತೆ ಮಾಡಿದ್ದಾರೆ.

ಅ.ಸುಂದರರವರು ಶಿಲಾ ತಾಮ್ರಯುಗದ ಹಂತದಲ್ಲಿಯ ನೂತನ ಶಿಲಾಯುಗದ ಜನರು ವಾಸ ಮಾಡಿದ ನೆಲೆಗಳನ್ನು ಶೋಧಿಸಿದರು. ಹಾಗೂ ಬೂದಿಹಾಳದಲ್ಲಿ ಎರಡು ಬೃಹತ್ ಬೂದಿಗುಡ್ಡಗಳು ಇರುವುದನ್ನು ೧೯೬೪ರಲ್ಲಿ ವರದಿ ಮಾಡಿದ್ದರು. ೧೯ನೇ ಶತಮಾನದ ಮಧ್ಯಭಾಗದಲ್ಲಿ ಕರ್ನಲ್ ಮೆಡೋಸ ಟೇಲರರು ಕಬ್ಬಿಣ ಯುಗದ ಬೃಹತ್ ಶಿಲಾಯುಗದ ಸಂಸ್ಕೃತಿಗಳೆಂದು ಗುರುತಿಸಲಾದ ಕೆಲವು ಕಲ್ಲುವೃತ್ತ, ಕಲ್ಮನೆಗಳ ನಿವೇಶನವನ್ನು ಪತ್ತೆ ಮಾಡಿದರು. ಈ ನಿವೇಶನಗಳನ್ನು ರಾಜನಕೋಳೂರು ಮತ್ತು ಹಗರಟಗಿಯಲ್ಲಿ ಪತ್ತೆ ಮಾಡಿ ಅಧ್ಯಯನ ಮಾಡಿದ್ದಾರೆ. ಈ ಕಲ್ಗೋರಿಗಳು ಆಯಾ ಪ್ರದೇಶಗಳಲ್ಲಿ ಭಿನ್ನ ಭಿನ್ನ ಪ್ರಕಾರಗಳಲ್ಲಿ ಕಂಡುಬರುತ್ತವೆ. ರಾಜನಕೋಳೂರಿನಲ್ಲಿ ದೊಡ್ಡ ದೊಡ್ಡ ೪ ಚಪ್ಪಡಿ ಕಲ್ಲುಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಇಟ್ಟು ಕೋಣೆಯನ್ನು ನಿರ್ಮಿಸಿ ಅದರಲ್ಲಿ ಮಾನವ ಅಸ್ಥಿ ಅವಶೇಷಗಳನ್ನು ಮಣ್ಣಿನ ಪಾತ್ರೆಗಳನ್ನು ಹಾಗೂ ಕಬ್ಬಿಣದ ವಸ್ತುಗಳನ್ನು ಇಟ್ಟಿರುವ ಕಲ್ಗೋರಿಯನ್ನು ಪತ್ತೆ ಮಾಡಿದ್ದಾರೆ (ಪಾಟೀಲ ೧೯೯೭:೩೯).

ಹೀಗೆ ಸುರಪುರ ತಾಲೂಕಿನ ಪ್ರದೇಶಗಳಲ್ಲಿ ಇತಿಹಾಸ ಪೂರ್ವದ ಕುರುಹುಗಳು ಕಂಡುಬಂದಿವೆ. ಈ ಪ್ರದೇಶಗಳಲ್ಲಿ ಆದಿಶಿಲಾಯುಗದಿಂದ ಹಿಡಿದು ನೂತನ ಶಿಲಾಯುಗದವರೆಗಿನ ಸಂಸ್ಕೃತಿ ಕಂಡುಬರುತ್ತದೆ. ನಾಗರಿಕತೆಯ ಬೆಳವಣಿಗೆಯಾದಂತೆ ಈ ಪ್ರದೇಶವು ಕೂಡಾ ಬೆಳವಣಿಗೆಯಾಗ ತೊಡಗಿತು. ಹೀಗೆ ಬೆಳವಣಿಗೆ ಹೊಂದಿ ಈ ಭಾಗವು ವಿವಿಧ ರಾಜಮನೆತನಗಳ ಆಳ್ವಿಕೆಯಲ್ಲಿ ಮತ್ತಷ್ಟು ಐತಿಹಾಸಿಕ ಮಹತ್ವ ಪಡೆಯಿತು.

## ಪೌರಾಣಿಕ ಹಿನ್ನೆಲೆ

ಸುರಪುರವು ಮಹಾಭಾರತ ಕಾಲದಿಂದಲೂ ಪ್ರಸಿದ್ಧಿಗೆ ಬಂದ ಸ್ಥಳವಾಗಿದೆ ಎಂದು ಕೃಷ್ಣರಾವ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಪ್ರಕಾರ ಚಂದ್ರಹಾಸನು ಬೇಡಕುಲದವನೆಂದು ಉಲ್ಲೇಖಿಸಿದ್ದಾರೆ. ೧೪ನೇ ಶತಮಾನದ ನಂಜುಂಡ ಕವಿಯಿಂದ ರಚಿತವಾದ "ಕಂಪಿಲರಾಮನಾಥ ಚರಿತ್ರೆ"ಯು ರಾಮನಾಥನ ಸೈನ್ಯದಲ್ಲಿದ್ದ ಬೇಡ ಯೋಧರ ಪರಾಕ್ರಮಗಳನ್ನು ವಿವರಿಸಿದ್ದಾರೆ. ಸುರಪುರದ ಅರಸರು ಕೂಡಾ ಬೇಡರ ವಂಶದವರಾಗಿದ್ದರು. ಈ ಬಗೆಯ ವಿವರಗಳಿಗೆ ಚಾರಿತ್ರಿಕ ಸಾಕ್ಷ್ಯಾಧಾರಗಳಿಲ್ಲದಿದ್ದರೂ ಇಂತಹ ವಿಷಯಗಳು ಜನಪ್ರಿಯವಾಗಿರುವದನ್ನು ನೋಡಬಹುದು (ಕೃಷ್ಣರಾವ್ ಮತ್ತು ಕೇಶವಭಟ್ಟ ೧೯೭೦:೬೨೫).

ಎ.ಕೃಷ್ಣರವರು ಉಲ್ಲೇಖಿಸುವ ಹಾಗೆ "ಇಕ್ಷ್ವಾಕು ವಂಶದ ಸಗರ ಎಂಬ ಚಕ್ರವರ್ತಿಯ ಸಗರನಾಡನ್ನು ಆಳುತ್ತಿದ್ದನು. ಸುರಪುರ, ಶಹಾಪುರ ಮತ್ತು ಜೇವರ್ಗಿ ಈ ತಾಲೂಕುಗಳ ಮಧ್ಯದ ಭಾಗವೇ ಸಗರನಾಡು ಆಗಿತ್ತು. ಇದು ಕೃಷ್ಣಾ ಮತ್ತು ಭೀಮಾ ನದಿಗಳ ನಡುವಣ ಭಾಗವೇ ಆಗಿದೆ. ಈತನ ತಂದೆ ಬಾಹುಕನು ಯುದ್ಧಗಳಲ್ಲಿ ಸೋಲನ್ನನುಭವಿಸಿದ್ದರಿಂದ ಹೆಂಡತಿಯೊಂದಿಗೆ ಅರಣ್ಯವನ್ನು ಸೇರಿದನು. ಕೆಲವೇ ದಿನಗಳಲ್ಲಿ ವೃದ್ಯಾಪ್ಯದಿಂದ ಬಳಲಿ ಬಾಹುಕನು ಮರಣ ಹೊಂದಿದನು. ಬಾಹುಕನ ಹೆಂಡತಿ ಓರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು. ಆಕೆಯ ಸವತಿಯರು ಅಸೂಯೆಯಿಂದ ಅವಳ ಗರ್ಭವನ್ನು ನಾಶಗೊಳಿಸಲು ಅವಳ ಮೇಲೆ ವಿಷಪ್ರಯೋಗ ಮಾಡಿದರು. ವಿಷ ಈಕೆಯ ಮೇಲೆ ಯಾವ ಪ್ರಭಾವವನ್ನು ಬೀರಲಿಲ್ಲ. ಹೀಗೆ ವಿಷ(ಗರ)ವನ್ನು ಮೈತಳೆದು ಜನಿಸಿದ ಮಗುವೇ 'ಸಗರ' ಎಂದು ಹೆಸರು ಹೊಂದಿದ್ದನು. ಈತನು 'ಸಗರನಾಡಿ'ನಲ್ಲಿ ಯಶಸ್ವಿಯಾಗಿ ಆಡಳಿತ ನಡೆಸಿರುವುದು ಕೃಷ್ಣರವರ ಗ್ರಂಥದಿಂದ ತಿಳಿದುಬರುತ್ತದೆ (ಕೃಷ್ಣ ೧೯೮೫:೧೫).

ಎಲ್ಲ ಗ್ರಂಥಗಳಲ್ಲಿ ಸಗರ ಚಕ್ರವರ್ತಿಯ ಬಗ್ಗೆ ವಿವರಣೆಯಿದೆ. ಆದರೆ ಸಗರ ಚಕ್ರವರ್ತಿಯ ತಂದೆ ಬಾಹುಕನ ಬಗ್ಗೆಯಾಗಲಿ ಹಾಗೂ ಬಾಹುಕನ ಹೆಂಡತಿ ಸಂಬಂಧ ಹೊಂದಿದ ಆ ಮಹರ್ಷಿಯ ಬಗ್ಗೆಯಾಗಲಿ ಯಾವುದೇ ವಿವರಣೆಯಿಲ್ಲ. ಹೀಗೆ ದೊರೆತ ಚಾರಿತ್ರಿಕ ಸಾಕ್ಷ್ಯಾಧಾರಗಳು ಲಭ್ಯವಿಲ್ಲದಿದ್ದರೂ ಕೂಡ ಜನರಲ್ಲಿ ಈ ವಿಷಯವು ಹೆಚ್ಚು ಪ್ರಸಿದ್ಧಿಗೆ ಬಂದಿರುವುದು ಕಾಣಬಹುದು. ಈ ಪ್ರದೇಶವನ್ನು ಇಂದಿಗೂ ಕೂಡ 'ಸಗರನಾಡು' ಎಂದು ಕರೆಯುವ ಪ್ರವೃತ್ತಿ ಜನರಲ್ಲಿ ಕಂಡುಬಂದಿದೆ.

ಸುರಪುರ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಭಾಗದ ಇತಿಹಾಸ ಕಲ್ಯಾಣಿ ಚಾಲುಕ್ಯರ ಇತಿಹಾಸದಿಂದ ಆರಂಭವಾಗುತ್ತದೆ. ನಂತರ ಕಲ್ಯಾಣಿ, ಕಳಚೂರಿಗಳು, ದೇವಗಿರಿಯ ಸೇವುಣರ ಕಾಲದಿಂದ ಬ್ರಿಟಿಷರು, ನಿಜಾಂರವರೆಗೂ ಸುರಪುರ ಈ ಎಲ್ಲಾ ರಾಜ ಮನೆತನಗಳ ಆಳ್ವಿಕೆಯಲ್ಲಿತ್ತು. ೧೮೫೭ರಲ್ಲಿ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದಲ್ಲಿ ಸೋಲನ್ನನುಭವಿಸಿದನು. ಈತನ ಮರಣದ ನಂತರ ಸುರಪುರವನ್ನು ಬ್ರಿಟಿಷರು ನಿಜಾಂ ಅವರ ಆಳ್ವಿಕೆಗೆ ಒಳಪಡಿಸಿದರು. ಭಾರತ ೧೫ ಆಗಸ್ಟ್ ೧೯೪೭ರಂದು ಸ್ವಾತಂತ್ರ್ಯವಾದರೂ, ನಿಜಾಂ ಅವರ ಹೈದರಾಬಾದ ಸಂಸ್ಥಾನ ಸ್ವಾತಂತ್ರ್ಯವಾಗಿರಲಿಲ್ಲ. ಈ ಭಾಗದ ಸ್ವಾತಂತ್ರ್ಯಕ್ಕಾಗಿ ಅನೇಕರು ಹೋರಾಡಿದ್ದರ ಫಲವಾಗಿ ೧೮ ಸೆಪ್ಟೆಂಬರ್ ೧೯೪೮ ರಂದು ಸುರಪುರವು ನಿಜಾಂ ಅವರಿಂದ ಮುಕ್ತವಾಯಿತು. ಹೀಗೆ ನಿಜಾಂ ಅವರ ಆಳ್ವಿಕೆಯೊಂದಿಗೆ ಸುರಪುರದ ಇತಿಹಾಸ ಕೊನೆಗೊಂಡಿತು.

## ೨.೩. ರಾಜಕೀಯ ಹಿನ್ನೆಲೆ

ಒಂದು ಕಾಲದ ಚರಿತ್ರೆಯನ್ನು ಅಧ್ಯಯನ ಮಾಡಲು ಆಯಾ ಕಾಲದ ಘಟನೆಗಳೇ ಪ್ರಮುಖ ಆಧಾರಗಳಾಗಿವೆ. ಅದರಂತೆ ಆ ಪ್ರದೇಶದಲ್ಲಿ ಅಳಿದುಳಿದ ಎಲ್ಲವು ಇತಿಹಾಸಕ್ಕೆ ಪೂರಕ ಅಂಶಗಳಾಗಿ ಕಾರ್ಯನಿರ್ವಹಿಸುತ್ತವೆ. ಅನೇಕ ರಾಜಮನೆತನಗಳು ಈ ಪ್ರದೇಶದಲ್ಲಿ ಆಡಳಿತ ನಡೆಸಿ ಸಾಂಸ್ಕೃತಿಕ ಜೀವನದ ಮೇಲೆ ತಮ್ಮದೆಯಾದ ಪ್ರಭಾವವನ್ನು ಬೀರಿವೆ ಎಂಬುದನ್ನು ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದು.

ರಾಜಕೀಯ ಹಿನ್ನೆಲೆಗೆ ಸಂಬಂಧಿಸಿದಂತೆ ಎಂ.ವಿ.ಕೃಷ್ಣರಾವರ 'ಕರ್ನಾಟಕ ಇತಿಹಾಸ ದರ್ಶನ'(೧೯೭೦), ಕಪಟರಾಳ ಕೃಷ್ಣರಾಯರ 'ಸುರಪುರ ಸಂಸ್ಥಾನದ ಇತಿಹಾಸ'(೧೯೭೭), ಎಂ.ಕೃಷ್ಣರವರ 'ಸಗರನಾಡ ದರ್ಶನ'(೧೯೮೫), ಆರ್.ರೇವಣಸಿದ್ದಯ್ಯನವರ 'ಶೋರಾಪುರ ತಾಲೂಕಿನ ದರ್ಶನ'(೧೯೮೬), ಹನುಮಾಕ್ಷಿ ಗೋಗಿಯವರ 'ಸುರಪುರ ತಾಲೂಕಿನ ಶಾಸನಗಳು'(೧೯೯೫), ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೇಟಿಯರ್'(೧೯೯೭), ಮೂಡಬೂಳ ಭಾಸ್ಕರರಾವರ 'ಮರೆತು ಹೋದ ಸುರಪುರ ಇತಿಹಾಸ'(೨೦೦೧), ಗೋಪಾಲರಾವ ಹೇಜೀಬ್‌ರ 'ಹೈದರಾಬಾದ ಮುಕ್ತಿ ಸಂಘರ್ಷ'(೨೦೦೧), ಬಿ.ಕೃಷ್ಣಮಾಚಾರ್ಯ ಅವರ 'ಮರೆಯಲಾಗದ ಸುರಪುರ ರಾಜರ ಚರಿತ್ರೆ'(೨೦೦೩) ಎಂಬ ಗ್ರಂಥಗಳನ್ನು ಅಧ್ಯಯನ ಮಾಡಲಾಗಿದೆ. ಈ ಎಲ್ಲ ಗ್ರಂಥಗಳ ಅಧ್ಯಯನ ಮಾಡಿ ಅದರಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಬೇರೆ ಗ್ರಂಥಗಳೊಂದಿಗೆ ಹೋಲಿಸಿ ಅದರಲ್ಲಿ ಕಂಡುಬರುವ ಅಂಶಗಳನ್ನು ಇದರಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

*****

ಹನುಮಾಕ್ಷಿ ಗೋಗಿಯವರು ಸುರಪುರ ತಾಲೂಕಿನಲ್ಲಿ ದೊರೆತಿರುವ ಎಲ್ಲ ಶಾಸನಗಳನ್ನು ಪರಿವೀಕ್ಷಣೆ ಮಾಡಿದ್ದಾರೆ. ಏಕೆಂದರೆ ಸುರಪುರ ತಾಲೂಕಿನ ಇತಿಹಾಸ ಕಾಲಗರ್ಭದಲ್ಲಿ ಅಡಗಿ ಹೋಗುವ ಮೊದಲೇ ಅವುಗಳನ್ನು ಸಂರಕ್ಷಿಸಬೇಕಾದ ಮತ್ತು ಪರೀಕ್ಷಿಸಬೇಕಾದ ಪ್ರಮೇಯವಿದ್ದುದರಿಂದ ಈ ಕಾರ್ಯವನ್ನು ಕೈಗೊಂಡಿದ್ದರು ಎಂದು ಹೇಳಿದ್ದಾರೆ. ಈ ಶಾಸನಗಳ ಅಧ್ಯಯನದಿಂದ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳನ್ನು ಅಲ್ಲದೆ ಅವರ ಆಡಳಿತ ರೀತಿಯನ್ನು ತಿಳಿದುಕೊಳ್ಳಲಾಗಿದೆ. ಈ ಪ್ರದೇಶದ ೧೮೭ ಹಳ್ಳಿಗಳಲ್ಲಿ ಶಾಸನಗಳು ದೊರೆತಿವೆ. ಈ ಶಾಸನಗಳಲ್ಲಿ ಕೆಲವು ಶಾಸನಗಳು ಪೂರ್ಣ ಮಾಹಿತಿ ನೀಡಿದರೆ, ಇನ್ನು ಕೆಲವು ಶಾಸನಗಳು ವಿವರವಾದ ಮಾಹಿತಿಯನ್ನು ನೀಡುವಲ್ಲಿ ವಿಫಲವಾಗಿವೆ ಎಂಬುದು ಈ ಗ್ರಂಥದ ಅಧ್ಯಯನದಿಂದ ತಿಳಿದುಬಂದಿದೆ. ಹನುಮಾಕ್ಷಿ ಗೋಗಿಯವರ ಈ ಗ್ರಂಥದಲ್ಲಿ ಸುರಪುರ ತಾಲೂಕಿನಲ್ಲಿ ದೊರೆತಿರುವ ಶಾಸನಗಳು ಕಲ್ಯಾಣಿ ಚಾಲುಕ್ಯರಿಂದ ದೇವಗಿರಿಯ ಯಾದವರ ಕಾಲದವರೆಗಿನ ಶಾಸನಗಳು ದೊರೆತಿರುವುದು ಕಂಡುಬಂದಿದೆ (ಹನುಮಾಕ್ಷಿ ೧೯೯೫ : xvii).

## ಕಲ್ಯಾಣಿ ಚಾಲುಕ್ಯರು

ಸುರಪುರದ ರಾಜಕೀಯ ಇತಿಹಾಸ ಕಲ್ಯಾಣಿ ಚಾಲುಕ್ಯರ ಕಾಲದಿಂದ ಆರಂಭವಾಗುತ್ತದೆ. ಇದಕ್ಕೆ ಸಾಕ್ಷಿಯನ್ನುವಂತೆ ಅನೇಕ ಶಾಸನಗಳು ಇದರ ಬಗ್ಗೆ ಮಾಹಿತಿ ಒದಗಿಸುತ್ತವೆ. ಕಲ್ಯಾಣಿ ಚಾಲುಕ್ಯರ ಕಾಲದ ೪೬ ಶಾಸನಗಳು ಈ ಪ್ರದೇಶದಲ್ಲಿ ದೊರೆತಿರುವ ಬಗ್ಗೆ ಹನುಮಾಕ್ಷಿಗೋಗಿಯವರ ಗ್ರಂಥದಲ್ಲಿ ಮಾಹಿತಿಯಿದೆ. ಕಲ್ಯಾಣಿ ಚಾಲುಕ್ಯರ ಕಾಲದ ಪ್ರಮುಖ ಆಡಳಿತ ಘಟಕಗಳೆಂದರೆ ಸಗರ-೫೦೦, ಕೆಂಬಾವಿ-೨೪ ಇದಲ್ಲದೆ ಮುದನೂರ, ಸಗರ ಇವು ಪ್ರಸಿದ್ಧ ಅಗ್ರಹಾರ ಮತ್ತು ಪಟ್ಟಣಗಳಾಗಿದ್ದವು ಕಾಲಕಾಲಕ್ಕೆ ಈ ನಾಡಿನ ಆಡಳಿತ ಘಟಕಗಳಲ್ಲಿ ವ್ಯತ್ಯಾಸ ಕಂಡುಬಂದಿಲ್ಲವೆಂದು ತಿಳಿದುಬಂದಿದೆ. ಕಲ್ಯಾಣಿ ಚಾಲುಕ್ಯರ ದೊರೆ ಮೊದಲನೇ ಅಹವಮಲ್ಲನ ಕಾಲದ ೧೦೫೩ ಶಾಸನವು ಕೆಂಭಾವಿಯ ಸಿದ್ದೇಶ್ವರ ದೇವಾಲಯದಲ್ಲಿ ಕಂಡುಬಂದ ಈ ಶಾಸನದಲ್ಲಿ ಕೆಂಭಾವಿಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕೆಂಭಾವಿ-೨೪ ಮುಖ್ಯವಾದ ಆಡಳಿತ ಘಟಕವಾಗಿತ್ತು. ಸುರಪುರ ತಾಲೂಕಿನ ಮುದನೂರಿನಲ್ಲಿ ೬ನೇ ವಿಕ್ರಮಾದಿತ್ಯನ ೫ ಶಾಸನಗಳು ಕಂಡುಬಂದಿದೆ. ಅಲ್ಲದೇ ಹುಣಸಗಿ ೧೧೨೦ರ ಶಾಸನ, ರಾಜನ ಕೋಳೂರಿನ ೧೯೯೧-೯೨೦ ಶಾಸನ, ಬೊಮ್ಮನಹಳ್ಳಿಯ ೧೧೦೬ರ ಶಾಸನ. ಈ ಎಲ್ಲ ಶಾಸನಗಳಲ್ಲಿ ಕಲ್ಯಾಣಿ ಚಾಲುಕ್ಯರ ರಾಣಿಯರ ಬಗ್ಗೆ ಉಲ್ಲೇಖವಿರುವ ಶಾಸನಗಳು ದೊರೆತಿವೆ (ಪಾಟೀಲ ೧೯೯೭:೫೩).

## ಕಲ್ಯಾಣದ ಕಳಚೂರಿಗಳು

ಕಲ್ಯಾಣಿ ಚಾಲುಕ್ಯರ ನಂತರ ಬಂದ ರಾಜವಂಶವೇ ಕಲ್ಯಾಣದ ಕಳಚೂರಿಗಳಾಗಿದ್ದಾರೆ. ಕಲ್ಯಾಣಿ ಚಾಲುಕ್ಯರ ಮಾಂಡಲೀಕರೂ ಆಗಿದ್ದ ಕಳಚೂರಿಗಳು ಕ್ರಿ.ಶ.೧೧೬೨ರಲ್ಲಿ ರಾಜ್ಯಗ್ರಹಣ ಮಾಡಿದ್ದಾರೆ.

ಕಳಚೂರಿಗಳ ೮ ಶಾಸನಗಳು ಈ ಭಾಗದಲ್ಲಿ ಕಂಡುಬಂದಿವೆ. ಇಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ದೇವರಿಗೆ ನೀಡಿದ ದಾನವನ್ನು ಉಲ್ಲೇಖ ಮಾಡಲಾಗಿದೆ. ಸುರಪುರ ತಾಲೂಕಿನ ಹಗರಟಗಿ-೧೧೬೬ರ ಶಾಸನ, ಚಿಕ್ಕಮುದನೂರಿನ ೧೧೬೭-೬೮ ಶಾಸನ, ೧೧೭೦ರ ಶಾಸನ ಹೆಮ್ಮಡಿಗಿಯ-೧೧೮೨ರ ಶಾಸನವು ಪ್ರಮುಖವಾಗಿವೆ.

ಹಗರಟಗೆಯಲ್ಲಿ ದೊರೆತಿರುವ ೧೧೬೬ರ ಶಾಸನವು ಹಗರಟಗೆ ಎಂಬ ಅಗ್ರಹಾರದ ಬಗ್ಗೆ ತ್ರಿಕೂಟೇಶ್ವರ ದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಅದರಂತೆ ಚಿಕ್ಕಮುದನೂರಿನಲ್ಲಿ ದೊರೆತಿರುವ ಶಾಸನಗಳು ಲಕ್ಷ್ಮಣೇಶ್ವರ ದೇವರಿಗೆ ಬಿಟ್ಟ ದತ್ತಿಯನ್ನು ತಿಳಿಸುತ್ತದೆ.

## ದೇವಗಿರಿಯ ಯಾದವರು/ಸೇವುಣರು

ಕಲ್ಯಾಣಿ ಕಳಚೂರಿಗಳ ನಂತರ ಆಳ್ವಿಕೆಗೆ ಬಂದ ದೇವಗಿರಿಯ ಯಾದವರ ಆಳ್ವಿಕೆಗೂ ಸುರಪುರ ಪ್ರದೇಶವು ಒಳಪಟ್ಟಿತ್ತು. ಸೇವುಣರ ಕಾಲದ ೧೧ ಶಾಸನಗಳು ಈ ಪ್ರದೇಶವನ್ನು ದೊರೆತಿವೆ. ಅವುಗಳಲ್ಲಿ ಕೆಲವು ಶಾಸನಗಳು ಆಡಳಿತ ಘಟಕಗಳ ಬಗ್ಗೆ ವಿವರ ನೀಡಿದರೆ, ಇನ್ನು ಕೆಲವು ಶಾಸನಗಳು ದಾನ, ದತ್ತಿ ನೀಡಿದ ಬಗ್ಗೆ ಮಾಹಿತಿ ನೀಡುತ್ತವೆ. ಸುರಪುರ ತಾಲೂಕಿನ ಹಗರಟಗೆಯ ಕ್ರಿ.ಶ.೧೨೩೧ರ ಶಾಸನವು ಹಗರಟಗೆ-೨೦೦ ಎಂಬ ಆಡಳಿತ ಘಟಕವಿತ್ತು ಎಂಬ ಮಾಹಿತಿಯ ಜೊತೆಗೆ ವೀರಬಣಂಜು ಶೆಟ್ಟಿ ವ್ಯಾಪಾರಿಗಳಿಗೆ ಸಂಬಂಧಿಸಿದ ಉಲ್ಲೇಖವಿದೆ. ಈ ಶಾಸನದಲ್ಲಿ ಸಗರ-೩೦೦ರ ಆಡಳಿತ ಘಟಕವು ಕಲ್ಯಾಣಿ ಚಾಲುಕ್ಯರ ಕಾಲದಿಂದ ಸೇವುಣರ ಕಾಲದವರೆಗೂ ಅಸ್ತಿತ್ವದಲ್ಲಿದ್ದುದನ್ನು ಉಲ್ಲೇಖಿಸುತ್ತದೆ. ಯಾದವರ/ಸೇವುಣರ ಸಾಮ್ರಾಜ್ಯವು ನಂತರ ಬಂದ ಬಹು-ಉದ್-ದಿನ ಗುರಷ್ಪಾಸನ ದಾಳಿಗೆ ತುತ್ತಾಗಿ ಅವನತಿ ಹೊಂದಿತು (ಪಾಟೀಲ ೧೯೯೭:೫೮).

ದೇವಗಿರಿಯ ಯಾದವರ ಅವನತಿಯ ನಂತರ ಈ ಭಾಗವನ್ನು ಮಹ್ಮದ ಬಿನ್-ತೊಘಲಕನ ಸಂಬಂಧಿಕನಾದ ಬಹು-ಉದ್ -ದೀನ್ ಗುರುಷ್ಪಾಸನು ಸುರಪುರ ತಾಲೂಕಿನ 'ಸಗರನಾಡಿ'ನ ರಾಜ್ಯಪಾಲನಾಗಿ ಆಡಳಿತ ಮಾಡುತ್ತಿದ್ದನು. ನಂತರ ಸ್ವಾತಂತ್ರ್ಯ ಘೋಷಿಸಿಕೊಂಡನು. ಇವರ ಆಳ್ವಿಕೆಯ ನಂತರ ೧೩೧೩ರಲ್ಲಿ ಮುಮ್ಮಡಿ ಸಿಂಘಮನಿಂದ ಸ್ಥಾಪಿತವಾದ 'ಕಂಪಿಲಿಯ ಸಾಮ್ರಾಜ್ಯ'ವೂ ಕುಮಾರರಾಮನ ಕಾಲದಲ್ಲಿ ಸ್ವಲ್ಪ ವಿಸ್ತರಣೆಯಾಯಿತು. ಇತನು ಕೆಲವು ದಿನಗಳ ಕಾಲ 'ಸಗರನಾಡ'ನ್ನು ಸಮರ್ಥವಾಗಿ ಆಳ್ವಿಕೆ ಮಾಡಿದನೆಂದು ಪ್ರತೀತಿಯಿದೆ.

ಗುಲಬರ್ಗಾ ಜಿಲ್ಲೆಯ ಕೆಲವು ಪ್ರಾಂತ್ಯಗಳು ಸುರಪುರ, ಶಹಾಪುರ ಮತ್ತು ಸಗರನಾಡು ಮುಂತಾದ ಪ್ರದೇಶಗಳು ವಿಜಯನಗರದ ಮಾಂಡಲಿಕರಾಗಿ ನಂತರ ಬಂದ ಸುರಪುರ ನಾಯಕರ ಆಳ್ವಿಕೆಗೂ ಒಳಗಾಗಿತ್ತು. ಸುರಪುರದ ನಾಯಕರು ಗೋಸಲವಂಶದವರಾಗಿದ್ದರು. ಈ ವಂಶದ ಮೂಲ ಪುರುಷ

ನರಸಿಂಹನಾಯಕ. ಇತನ ವಂಶಜರೆ ಗುಡಗುಂಟಿ ಮತ್ತು ಸುರಪುರ ಸಂಸ್ಥಾನಗಳ ಮೂಲ ಪುರುಷರು (ಕೃಷ್ಣಮಾಚಾರ್ಯ ೨೦೦೩:೬).

೧೬೩೬ರಲ್ಲಿ "ಗುಡಗುಂಟಿ ಸಂಸ್ಥಾನ"ವು ಗಡ್ಡಿಪಿಡ್ಡನಾಯಕನಿಂದ ಪ್ರಾರಂಭವಾಯಿತು. ಇವರ ವಂಶದ ವಿಷಯವನ್ನು ಮೆಡೋಸ ಟೇಲರರು 'ಈ ಮನೆತನದವರು ಮೊದಲು ಮೈಸೂರು ದೇಶದ ರತ್ನಗಿರಿಯಿಂದ ಬಂದಿದ್ದಾರೆ. ಇವರು ಅಲ್ಲಿ ದೊಡ್ಡ ಪಾಳೇಯಗಾರರಾಗಿದ್ದು, ವಿಜಯನಗರ ಅರಸರ ಕಾಲದಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ನದಿಗಳು ನಡುವಿನ ಪ್ರದೇಶದಲ್ಲಿ ಇವರನ್ನು ತಮ್ಮ ಸೀಮೆಯ ರಕ್ಷಣೆಗಾಗಿ ನೇಮಿಸಿಕೊಂಡಿದ್ದಾರೆಂದು ಹೇಳಿದ್ದಾರೆ. ಈ ಅರಸರಲ್ಲಿ ಗಡ್ಡಿಪಿಡ್ಡನಾಯಕನು ವಾಗಣಗೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡತೊಡಗಿದನು. ನಂತರ ಔರಂಗಜೇಬನ ದಾಳಿಗಳಿಂದ ವಾಗಣಗೇರಿಯು ಔರಂಗಜೇಬನ ವಶವಾಯಿತು. ಗಡ್ಡಿಪಿಡ್ಡನಾಯಕರ ನಂತರ ಬಂದ ಪಿಡ್ಡನಾಯಕನು ಕಾಲದಲ್ಲಿ ೧೭೦೭ರಲ್ಲಿ 'ಸುರಪುರ ಸಂಸ್ಥಾನ'ವು ಸ್ಥಾಪನೆಯಾಯಿತು. ಪಿಡ್ಡನಾಯಕನು 'ಸುರಪುರ'ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಪ್ರಾರಂಭಿಸಿದನು (ಕಪಟರಾಳ ೧೯೭೭:೭೪).

ಸುರಪುರದ ದೊರೆಗಳ ಆಳ್ವಿಕೆಯ ಕಾಲದಲ್ಲಿ ಔರಂಗಜೇಬ, ಬಿಜಾಪುರದ ಆದಿಲ್‌ಶಾಹಿಗಳ ಮತ್ತು ಮರಾಠರ ದಾಳಿಯನ್ನು ಎದುರಿಸಬೇಕಾಯಿತು. ಈ ಎಲ್ಲ ದಾಳಿಗಳನ್ನು ಸುರಪುರದ ಅರಸರು ಸಮರ್ಥವಾಗಿ ಎದುರಿಸಿದ್ದಾರೆ. ಔರಂಗಜೇಬನ ಮರಣದ ನಂತರ ಬಂದ ಉತ್ತರಾಧಿಕಾರಿಗಳೆಲ್ಲರು ದುರ್ಬಲರಾಗಿದ್ದರಿಂದ ದಕ್ಷಿಣದಲ್ಲಿ ಹೈದರಾಬಾದಿನ ನಿಜಾಂ ಅವರು ಮತ್ತು ಮರಾಠರು ಪ್ರಬಲರಾದರು. ಸುರಪುರದ ಅರಸರು ನಿಜಾಂ ಅವರ ಪರವಾಗಿ ಯುದ್ಧಕಾರ್ಯಗಳಲ್ಲಿ ಭಾಗವಹಿಸಿ ಅವರ ಗೌರವಕ್ಕೆ ಪಾತ್ರರಾದರು. ನಿಜಾಂ ಮತ್ತು ಮರಾಠರ ನಡುವೆ ಮೊದಲೇ ವೈಷಮ್ಯವಿತ್ತು. ಪೇಶ್ವೆ ಮತ್ತು ನಿಜಾಂ ಅವರ ನಡುವೆ ಸಂಭವಿಸಿದ ಯುದ್ಧದಲ್ಲಿ ಸುರಪುರದ ದೊರೆ ಇಮ್ಮಡಿ ವೆಂಕಟಪ್ಪನಾಯಕನು ನಿಜಾಂ ಅವರಿಗೆ ಸಹಾಯ ಮಾಡಿದನು. ಈ ಸಮಯದಲ್ಲಿ ಬ್ರಿಟಿಷರ ಹಸ್ತಕ್ಷೇಪ ಭಾರತದಲ್ಲೂ ಭದ್ರವಾಗಿ ಬೇರೂರಿತು ನಿಜಾಂ ಅವರು ಬ್ರಿಟಿಷರ ಅಧೀನತೆಗೊಳಗಾದ ನಂತರ ಸುರಪುರ ಸಂಸ್ಥಾನವು ಪರೋಕ್ಷವಾಗಿ ನಿಜಾಂ ಅವರ ಅಂಕೆಯಲ್ಲಿದ್ದರಿಂದ ಈ ಸಂಸ್ಥಾನದಲ್ಲೂ ಬ್ರಿಟಿಷರು ನೆಲೆಯೂರಿದರು (ಪಾಟೀಲ ೧೯೯೭:೮೦).

ನಿಜಾಂ ಅವರು ಸುರಪುರ ಸಂಸ್ಥಾನದಿಂದ ೧೫ ಲಕ್ಷ ರೂಪಾಯಿಯನ್ನು ವರ್ಷಕ್ಕೆ ಪರಗಣಿಯನ್ನು ತೆಗೆದುಕೊಳ್ಳುತ್ತಿದ್ದರು. ೧೮೪೧ರಲ್ಲಿ ಸುರಪುರದ ರಾಜಾಕೃಷ್ಣಪ್ಪನಾಯಕ ಮರಣ ಹೊಂದಿದನು. ಈತನ ಮಗ ನಾಲ್ವಡಿ ವೆಂಕಟಪ್ಪನಾಯಕನ್ನು ಅಪ್ರಾಪ್ತವಯಸ್ಕನಾಗಿದ್ದನು. ಬ್ರಿಟಿಷರು ಮತ್ತು ನಿಜಾಂ ಅವರ ಕುತಂತ್ರಗಳ ಪರಿಣಾಮವಾಗಿ ಸುರಪುರ ಸಂಸ್ಥಾನದ ಬೊಕ್ಕಸ ಖಾಲಿಯಾಯಿತು. ಈ ಕಾಲಕ್ಕೆ ಸುರಪುರದ ರಾಜಕೀಯ ಕಾರ್ಯಭಾರಿಯಾಗಿ ಬ್ರಿಟಿಷ ಸರ್ಕಾರವು ಮೆಡೋಸ ಟೇಲರನನ್ನು ೧೮೪೩ರಲ್ಲಿ ನೇಮಿಸಿತು.

ಈತನು ಬಾಲಕ ವೆಂಕಟಪ್ಪ ನಾಯಕನ ಮೇಲ್ವಿಚಾರಣೆಯ ಜೊತೆಗೆ ಸಂಸ್ಥಾನದ ಆಡಳಿತ ಸುಧಾರಣೆಗಳನ್ನು ಜಾರಿಗೊಳಿಸಿದರು. ಅಲ್ಲದೇ ರಾಜಕೀಯ ಪರಿಸ್ಥಿತಿಯನ್ನು ಉತ್ತಮಪಡಿಸಿ ಬೇಡ ಸಮುದಾಯದ ಪ್ರೀತಿ ವಿಶ್ವಾಸಕ್ಕೂ ಪಾತ್ರನಾದನು. ೧೮೫೩ರಲ್ಲಿ ವೆಂಕಟಪ್ಪನಾಯಕನು ಪ್ರಬುದ್ಧವಯಸ್ಸಿಗೆ ಬಂದ ನಂತರ ಮೆಡೋಸ ಟೇಲರನು ಸುರಪುರದ ಅಧಿಕಾರವನ್ನು ವೆಂಕಟಪ್ಪನಾಯಕನಿಗೆ ವಹಿಸಿಕೊಟ್ಟನು (ಕೃಷ್ಣರಾವ ಮತ್ತು ಕೇಶವಭಟ್ಟ ೧೯೭೦:೬೨೭).

೧೮೫೩ರಲ್ಲಿ ರಾಜ್ಯಸೂತ್ರಗಳನ್ನು ವಹಿಸಿಕೊಂಡ ವೆಂಕಟಪ್ಪನಾಯಕನು ವಿದೇಶಿಯರಾದ ಬ್ರಿಟಿಷರ ನಿರಂಕುಶ ವರ್ತನೆ ವಿರುದ್ಧ ಜನರ ಅಸಮಾಧಾನವನ್ನು ಕಂಡ, ಈತನು ಹುಟ್ಟುನಾಡಿನ ವಿಮೋಚನೆಗಾಗಿ ಹೋರಾಡಲು ಕಟಿಬದ್ಧನಾದನು. ಈ ಉದ್ದೇಶ ಸಾಧನೆಗಾಗಿ ರೋಹಿಲರನ್ನು ಅರಬ್ಬರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡನು. ನೆರೆಹೊರೆಯ ಸಂಸ್ಥಾನಗಳ ಅರಸರು ರಾಜಾ ನಾಲ್ವಡಿ ವೆಂಕಟಪ್ಪನಾಯಕನಿಗೆ ಸಹಾಯ ನೀಡಲು ಕಾತರರಾಗಿದ್ದರು. ಈ ಎಲ್ಲ ನಾಯಕರು ದಕ್ಷಿಣದ ಭಾರತದ ಹೋರಾಟದ ನೇತೃತ್ವವನ್ನು ವೆಂಕಟಪ್ಪನಾಯಕರು ವಹಿಸಿಕೊಳ್ಳಬೇಕೆಂದು ನಿರ್ಧರಿಸಿದರು(ಕೃಷ್ಣಮಾಚಾರ್ಯ ೨೦೦೩: ೨೨೦).

ಇದರಿಂದ ಸುರಪುರವು 'ಸ್ವಾತಂತ್ರ್ಯ ಸಂಗ್ರಾಮ'ದ ಕೇಂದ್ರವಾಗಿ ಪರಿಣಮಿಸಿತು. ಬ್ರಿಟಿಷ ಸಾಮ್ರಾಜ್ಯವನ್ನು ಉರುಳಿಸುವವ ನಾನಾ ಯೋಜನೆಗಳ ರಹಸ್ಯ ಸ್ಥಾನ ಸುರಪುರವಾಯಿತು. ಈ ಕ್ರಾಂತಿಯ ಕಿಡಿಯನ್ನು ಹಚ್ಚಿ ಸೈನ್ಯದಲ್ಲಿ ದಂಗೆಯೆಬ್ಬಿಸಲು ಸುರಪುರದ ರಾಜನು ಮಹಿಪಾಲಸಿಂಗ್ ಎಂಬ ಗೂಢಚಾರನನ್ನು ಕಳುಹಿಸಿದಾಗ ಈತನು ಬ್ರಿಟಿಷರಿಂದ ಬಂಧಿಯಾದನು. ಈತನಿಂದ ಈ ಎಲ್ಲ ದಂಗೆಗೆ ವೆಂಕಟಪ್ಪನಾಯಕ ಕಾರಣ ಎಂದು ಬ್ರಿಟಿಷರಿಗೆ ಗೊತ್ತಾಯಿತು. ಆದ್ದರಿಂದ ಈ ಪ್ರದೇಶದಲ್ಲಿ ಪ್ರಬಲವಾದ ದಂಗೆಯಾಗಬಹುದೆಂದು ತಿಳಿದ ಬ್ರಿಟಿಷ್ ಕ್ಯಾಪ್ಟನ್ ಬ್ಯಾರಿಯ ನೇತೃತ್ವದಲ್ಲಿ ಸೈನಿಕ ತುಕಡಿಯನ್ನು ಸುರಪುರಕ್ಕೆ ಕಳಿಸಿದರು.

ನಾಲ್ವಡಿ ವೆಂಕಟಪ್ಪ ನಾಯಕರು ಸುರಪುರವನ್ನು ಶೂರರಪುರವನ್ನಾಗಿ ಮಾಡಿ, ಕಡೆಗೂ ಬ್ರಿಟಿಷರ ವಿರುದ್ಧ ಸಮರಕ್ಕೆ ಸಿದ್ಧನಾದರು. ೧೮೫೮ ಫೆಬ್ರವರಿ ೭ ರಂದು ಬ್ರಿಟಿಷ ಸೈನ್ಯ ಕ್ಯಾಪ್ಟನ್ ವಿಂಡಹ್ಯಾಮ್ ನೇತೃತ್ವದಲ್ಲಿ ಸುರಪುರದಿಂದ ೫ ಕಿ.ಮೀ. ದೂರದಲ್ಲಿರುವ ರುಕ್ಮಾಪುರದಲ್ಲಿ ಬೀಡುಬಿಟ್ಟರು. ಬ್ರಿಟಿಷರ ಇನ್ನೊಂದು ತುಕಡಿ ಮೇಜರ್ ಹ್ಯಾಗ್, ನೇತೃತ್ವದಲ್ಲಿ ಬಂದಿತು. ಕುದುರೆದಳದ ಸೇನಾಪತಿ ಜಾರ್ಜ ನ್ಯೂಬರಿ ಸುರಪುರದ ಮೇಲೆ ದಾಳಿ ಮಾಡಿದರು. ಸುರಪುರದ ಸೈನಿಕರೊಡನೆ ಕಾದಾಡುತ್ತಲೇ ಜಾರ್ಜ್ ನ್ಯೂಬರಿ ಮರಣ ಹೊಂದಿದರು. ಆತನ ಸಹಾಯಕ ಲೆಫ್ಟಿನೆಂಟ್ ಸ್ಟ್ಯೂವರ್ಡನಿಗೆ ಮಾರಣಾಂತಿಕ ಗಾಯಗಳಾದವು. ಬ್ರಿಟಿಷ ಸೈನ್ಯ ಇದರಿಂದ ಕಕ್ಕಾಬಿಕ್ಕಿಯಾಯಿತು. ಇಂದಿಗೂ ಕೂಡಾ ಕ್ಯಾಪ್ಟನ್ ನ್ಯೂಬೆರಿಯ ಸಮಾಧಿ ರುಕ್ಮಾಪುರದಲ್ಲಿದೆ (ಭಾಸ್ಕರರಾವ ೨೦೦೧:೫೧).

ಬ್ರಿಟಿಷರ ಭಾರಿ ಸೈನ್ಯವು ಕೋಟೆಯ ಮೇಲೆ ಆಕ್ರಮಣ ಮಾಡಿತಲ್ಲದೆ ಭೀಮರಾಯನೆಂಬ ವಂಚಕನ ಮೂಲಕ ಕೋಟೆಯ ಗುಪ್ತ ಮಾಹಿತಿ ತಿಳಿದುಕೊಂಡ ಬ್ರಿಟಿಷರು ಕೋಟೆಯನ್ನು ವಶಪಡಿಸಿಕೊಂಡರು. ಭೀಮರಾಯರು ಕೈಗೊಂಡ ಈ ಘೋರ ವಂಚನೆಯ ಕಥೆ ಸುರಪುರದಲ್ಲಿ ಇನ್ನು ಪ್ರಚಲಿತವಿದೆ. ಇಷ್ಟಾದರೂ ಧೃತಿಗೆಡದೆ ವೆಂಕಟಪ್ಪನಾಯಕನು ನಿಜಾಂ ಅವರನ್ನು ಸಹಾಯ ಕೇಳಲು ಹೈದರಾಬಾದಿಗೆ ಹೋದರು. ಹೈದರಾಬಾದಿನ ನಿಜಾಂ ಅವರ ಮಂತ್ರಿಯಾದ ಸಾಲಾರಜಂಗನ ಮೂಲಕ ವೆಂಕಟಪ್ಪನಾಯಕನನ್ನು ಬಂಧಿಸಿ ಬ್ರಿಟಿಷರಿಗೆ ಒಪ್ಪಿಸಲಾಯಿತು. ಈ ವೀರಯೋಧನ ಅಂತ್ಯದ ಬಗ್ಗೆ ಭಿನ್ನಾಭಿಪ್ರಾಯಗಳು ಕಂಡುಬಂದಿದೆ. ಇತನನ್ನು ಬಂಧಿಸಿ ಸಿಕಂದರಾಬಾದ್ ಜೈಲ್ಲಿನಲ್ಲಿಡಲಾಯಿತು. ಆಗ ವೆಂಕಟಪ್ಪನಾಯಕರು ಮೆಡೋಸ ಟೇಲರನನ್ನು ಭೇಟಿಯಾಗಿ 'ನನ್ನನ್ನು ಒಬ್ಬ ಕಳ್ಳನ ಹಾಗೆ ಗಲ್ಲಿಗೆ ಹಾಕಬೇಡಿ, ಅದರ ಬದಲು ತೋಪಿನ ಬಾಯಿಗೆ ಕಟ್ಟಿ ಹಾರಿಸಿರಿ' ಎಂದು ಹೇಳಿದ್ದನ್ನು ಸ್ವತಃ ಮೆಡೋಸ ಟೇಲರರು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ (ಭಾಸ್ಕರರಾವ್, ೨೦೦೧:೫೨). ವಿಚಾರಣೆಗಾಗಿ ಈತನನ್ನು ಕರೆದುಕೊಂಡು ಹೋಗುತ್ತಿರುವಾಗ ಅಂಬರಪೇಟದಲ್ಲಿ ಗುಂಡು ಹಾರಿಸಿಕೊಂಡು ಮರಣ ಹೊಂದಿದ. ಆದರೆ ವೆಂಕಟಪ್ಪನಾಯಕನ ಮರಣದ ಬಗ್ಗೆ ಭಿನ್ನಾಭಿಪ್ರಾಯಗಳು ಕಂಡುಬಂದಿವೆ. ಅವು ಗೊಂದಲದಲ್ಲಿಯೇ ಉಳಿದಿವೆ. ಬ್ರಿಟಿಷರ ಅನ್ಯಾಯ, ದಬ್ಬಾಳಿಕೆಯ ವಿರುದ್ಧ ಹೋರಾಡಿದ ವೆಂಕಟಪ್ಪನಾಯಕನು ಹೇಡಿಯಂತೆ ಗುಂಡಿಟ್ಟುಕೊಳ್ಳಲು ಸಾಧ್ಯವಿಲ್ಲ. ಇವರ ಮರಣದ ಬಗ್ಗೆ ಎಲ್ಲವನ್ನು ತಿಳಿದುಕೊಂಡಿರುವ ಅಂದಿನ ಬ್ರಿಟಿಷ್ ಅಧಿಕಾರಿ ಮೆಡೋಸ ಟೇಲರ್ ರಾಜನ ಅಂತ್ಯದ ಮೌನವಹಿಸಿರುವುದು ಅನುಮಾನಕ್ಕೆ ಎಡೆಮಾಡಿಕೊಟ್ಟಿದೆ.

ರಾಜಾನಾಲ್ವಡಿ ವೆಂಕಟಪ್ಪನಾಯಕನ ಮರಣದ ನಂತರ ಸುರಪುರವನ್ನು ೧೮೫೭ರಲ್ಲಿ ನಡೆದ ಈ ದಂಗೆಗಳಲ್ಲಿ ಬ್ರಿಟಿಷರಿಗೆ ಸಹಾಯ ಸಲ್ಲಿಸಿದ ಹೈದರಾಬಾದ ನಿಜಾಂ ಅವರಿಗೆ ಸುರಪುರ ಪ್ರದೇಶವನ್ನು ೪-೩-೧೮೬೧ ರಂದು ಕೊಡಲಾಯಿತು. ಸುರಪುರವು ಆಂಗ್ಲರಿಂದ ನಿಜಾಂ ಅವರ ವಶಕ್ಕೆ ಹೋದನಂತರ 'ಶೋರಾಪುರ' ಎಂಬ ಹೆಸರು ಬಂದಿತು. ನಿಜಾಂ ಅವರ ಆಳ್ವಿಕೆಗೆ ಒಳಗಾದ ಪ್ರದೇಶಗಳು ಬ್ರಿಟಿಷರ ಆಳ್ವಿಕೆಗೊಳಪಟ್ಟಿದ್ದವು. ೧೫ ಆಗಸ್ಟ ೧೯೪೭ರಂದು ಭಾರತ ಸ್ವಾತಂತ್ರ್ಯವಾದಾಗ ಬ್ರಿಟಿಷರು ಭಾರತದಿಂದ ಹೋಗಬೇಕೆಂಬ ಸಮಯದಲ್ಲಿ ನಿಜಾಂ ಸಂಸ್ಥಾನಕ್ಕೆ ಸ್ವತಂತ್ರ್ಯವಾಗಿರಬಹುದು ಇಲ್ಲವೆ, ಭಾರತದೊಂದಿಗೆ / ಪಾಕಿಸ್ತಾನದೊಂದಿಗೆ ಸೇರಲು ಹೇಳಿದರು. ೧೮ ಸೆಪ್ಟೆಂಬರ್ ೧೯೪೮ರವರೆಗೆ ನಿಜಾಂ ಅವರು ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಿಗೆ ಸ್ವಾತಂತ್ರ್ಯ ನೀಡದೆ ತನ್ನ ಆಳ್ವಿಕೆಗೆ ಒಳಪಡಿಸಿಕೊಂಡರು. ಇದರಿಂದ ಈ ಭಾಗದ ಜನರು ಸ್ವಾತಂತ್ರ್ಯಕ್ಕಾಗಿ ನಿಜಾಂ ಅವರ ವಿರುದ್ಧ ಹೋರಾಡಿ ಸುರಪುರ ಪ್ರದೇಶವನ್ನು ಸ್ವಾತಂತ್ರ್ಯಗೊಳಿಸಿದರು.

**ಟಿಪ್ಪಣಿಗಳು**

೧. ಕೆ.ಪೆದ್ದಯ್ಯನವರು ಮೂಲತಃ ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಗೆ ಸೇರಿದವರು. ಅವರು ಸಂಶೋಧನೆಯನ್ನು ಕೈಗೊಂಡಿರುವುದು ಪುಣೆಯ ಡೆಕ್ಕನ್ ಕಾಲೇಜ್ ಪುಣೆಯಲ್ಲಿ. ಆದರೆ ಅವರ ಸಂಶೋಧನಾ ಕಾರ್ಯಕ್ಷೇತ್ರದ ಕೇಂದ್ರ ಬಿಂದು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಹುಣಸಗಿಯಾಗಿದೆ. ಕೆ.ಪೆದ್ದಯ್ಯನವರು ೧೯೬೫ರಲ್ಲಿ ಯುಜಿಸಿ ನೆರವಿನಿಂದ 'Investigation into the Neolithic culture of Shorapur Doab in South India' ಎಂಬ ವಿಷಯ ಕುರಿತು ಸಂಶೋಧನೆ ಮಾಡಿ ೧೯೬೮ರಲ್ಲಿ ಪಿಎಚ್.ಡಿ.ಪದವಿ ಪಡೆದರು. 'The acheulian Culture of the Hunasagi Valley' ಎಂಬ ಪ್ರಬಂಧವು ಹುಣಸಗಿಯ ಬಗ್ಗೆ ಕೈಗೊಂಡಿರುವ ಸಂಶೋಧನೆ ಅವರ ಪ್ರಾಗೈತಿಹಾಸಿಕ ತಜ್ಞತೆಗೆ ಹಿಡಿದ ಕನ್ನಡಿಯಾಗಿದೆ.

೨. ರಾಬರ್ಟ್ ಬ್ರೂಸಫೂಟ್ ಅವರು ಒಬ್ಬ ಭೂ ವಿಜ್ಞಾನಿ. ಬ್ರೂಸ್‌ಫೂಟ್‌ರು ಸುರಪುರ ತಾಲೂಕಿನ ಕೃಷ್ಣಾನದಿಯ ದಂಡೆಯ ಮೇಲೆ ಇರುವ ಎಡೆಹಳ್ಳಿಯಲ್ಲಿ ಆದಿ ಹಳೇ ಶಿಲಾಯುಗದ ಕಲ್ಲಿನ ಕೊಡಲಿಗಳನ್ನು ಶೋಧ ಮಾಡಿದರು.

೩. ಮೆಡೋಸ ಟೇಲರ ಅವರು ೧೮೪೧ರಲ್ಲಿ ರಾಜಾ ಕೃಷ್ಣಪ್ಪನಾಯಕನ ಮರಣದ ನಂತರ ಆತನ ಮಗ ನಾಲ್ಕನೇ ವೆಂಕಟಪ್ಪನಾಯಕನು ಅಪ್ರಾಪ್ತ ವಯಸ್ಸಿನವನಾಗಿದ್ದರಿಂದ ಸುರುಪುರ ಸಂಸ್ಥಾನದ ಆಡಳಿತ ನಡೆಸಲು ಬ್ರಿಟಿಷರು ನಿಜಾಂ ಅವರ ಸಹಕಾರದೊಂದಿಗೆ ಬ್ರಿಟಿಷರ ರಾಜಕೀಯ ಪ್ರತಿನಿಧಿ ಮೆಡೋಸ ಟೇಲರನನ್ನು ನೇಮಿಸಿದರು. ಮೆಡೋಸ ಟೇಲರರು ಅನೇಕ ಸಂಶೋಧನೆಗಳನ್ನು ನಡೆಸಿದ್ದಾರೆ. ಅದರಲ್ಲಿ ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿಯ ಅವಶೇಷಗಳೆಂದು ಗುರುತಿಸಲಾದ ಕೆಲವು ಮಹತ್ವದ ಕಲ್ಲು ವೃತ್ತಗಳ ಮತ್ತು ಕಲ್ಮನೆಗಳಿರುವ ನಿವೇಶನಗಳನ್ನು ರಾಜನಕೋಳೂರ, ಹಗರಟಗಿಯಲ್ಲಿ ಪತ್ತೆ ಮಾಡಿ ಅಧ್ಯಯನ ಮಾಡಿದರು.

೪. ಅ.ಸುಂದರ ಅವರು ಸುರಪುರ ತಾಲೂಕಿನ ಬೂದಿಹಾಳಗಳಲ್ಲಿ ಶಿಲಾ ತಾಮ್ರಯುಗದ ಹಂತದಲ್ಲಿಯ ನೂತನ ಶಿಲಾಯುಗದ ಜನವಸತಿ ನೆಲೆಗಳನ್ನು ಗುರುತಿಸಿದ್ದಾರೆ.

೫. 'ಸೆಂಟ್ ಅಶೂಲ್' ಎಂಬುದು ಫ್ರಾನ್ಸ್ ರಾಷ್ಟ್ರದ ಒಂದು ಸ್ಥಳದ ಹೆಸರು ಹುಣಸಗಿಯಲ್ಲಿ ಕೆ.ಪೆದ್ದಯ್ಯನವರು ಸಂಶೋಧಿಸಿದ ಆದಿಮಾನವನ ಪ್ರಾಚ್ಯವಸ್ತುಗಳು ಫ್ರಾನ್ಸ್ ದೇಶದ ಸೆಂಟ್ ಅಶೂಲ್ ಎಂಬಲ್ಲಿ ದೊರೆತ ಅವಶೇಷಗಳನ್ನು ವಿಶೇಷವಾಗಿ ಹೋಲುವುದರಿಂದ ಪ್ರಾಕ್ತನ ತಜ್ಞರು ಇದಕ್ಕೆ "ಅಶೂಲಿಯನ್ ಸಂಸ್ಕೃತಿ" ಎಂದು ಕರೆದಿದ್ದಾರೆ (ಕೃಷ್ಣ, ೧೯೯೬:೧೬).

ವಿಮೋಚನೆ ಎಂಬ ಪರಿಕಲ್ಪನೆಯು ದಾಸ್ಯವನ್ನು, ಭೇದವನ್ನು, ಒಡೆದು ಆಳುವುದನ್ನು ತೊಡೆದು ಹಾಕುವಂತಹದ್ದಾಗಿದೆ ಎಂದು ವಿಶ್ಲೇಷಿಸಬಹುದು. ಹೈದರಾಬಾದ ವಿಮೋಚನಾ ಹೋರಾಟವು ಹಿಂದೂ-ಮುಸ್ಲಿಂರ ನಡುವೆ ನಡೆದ ಹೋರಾಟವೆಂದು "ಒಪ್ಪಿತವಾಗಿರುವ" ಚರಿತ್ರೆಯಲ್ಲಿ ದಾಖಲಾಗಿದೆ. ಹೋರಾಟವು ನಿರಂಕುಶ ಪ್ರಭುತ್ವದ ವಿರುದ್ಧ ನಡೆದ ಜನತೆಯ ಹೋರಾಟವಾಗಿದೆ ಎಂಬುದು ಜನಜನಿತವಾಗಿದೆ. ಈ ಹೋರಾಟದಲ್ಲಿ ಮುಸ್ಲಿಂರು ಕೂಡಾ ನಿಜಾಂಶಾಹಿಯ ನಿರಂಕುಶ ಆಳ್ವಿಕೆಯ ವಿರುದ್ಧ ಪ್ರತಿಭಟನೆ ಮಾಡಿರುವುದು ಕಂಡುಬರುತ್ತದೆ.

ಈ ವಿಮೋಚನಾ ಹೋರಾಟಕ್ಕೆ ಭಾಷೆಯ ದಬ್ಬಾಳಿಕೆ ಕೂಡ ಮುಖ್ಯವಾದ ಕಾರಣವಾಗಿದೆ. ಹೈದರಾಬಾದ ಸಂಸ್ಥಾನ ಅಸ್ತಿತ್ವಕ್ಕೆ ಬಂದ ಮೇಲೆ ಹೈದರಾಬಾದಿನ ನಿಜಾಂ ಅವರು ಉರ್ದು ಭಾಷೆಯನ್ನು ರಾಜ್ಯಭಾಷೆಯನ್ನಾಗಿ ಮಾಡಿ ಉಳಿದ ಭಾಷೆಗಳಾದ ಮರಾಠಿ, ತೆಲುಗು, ಕನ್ನಡ ಭಾಷೆಗಳನ್ನು ನಿರ್ಲಕ್ಷಿಸಿದರು. ಈ ಭಾಗದಲ್ಲಿ ಕನ್ನಡ ಭಾಷೆ ಅಸ್ತಿತ್ವವನ್ನು ಕಳೆದುಕೊಳ್ಳುವ ಭೀತಿಯಿತ್ತು. ಇದರಿಂದಾಗಿ ಕನ್ನಡಿಗರು ಹಿಂದೂ ರಾಷ್ಟ್ರೀಯವಾದಿ ಬರಹಗಾರರ ಪ್ರಕಾರ "ಹಿಂದುಗಳು" ತಮ್ಮ ಭಾಷೆಗೆ ಉಳಿಗಾಲವಿಲ್ಲವೆಂದು ತಿಳಿದು ತಮ್ಮ ಮೇಲೆ ಒತ್ತಡ ಹೇರಿದ ಭಾಷೆಯ ವಿರುದ್ಧ ಹೋರಾಟ ಕೈಗೊಂಡರು. ಕನ್ನಡ ಭಾಷೆ, ಸಂಸ್ಕೃತಿಯ ರಕ್ಷಣೆಗಾಗಿ ನಿಜಾಂ ಸಾರ್ವಭೌಮತ್ವವನ್ನು ಈ ಹೋರಾಟ ಕೈಗೊಳ್ಳುವುದರ ಮೂಲಕ ಧಿಕ್ಕರಿಸತೊಡಗಿದರು.

ನಿರಂಕುಶ ಆಡಳಿತದ ವಿರುದ್ಧ ಪ್ರತಿಭಟಿಸಿ ಸ್ವತಂತ್ರರಾಗಲು ಬಯಸಿದ ಪ್ರಜೆಗಳ ಮೇಲೆ ನಿಜಾಂ ಅವರು ರಜಾಕಾರರ ಮೂಲಕ ದಬ್ಬಾಳಿಕೆಯನ್ನು ಆರಂಭಿಸಿದರು. ಈ ರೀತಿಯಾಗಿ ಇಡೀ ಸಂಸ್ಥಾನದಲ್ಲಿ ಪ್ರಜಾ ಆಂದೋಲನ ಪ್ರಾರಂಭವಾದದ್ದನ್ನು ಕಂಡು ನಿಜಾಂ ಅವರ ಪೋಲೀಸರು, ರಜಾಕಾರರು[7] ಮತ್ತು ಪಠಾಣರು ಹಿಂಸಾಕೃತ್ಯಗಳನ್ನು ಪ್ರಾರಂಭಿಸಿದರು. ಪ್ರತಿಯಾಗಿ ನಡೆದ ಈ ವಿಮೋಚನಾ ಹೋರಾಟದಲ್ಲಿ ಆರ್ಯ ಸಮಾಜ ಮತ್ತು "ರಾಜ್ಯ ಕಾಂಗ್ರೆಸ್‌ನ" ಪಾತ್ರ ಮಹತ್ತರವಾಗಿವೆ. ಆರ್ಯ ಸಮಾಜದ ಸಂಘಟನೆಯು ಹೈದರಾಬಾದ ಸಂಸ್ಥಾನದ ವಿಮೋಚನಾ ಹೋರಾಟದಲ್ಲಿ ಹಿಂಸಾತ್ಮಕ ಮಾರ್ಗವನ್ನು ಅನುಸರಿಸಿದರೆ, ರಾಜ್ಯ ಕಾಂಗ್ರೆಸ್ ಅಹಿಂಸಾತ್ಮಕ ಮಾರ್ಗವನ್ನು ಅನುಸರಿಸಿತು. ಇವೆರಡು ಸಂಘ ಸಂಸ್ಥೆಗಳು ಜನಜಾಗೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು.

ವಿಮೋಚನಾ ಹೋರಾಟಕ್ಕೆ ಕಾರಣವಾದ ಅಂಶಗಳಲ್ಲಿ ಸ್ವಾತಂತ್ರ್ಯ ಹೋರಾಟವು ಒಂದಾಗಿದೆ. ಸುರಪುರ ಪ್ರದೇಶದಲ್ಲಿ ೩ ರೀತಿಯ ಹೋರಾಟಗಳು ಪ್ರಮುಖವಾಗಿ ಕಂಡುಬಂದಿವೆ. ಅವುಗಳನ್ನು

ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಹೈದರಾಬಾದ ವಿಮೋಚನಾ ಹೋರಾಟ ಎಂದು ವರ್ಗೀಕರಿಸಬಹುದು. ಈ ಮೂರು ಹೋರಾಟಗಳು ನಿರಂಕುಶ ಪ್ರಭುತ್ವದ ವಿರುದ್ಧ ಕೈಗೊಂಡ ಹೋರಾಟಗಳಾಗಿವೆ ಎಂಬುದು ಗಮನಾರ್ಹವಾಗಿದೆ. ಈ ಎಲ್ಲ ಹೋರಾಟಗಳಲ್ಲಿ ಅತಿ ಹೆಚ್ಚು ಹಿಂಸಾತ್ಮಕ ಕಾರ್ಯಚಟುವಟಿಕೆಗಳು ಕಂಡುಬಂದಿದ್ದು ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಮಾತ್ರ ಎಂಬುದು ಗಮನಾರ್ಹವಾಗಿದೆ.

ನಿಜಾಂ ಅವರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಮತ್ತು ಈ ಪ್ರದೇಶವನ್ನು "ಮುಸ್ಲಿಂ ರಾಜ್ಯವನ್ನಾಗಿ" ಮಾಡಿ ಸ್ವತಂತ್ರಗೊಳಿಸಬೇಕೆಂದು ತಿಳಿದು ತನ್ನ ಖಾಸಗೀ ಪಡೆಯಾದ ರಜಾಕಾರರನ್ನು ನೇಮಿಸಿದರು. ಕ್ರಮೇಣವಾಗಿ ಕಾಸಿಂ ರಜ್ವಿಯ ನೇತೃತ್ವದಲ್ಲಿ ರಜಾಕಾರರು ಹೈದರಾಬಾದ ಸಂಸ್ಥಾನದಲ್ಲೂ ಹಸ್ತಕ್ಷೇಪ ಮಾಡತೊಡಗಿದರು. ಕ್ರಮೇಣ ಹೈದರಾಬಾದಿನ ನಿಜಾಂ ಅವರೇ ರಜಾಕಾರರ ಅಧೀನಕ್ಕೊಳಗಾಗುವ ಪರಿಸ್ಥಿತಿ ಬಂದಿತು. ರಜಾಕಾರರು ಹೈದರಾಬಾದ ಪ್ರಾಂತ್ಯದ ಜನರನ್ನು ಹಿಂಸಿಸುವುದರ ಮೂಲಕ ಅವರ ಆಸ್ತಿ-ಸಂಪತ್ತನ್ನು ಲೂಟಿ ಮಾಡುವುದು, ಮಂದಿರಗಳ ನಾಶ ಮುಂತಾದ ಕೃತ್ಯಗಳಲ್ಲಿ ತೊಡಗಿದರು. ಅನೇಕ ಗ್ರಾಮಗಳನ್ನು ನಾಶಪಡಿಸತೊಡಗಿದರು. ಇವರ ಕಾರ್ಯಚಟುವಟಿಕೆಗಳಿಂದ ರೋಸಿ ಹೋದ ಜನರು "ಶಿಬಿರಗಳನ್ನು"[೨] ಸ್ಥಾಪಿಸುವುದರ ಮೂಲಕ ರಜಾಕಾರರ ಹೋರಾಟವನ್ನು ತಡೆದರು. ರಜಾಕಾರರ ಹೋರಾಟವು ತೀವ್ರವಾದಾಗ ಈ ಹೋರಾಟದ ಮುಖಂಡರು ಭಾರತ ಸರ್ಕಾರದ ಗೃಹಮಂತ್ರಿ ಸರ್ದಾರ ವಲ್ಲಭಬಾಯಿ ಪಟೇಲರೊಂದಿಗೆ ಮಾತುಕತೆ ನಡೆಸಿದ ಫಲವೇ ಪಟೇಲರ "ಪೋಲೀಸ್ ಕಾರ್ಯಚರಣೆ". ಈ ಕಾರ್ಯಾಚರಣೆಯ ಪರಿಣಾಮವಾಗಿ ರಜಾಕಾರರು ಮತ್ತು ನಿಜಾಂ ಅವರ ಪೊಲೀಸರು ಸೋಲೊಪ್ಪಿಕೊಂಡರು. ಅಂತಿಮವಾಗಿ ೧೯೪೮ ರಂದು ಹೈದರಾಬಾದನ ನಿಜಾಂ ಮೀರ ಉಸ್ಮಾನ ಅಲೀಖಾನ ಅವರು ಭಾರತ ಸರ್ಕಾರಕ್ಕೆ ಶರಣಾದರು.

ಈ ಎಲ್ಲಾ ವಿವರಗಳನ್ನು ಒಳಗೊಂಡಿರುವ ಪ್ರಸ್ತುತ ಅಧ್ಯಾಯವು ಸ್ವಾತಂತ್ರ್ಯ ಹೋರಾಟ, ಆರ್ಯ ಸಮಾಜದ ಪಾತ್ರ, ಭಾಷೆಯ ದಬ್ಬಾಳಿಕೆ, ವಂದೇ ಮಾತರಂ ಚಳುವಳಿ, ಹೈದರಾಬಾದ ರಾಜ್ಯ ಕಾಂಗ್ರೆಸನ ಪಾತ್ರ ಮತ್ತು ರಜಾಕಾರರ ದಬ್ಬಾಳಿಕೆ ಮುಂತಾದ ವಿವರಗಳನ್ನು ಒಳಗೊಂಡಿದೆ. ಇವುಗಳ ಬಗ್ಗೆ ಲಭ್ಯವಿರುವ ವಿವರಗಳನ್ನು ಕಲೆಹಾಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ೩.೧. ಸ್ವಾತಂತ್ರ್ಯ ಹೋರಾಟ

ಸ್ವಾತಂತ್ರ್ಯ ಹೋರಾಟಕ್ಕಾಗಿ ಈ ಭಾಗದ ಜನರು ವಿವಿಧ ಮಟ್ಟಗಳಲ್ಲಿ ಹೋರಾಟ ಕೈಗೊಂಡಿದ್ದರು. ಮೊದಲನೆಯದಾಗಿ ರಾಷ್ಟ್ರಮಟ್ಟದಲ್ಲಿ ಬ್ರಿಟಿಷರ ವಿರುದ್ಧವಾಗಿ ಮತ್ತು ಎರಡನೆಯದಾಗಿ ಸಂಸ್ಥಾನ ಮಟ್ಟದಲ್ಲಿ ಆಳುತ್ತಿದ್ದ ನಿಜಾಂ ಅವರ ವಿರುದ್ಧವಾಗಿ ಈ ಪ್ರಾಂತ್ಯದ ಜನರು ಹೋರಾಟ ಮಾಡಿದ್ದಾರೆ.

ಈ ಭಾಗದ ಜನರು ಜನಮುಖಿ ಸರ್ಕಾರವೇ ಇಲ್ಲದಂತಹ ಪರಿಸ್ಥಿತಿಯ ಸಂದರ್ಭದಲ್ಲಿ ಕೈಗೊಂಡ ಹೋರಾಟವಿದು. ಜನರು ತಮ್ಮ ಮೇಲೆ ಆಗುತ್ತಿರುವ ಅನ್ಯಾಯಗಳನ್ನು ತಡೆಗಟ್ಟಲು ಉಗ್ರರೂಪದ ಹೋರಾಟವನ್ನು ಕೈಗೊಂಡರು. ಈ ಹೋರಾಟವನ್ನು ಸದೆಬಡಿಯಲು ನಿಜಾಂ ಅವರ ಸರಕಾರ ಪ್ರಯತ್ನಿಸಿ ವಿಫಲವಾಯಿತು.

ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಎಂ.ವಿ.ಕೃಷ್ಣರಾವರ 'ಕರ್ನಾಟಕದ ಇತಿಹಾಸ ದರ್ಶನ'(೧೯೭೦), ಆರ್.ಎಲ್. ಅನಂತರಾಮಯ್ಯನವರ 'ಸ್ವಾತಂತ್ರ್ಯದ ಹೋರಾಟ'(೧೯೭೨ (೨೦೦೧), ಕಪಟರಾಳ ಕೃಷ್ಣರಾವರ 'ಸುರಪುರ ಸಂಸ್ಥಾನದ ಇತಿಹಾಸ'(೧೯೭೭), ಆರ್.ರೇವಣಸಿದ್ಧಯ್ಯನವರು 'ಶೋರಾಪುರ ತಾಲೂಕಾ ದರ್ಶನ'(೧೯೮೬), ಬಿ.ಸಿ.ಮಹಾಬಲೇಶ್ವರಪ್ಪ ಅವರ 'ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು'(೧೯೯೭), ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್' (೧೯೯೭), ಎಚ್.ಎಸ್.ಪಾಟೀಲರ 'ವಿಮೋಚನೆ'(೧೯೯೯), ಅಮರೇಶ ನುಗಡೋಣಿಯವರು "ರಾಯಚೂರ ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ(೨೦೦೦)' ಭಾಸ್ಕರರಾವ್ ಮೂಡಬೂಳರ 'ಮರೆತು ಹೋದ ಸುರಪುರ ಇತಿಹಾಸ'(೨೦೦೧), ಗೋಪಾಲರಾವ್ ಹೇಜೀಬ್‌ರ 'ಹೈದರಾಬಾದ ಮುಕ್ತಿ ಸಂಘರ್ಷ'(೨೦೦೧), ಎಸ್.ಚಂದ್ರಶೇಖರ 'ಆಧುನಿಕ ಕರ್ನಾಟಕದ ಆಂದೋಲನಗಳು'(೨೦೦೨), ಬಸವರಾಜ ಪೋಲೀಸ ಪಾಟೀಲರ 'ಬಿಡುಗಡೆ'(೨೦೦೨), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ'(೨೦೦೬) ಈ ಗ್ರಂಥಗಳು ಪ್ರಮುಖವಾಗಿವೆ. ಇವುಗಳಲ್ಲದೆ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧವಾದ ಪ್ರಭಾತ್ ಪದ್ಮಾ ನೈನಾ 'Freedom Movment in Hyderabad Karnataka Area'(1992), ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ನಿಬಂಧನೆಗಳಾದ ಸುಭಾಸಚಂದ್ರ ದೊಡ್ಮನಿಯವರ 'ಹೈದರಾಬಾದ ಕರ್ನಾಟಕದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪) ಎಂಬ ಪ್ರಬಂಧಗಳನ್ನು ಪೂರಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಇವುಗಳ ಜೊತೆ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದ ಬದುಕುಳಿದ ಕೆಲವು ಹೋರಾಟಗಾರರ ಸಂದರ್ಶನಗಳ ಕೆಲವು ಅಂಶಗಳನ್ನು ಚರ್ಚಿಸಲಾಗಿದೆ.

ಸುರಪುರ ಸಂಸ್ಥಾನದಲ್ಲಿ ಬೇಡ ಅರಸರು ಪ್ರಾಬಲ್ಯದಲ್ಲಿದ್ದರು. ಹೀಗಾಗಿ ಸುರಪುರವು ಅವರ ಸಂಸ್ಥಾನದ ರಾಜಧಾನಿಯಾಗಿತ್ತು. ಮೊಘಲ್ ಸಾಮ್ರಾಟ್ ಔರಂಗಜೇಬನು ಆರಂಭದಲ್ಲಿ ಸುರಪುರದ ಬೇಡ ಅರಸರ ಜೊತೆ ಯುದ್ಧ ಮಾಡಿ ಸೋಲನ್ನು ಅನುಭವಿಸಿದ ಘಟನೆಗಳು ಸುರಪುರದ ಇತಿಹಾಸವನ್ನು ಕುರಿತು ಬಂದಿರುವ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಸುರಪುರ ಸಂಸ್ಥಾನವು ಆರಂಭದಿಂದಲೂ

ಹೋರಾಟದಲ್ಲಿ ತೊಡಗಿರುವುದು ಕಂಡುಬರುತ್ತದೆ. ಔರಂಗಜೇಬನ ಕಾಲದಿಂದ ಹಿಡಿದು ನಿಜಾಂ ಆಳ್ವಿಕೆಯವರೆಗೂ ಈ ಪ್ರದೇಶದ ಜನರು ನಿರಂಕುಶ ಆಡಳಿತ ವಿರುದ್ಧ ಹೋರಾಟ ಕೈಗೊಂಡಿದ್ದರು.

ಔರಂಗಜೇಬನ ಮರಣದ ನಂತರ ದಖನ್ನಿನ ಸುಬೇದಾರನಾಗಿದ್ದ ಚೇನ್ ಖಿಲೀಚಖಾನರು ೧೭೨೪ರಲ್ಲಿ ಹೈದರಾಬಾದನ್ನು 'ಸ್ವತಂತ್ರವೆಂದು' ಘೋಷಿಸಿಕೊಂಡರು. ನಂತರ ಬಂದ ಬ್ರಿಟೀಷರಿಗೆ ಅನೇಕ ಹೋರಾಟಗಳಲ್ಲಿ ಸಹಾಯ ನೀಡಿದ ಹೈದರಾಬಾದಿನ ನಿಜಾಂ ಅವರು ಬ್ರಿಟಿಷರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾದರು. ಆಂಗ್ಲೋ-ಮೈಸೂರ ಯುದ್ಧಗಳ ನಂತರ ಬ್ರಿಟಿಷರು, ಮರಾಠರು ಮತ್ತು ಹೈದರಾಬಾದಿನ ನಿಜಾಂ ಅವರ ನಡುವೆ ಆದ ಒಪ್ಪಂದದ ಪ್ರಕಾರ ಕನ್ನಡ ಮಾತನಾಡುವ ಕರ್ನಾಟಕದ ಪ್ರದೇಶಗಳಾದ ಬೀದರ್, ಗುಲಬರ್ಗಾ ಮತ್ತು ರಾಯಚೂರುಗಳನ್ನು ೧೭೯೯ರಲ್ಲಿ ನಿಜಾಂ ಅವರ ವಶಕ್ಕೆ ಕೊಡಲಾಯಿತು. ನಿಜಾಂ ಅವರನ್ನು 'ಸಹಾಯಕ ಸೈನ್ಯ ಪದ್ಧತಿಗೆ' ಒಳಪಡಿಸುವ ಮೂಲಕ ಬ್ರಿಟಿಷರು ನಿಜಾಂ ಅವರನ್ನು ತಮ್ಮ ಅಂಕೆಯಲ್ಲಿರಿಸಿಕೊಂಡರು. ನಿಜಾಂ ಅವರಿಗೆ ರಾಜ್ಯದ ಜನತೆಯಲ್ಲಿ ಹೇಳಿಕೊಳ್ಳುವಂತಹ ಬೆಂಬಲವಿರಲಿಲ್ಲ. ತಮ್ಮ ಅಧಿಕಾರ ಅಸ್ತಿತ್ವಗಳ ರಕ್ಷಣೆಗಾಗಿ ಬ್ರಿಟಿಷರನ್ನು ಅವಲಂಬಿಸಿದ್ದರು (ಚಂದ್ರಶೇಖರ ೨೦೦೨ : ೭೧). ನಿಜಾಂ ಅವರ ಆಳ್ವಿಕೆಗೊಳಪಟ್ಟ ಸುರಪುರ ಸಂಸ್ಥಾನದಲ್ಲೂ ಬ್ರಿಟಿಷರು ಹಸ್ತಕ್ಷೇಪ ಮಾಡತೊಡಗಿದರು. ಆಡಳಿತದ ನಿರ್ವಹಣೆಗಾಗಿ ಬ್ರಿಟಿಷರು ತಮ್ಮ ಪ್ರತಿನಿಧಿಗಳನ್ನು ತಮ್ಮ ಆಳ್ವಿಕೆಗೆ ಒಳಪಟ್ಟ ಸಂಸ್ಥಾನಗಳಲ್ಲಿ ನೇಮಿಸಿದರು. ನಂತರ ೧೮೫೩ರಲ್ಲಿ ಅಧಿಕಾರ ವಹಿಸಿಕೊಂಡ ರಾಜಾ ನಾಲ್ವಡಿ ವೆಂಕಟಪ್ಪನಾಯಕನು ಸ್ವರಾಜ್ಯದ ಬಗ್ಗೆ ಅಭಿಮಾನ ಹೊಂದಿದ್ದರು. ಇವರು ವಿದೇಶಿಯರಾದ ಬ್ರಿಟಿಷರ ಮತ್ತು ನಿಜಾಂ ಅವರ ನಿರಂಕುಶ ಆಡಳಿತದಿಂದ ದೇಶವನ್ನು ಸ್ವತಂತ್ರಗೊಳಿಸಲು ಹೋರಾಟ ಆರಂಭಿಸಿದರು. ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ೧೮೫೭ರ ದಂಗೆಯಲ್ಲಿ ದಕ್ಷಿಣ ಭಾರತದ ನಾಯಕತ್ವ ವಹಿಸಿಕೊಂಡಿದ್ದನು ಎಂದು ಕೃಷ್ಣರಾವ್ ಅಭಿಪ್ರಾಯಪಟ್ಟಿದ್ದಾರೆ (ಕೃಷ್ಣರಾವ್, ೧೯೭೦:೬೨೭). ೧೮೫೭ರಲ್ಲಿ ನಡೆದ ಬ್ರಿಟಿಷರ ವಿರುದ್ಧ ಕೈಗೊಂಡ ಈ ಹೋರಾಟ 'ಸಿಪಾಯಿ ದಂಗೆ'ಎಂದು ಹೆಸರು ಪಡೆಯಿತು. ಹೀಗೆ ಸುರಪುರದಲ್ಲಿ ಮೊದಲಿನಿಂದ ಈ ಹೋರಾಟವು ನಡೆದೇ ಇತ್ತು. ಈ ಬಗೆಯ ಹೋರಾಟವೇ ಮುಂದೆ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆ ನೀಡಿದೆ ಎಂದರೆ ತಪ್ಪಾಗುವುದಿಲ್ಲ. ಹೀಗೆ ಇಡೀ ದಕ್ಷಿಣ ಭಾರತದ ರಾಜರನ್ನೆಲ್ಲಾ ಸಂಘಟಿಸಿ ಬ್ರಿಟಿಷರಿಗೆ ನಡುಕ ಹುಟ್ಟಿಸಿದ ಈ ದೊರೆ ಕೊನೆಗೆ ತನ್ನವರ ಒಳಸಂಚಿನಿಂದ ಮತ್ತು ಬ್ರಿಟಿಷರ ಕುಟೀಲ ನೀತಿಯಿಂದ ೧೮೫೮ರಲ್ಲಿ ಹತನಾದರು. ರಾಜನ ನಂತರ ಅನೇಕ ಜನರು ಹೋರಾಟಕ್ಕೆ ಇಳಿದರು. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರೆಲ್ಲರು ದಾಖಲೆಗೆ ಸೇರದೆ ಹೋದರು ಈ ಎಲ್ಲ ಮೇಲಿನ ಅಂಶಗಳನ್ನು ಗಮನಿಸಿದಾಗ ಯಾರ ದಬ್ಬಾಳಿಕೆಯನ್ನು ಸಹಿಸದ, ಸ್ವತಂತ್ರ ಮನೋಭಾವದ ಜನರು ಇವರಾಗಿದ್ದಾರೆಂಬುದು ತಿಳಿದುಬರುತ್ತದೆ (ಪ್ರಜಾವಾಣಿ, ೧೪.೦೩.೧೯೯೮ :೮).

ರಾಷ್ಟ್ರೀಯ ಕಾಂಗ್ರೆಸ್ ಭಾರತದ ಸ್ವಾತಂತ್ರ್ಯ ಚಳುವಳಿಯನ್ನು ಪ್ರಾರಂಭಿಸಿದ ನಂತರವೇ ಈ ಪ್ರದೇಶದಲ್ಲಿ ಸ್ವಾತಂತ್ರ್ಯ ಚಳುವಳಿಯ ಕುಡಿಯೊಡೆಯಲಾರಂಭಿಸಿತು. ೧೯೨೪ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನಡೆದ 'ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ', ೧೯೨೮ರಲ್ಲಿ ಪುಣೆಯಲ್ಲಿ ನಡೆದ 'ಅಖಿಲಭಾರತ ಕಾಂಗ್ರೆಸ್ ಸಮಾವೇಶ'ದಲ್ಲಿ ಸುಭಾಸ್ ಚಂದ್ರಭೋಸರು ರೋಮಾಂಚನಕಾರಿ ಭಾಷಣ ಹೋರಾಟಗಾರರಲ್ಲಿ ಹೊಸ ಚೈತನ್ಯ ತಂದಿತು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ವ್ಯಾಪಕವಾಗಿ ಹರಡಿದಾಗ ವಿದೇಶಿ ವಸ್ತುಗಳ ನಾಶ, ಕಾಯ್ದೆ ಭಂಗ ಮಾಡಿ ಸೆರೆಮನೆಗೆ ಹೋಗುವುದು, ಪಿಕೆಟಿಂಗ ಇಂತಹ ಕಾರ್ಯಗಳಿಂದ ಈ ಹೋರಾಟವು ತೀವ್ರಗತಿ ಪಡೆದವು. ಹೀಗೆ ರಾಷ್ಟ್ರೀಯ ಚಳುವಳಿಗಳು, ಸತ್ಯಾಗ್ರಹಗಳು ಇಲ್ಲಿಯ ಜನರಿಗೆ ಪ್ರೇರಣೆ ನೀಡಿದವು. ಭಾರತದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ ತೀವ್ರವಾದಾಗ ಬ್ರಿಟಿಷರು ಹಿಂದಿರುಗುವ ಸ್ಥಿತಿಯಲ್ಲಿದ್ದರು. ಅವರು ಭಾರತವನ್ನು ಬಿಟ್ಟು ಹೋಗುವ ಮೊದಲು ಅಸ್ತಿತ್ವದಲ್ಲಿದ್ದ ಸಂಸ್ಥಾನಿಕರಿಗೆ 'ಸ್ವಾತಂತ್ರ್ಯ ಭಾರತದಲ್ಲಿ ವಿಲೀನವಾಗಬಹುದು, ಇಲ್ಲ ಸ್ವತಂತ್ರವಾಗಿಯೇ ಇದ್ದು ರಾಜ್ಯಾಡಳಿತ ನಡೆಸಬಹುದು' ಎಂದು ಹೇಳಿದರು (ನುಗಡೋಣಿ ೨೦೦೩:೬೦).

ಭಾರತದಲ್ಲಿಯೇ ದೊಡ್ಡ ಸಂಸ್ಥಾನ ಎನಿಸಿಕೊಂಡಿದ್ದ ಹೈದರಾಬಾದ ಸಂಸ್ಥಾನವನ್ನು ನಿಜಾಂ ಅವರು ಸ್ವತಂತ್ರವಾಗಿಯೇ ಮುಂದುವರಿಸಬೇಕೆಂಬ ಆಸೆ ಹೊಂದಿದ್ದರು. ೧೫ ಆಗಸ್ಟ್ ೧೯೪೭ ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಹೈದರಾಬಾದ ಸಂಸ್ಥಾನಕ್ಕೆ 'ಸ್ವಾತಂತ್ರ್ಯ' ಬರಲಿಲ್ಲ. ೧೫ ಆಗಸ್ಟ್ ೧೯೪೭ ರಿಂದ ೧೮ ಸೆಪ್ಟೆಂಬರ್ ೧೯೪೮ರವರೆಗೆ ಹೈದರಾಬಾದ ಸಂಸ್ಥಾನವು ನಿಜಾಂ ಅವರ ನೇತೃತ್ವದಲ್ಲಿ ಸ್ವತಂತ್ರವಾದ ಆಳ್ವಿಕೆಯನ್ನು ನಡೆಸಿತು. ಅಸಂಖ್ಯಾತ ಅಕ್ಷರ ಜ್ಞಾನವಿಲ್ಲದ ಈ ನಾಡಿನ ಜನರಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಮಾನಸಿಕವಾಗಿ ಸಿದ್ಧಗೊಳಿಸುವುದು ಚಳುವಳಿಗಾರರಿಗೆ ಒಂದು ಸವಾಲೇ ಆಗಿತ್ತು. ನಗರಗಳಲ್ಲಿ ಚಳುವಳಿಗಾರರು ಅದರಲ್ಲೂ ಮುಖ್ಯವಾಗಿ ವಿದ್ಯಾರ್ಥಿಗಳು ನಿಜಾಂ ಸರ್ಕಾರದ ವಿರುದ್ಧ ಹೋರಾಡಲು ಸಂಘಟಿತರಾದರು. ಅಖಿಲ ಭಾರತ ಮಟ್ಟದ ನಾಯಕರು, ಈ ಪ್ರಾಂತ್ಯಕ್ಕೆ ಬಂದು ಸ್ವಾತಂತ್ರ್ಯಕ್ಕಾಗಿ ಕರೆ ನೀಡಿದಾಗ ಈ ಪ್ರಾಂತ್ಯದಲ್ಲಿ ಸಂಘಟನೆಗಳು ಹೆಚ್ಚು ಕಾರ್ಯತತ್ಪರವಾದವು. ಹೀಗೆ ನಿಜಾಂ ಸರ್ಕಾರವನ್ನು ವಿರೋಧಿಸುವ ಚಟುವಟಿಕೆಗಳನ್ನು ತೀವ್ರಗೊಳಿಸಿದರು (ನುಗಡೋಣಿ ೨೦೦೩: ೫೯). ಇಂತಹ ಸಂದರ್ಭದಲ್ಲಿ ನಿಜಾಂ ಅವರು ತಮ್ಮ ಅಧೀನಕ್ಕೊಳಪಟ್ಟ ಪ್ರಾಂತ್ಯಗಳಲ್ಲಿ ಭಾರತದ ರಾಷ್ಟ್ರಧ್ವಜವನ್ನು ಹಾರಿಸಬಾರದೆಂದು ಆಜ್ಞೆ ಹೊರಡಿಸಿದರು. ಆದರೆ ಜನರು ಗುಪ್ತವಾಗಿ ಭಾರತದ ರಾಷ್ಟ್ರಧ್ವಜಗಳನ್ನು ಹಾರಿಸಿದರು. ಅಂತಹ ಪ್ರಾಂತ್ಯಗಳಲ್ಲಿ ಸುರಪುರವು ಒಂದು. ಸುರಪುರವು ರಜಾಕಾರರ ಕಾರ್ಯಚಟುವಟಿಕೆಗಳ ಕೇಂದ್ರ ಸ್ಥಾನವಾಗಿತ್ತು. ಈ ಭಾಗದ ಜನರು ರಮಣಪ್ಪ ನಾಯಕನ ಕಟ್ಟೆಯ ಮೇಲೆ ರಾಜಾ ವೆಂಕಟಪ್ಪನಾಯಕನ ನೇತೃತ್ವದಲ್ಲಿ ಧ್ವಜವನ್ನು ಹಾರಿಸಿದರು. ಈ ದಿನ ವಿದ್ಯಾರ್ಥಿಗಳೆಲ್ಲರೂ

ಒಂದುಗೂಡಿ ಧ್ವಜ ಮೆರವಣಿಗೆ ಕೈಗೊಂಡರು. ಈ ಧ್ವಜ ಮೆರವಣಿಗೆಗೆ ಬೇಕಾಗುವ ಧ್ವಜಗಳನ್ನು ಬಸಣ್ಣ ದರ್ಜಿ ಮತ್ತು ರುಕ್ಮಿಣಿಬಾಯಿಯವರು ಹೊಲಿದು ಕೊಟ್ಟರೆಂದು ವಿಮೋಚನಾ ಹೋರಾಟಗಾರ ಮಳ್ಳಿ ಕಿಶನರಾವರು ಹೇಳಿದ್ದಾರೆ (ಸಂದರ್ಶನ : ಮಳ್ಳಿ ಕಿಶನರಾವ್ ೧೩.೦೧.೨೦೦೬). ಈ ಎಲ್ಲ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳುವುದರ ಮೂಲಕ ಈ ಭಾಗದ ಜನರು ನಿಜಾಂ ಸರ್ಕಾರದ ವಿರುದ್ಧ ಹೋರಾಟ ಕೈಗೊಂಡರು.

೧೫ ಅಗಸ್ಟ್ ೧೯೪೭ರ ನಂತರ ಹೈದರಾಬಾದ ಸಂಸ್ಥಾನದಲ್ಲಿ ರಜಾಕಾರರೂ ದಬ್ಬಾಳಿಕೆ ಇನ್ನೂ ಹೆಚ್ಚಾಯಿತು. ಕಾಸಿಂ ರಜ್ವಿಯ ನೇತೃತ್ವದಲ್ಲಿ ರಜಾಕಾರರು ಸಂಸ್ಥಾನದಲ್ಲಿ ಹಸ್ತಕ್ಷೇಪ ಮಾಡತೊಡಗಿದರು. ರಜಾಕಾರರ ದಬ್ಬಾಳಿಕೆ ಮಿತಿಮೀರಿದ್ದರಿಂದ ಈ ಭಾಗದ ಹೋರಾಟಗಾರರು ಇವರನ್ನು ಪ್ರತಿಭಟಿಸಲು ಗಡಿಗಳಲ್ಲಿ 'ಶಿಬಿರಗಳನ್ನು' ಸ್ಥಾಪಿಸುವುದರ ಮೂಲಕ ಅವರ ನಿರಂಕುಶ ಆಡಳಿತವನ್ನು ತಡೆಗಟ್ಟಲು ಪ್ರಯತ್ನಿಸಿದರು. ನಿಜಾಂ ಅವರ ಆಳ್ವಿಕೆಯನ್ನು ಪ್ರತಿಭಟಿಸುವಲ್ಲಿ ಈ ಭಾಗದ ಸಂಘಸಂಸ್ಥೆಗಳು ಮತ್ತು ಪತ್ರಿಕೆಗಳು ನಿರ್ವಹಿಸಿದ ಪಾತ್ರ ಮಹತ್ವದ್ದಾಗಿದೆ.

೧೯೪೮ ಜನವರಿಯಲ್ಲಿ ಗಡಿಭಾಗದಲ್ಲಿ ಶಿಬಿರಗಳನ್ನು ಸ್ಥಾಪಿಸಿ ಜನರಲ್ಲಿ ಜಾಗೃತಿ ಮೂಡಿಸಲು ಹೋರಾಟಗಾರರು ಪ್ರಯತ್ನಿಸಿದರು. ಸುರಪುರಕ್ಕೆ ಸಂಬಂಧಿಸಿದಂತೆ ನಡೆದ ಹೋರಾಟದಲ್ಲಿ ತಾಳಿಕೋಟೆ ಶಿಬಿರದ ಶಿಬಿರಾರ್ಥಿಗಳ ಪಾತ್ರ ಗಣನೀಯವಾಗಿದೆ. ಈ ಪ್ರದೇಶವು ಗುಡ್ಡಗಾಡು ಆಗಿರುವುದರಿಂದ ಭೂಗತ ಕಾರ್ಯಚಟುವಟಿಕೆಗಳನ್ನು ನಡೆಸಲು ಒಳ್ಳೆಯ ಸ್ಥಳವಾಗಿತ್ತು (ಪ್ರಜಾವಾಣಿ ೧೪.೦೩.೧೯೯೮). ಈ ಭಾಗದ ಜನರು ನಿಜಾಂ ಅವರ, ರಜಾಕಾರರ ಆಳ್ವಿಕೆಯನ್ನು ಕಿತ್ತೊಗೆಯಲು ಭೂಗತರಾಗಿ ಕಾರ್ಯಚಟುವಟಿಕೆಗಳನ್ನು ಆರಂಭಿಸಿದರು. ಅವರಲ್ಲಿ ರಾಜಾ ವೆಂಕಟಪ್ಪನಾಯಕ, ಅಪ್ಪಾರಾವ್ ವಕೀಲ, ವಿರೂಪಾಕ್ಷಪ್ಪಗೌಡ, ವೆಂಕನಗೌಡ, ತಿಮ್ಮಯ್ಯ ದರಬಾರಿ, ಮಹಾದೇವಪ್ಪ ಹೂಗಾರ ಮತ್ತು ಡಾ.ಜಿ.ಸುಬ್ಬಯ್ಯ ಮುಂತಾದವರು ಪ್ರಮುಖರಾಗಿದ್ದಾರೆ. ಈ ಎಲ್ಲಾ ಹೋರಾಟಗಾರರು ರಜಾಕಾರರ ವಿರುದ್ಧ ಕೈಗೊಂಡ ಹೋರಾಟಗಳಲ್ಲಿ ಜಯಗಳಿಸಿ ತಮ್ಮ ಸುತ್ತಲಿನ ಪ್ರದೇಶಗಳನ್ನು ಸ್ವತಂತ್ರಗೊಳಿಸಿ ತಮ್ಮ ಅಧೀನಕ್ಕೊಳಪಡಿಸಿಕೊಂಡರು. ಅದರಲ್ಲಿ ಮಾಳ್ನೂರು, ಗುಳಬಾಳ, ಮಾರಲಭಾವಿ ಮತ್ತು ಕೆಂಭಾವಿ ಪ್ರದೇಶಗಳಲ್ಲಿ ನಡೆದ ಘಟನೆಗಳು ಪ್ರಮುಖವಾಗಿವೆ. ಪ್ರತಿಯೊಂದು ಹಳ್ಳಿಗಳಲ್ಲಿ ರಜಾಕಾರರ ದಬ್ಬಾಳಿಕೆ ವಿಪರೀತವಾಗಿತ್ತು. ಇದಕ್ಕೆ ಜನರು ಕೂಡ ವಿರೋಧವನ್ನು ವ್ಯಕ್ತಪಡಿಸುತ್ತಿದ್ದರು. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಸಂಭವಿಸಿದ ಘಟನೆಗಳು, ಚಳುವಳಿಗಳಿಂದ ಪ್ರೇರಿತರಾದ ಜನರು ಅವುಗಳನ್ನು ಈ ಹೋರಾಟದಲ್ಲಿ ಅಳವಡಿಸಿಕೊಂಡು ಸಮರ್ಥವಾಗಿ ನಿಜಾಂ ಅವರ ದಾಳಿಯನ್ನು ಎದುರಿಸಿದರು. ಇಂತಹ ಕಾರ್ಯಗಳಿಂದ ಜನಜಾಗೃತಿಯನ್ನು ಸಹಿಸದ ರಜಾಕಾರರು ಮತ್ತು ನಿಜಾಂ ಸರ್ಕಾರದ ಅನುಯಾಯಿಗಳು ಮಂದಿರಗಳ ನಾಶ, ಸಂಪತ್ತಿನ ಲೂಟಿ ಮುಂತಾದ ಭಯಾನಕ ಕೃತ್ಯಗಳಲ್ಲಿ

ತೊಡಗಿದರು. ರಜಾಕಾರರು ಶಸ್ತ್ರಾಸ್ತ್ರಗಳನ್ನು ಉಪಯೋಗಿಸಿ ತಮ್ಮ ಆಡಳಿತವನ್ನು ವಿರೋಧಿಸಿರುವ ಹೋರಾಟಗಾರರ ಹೋರಾಟವನ್ನು ಹತ್ತಿಕ್ಕಲು ಪ್ರಯತ್ನಿಸಿದರು. ಭಯ ಭೀತರಾದ ಜನರು ತಮ್ಮ ಆಸ್ತಿಮತ್ತು ಜೀವ ರಕ್ಷಣೆಗಾಗಿ ಹೈದರಾಬಾದ ರಾಜ್ಯವನ್ನು ತೊರೆದು ಬೇರೆ ಕಡೆಗೆ ವಲಸೆ ಹೋಗುವ ಪರಿಸ್ಥಿತಿ ನಿರ್ಮಾಣವಾಯಿತು (ಮಹಾಬಲೇಶ್ವರಪ್ಪ ೧೯೯೭:೮೮).

ನಿಜಾಂ ಅವರ ಸರಕಾರದ ವಕ್ರದೃಷ್ಟಿಗೆ ಒಳಪಟ್ಟ ಜನರು ರಮಾನಂದ ತೀರ್ಥರ ನಾಯಕತ್ವದಲ್ಲಿ ನಿಜಾಂ ಅವರನ್ನು ಭಾರತದ ಒಕ್ಕೂಟದಲ್ಲಿ ಸೇರಿಸಲು ಸತ್ಯಾಗ್ರಹ ಚಳುವಳಿಯನ್ನು ಆರಂಭಿಸಿದರು. ನಿಜಾಂ ಅವರ ಸೈನ್ಯವಾದ ಪೋಲೀಸ್ ಮತ್ತು ರಜಾಕಾರರ ವಿರುದ್ಧ ಅಂತಿಮ ಹೋರಾಟ ಕೈಗೊಂಡರು. ಹೋರಾಟಗಾರರು ರಜಾಕಾರರೊಂದಿಗೆ ಹೋರಾಡಿ ಹಳ್ಳಿಗಳನ್ನು ವಶಪಡಿಸಿಕೊಂಡು ಸ್ವತಂತ್ರ ಘೋಷಣೆ ಮಾಡಿ ನಿಜಾಂ ಅವರ ಸಾರ್ವಭೌಮತ್ವವನ್ನು ಧಿಕ್ಕರಿಸತೊಡಗಿದರು. ನಿಜಾಂ ಅವರ ಪಡೆಯಾದ ರಜಾಕಾರರ ಮತ್ತು ಹೋರಾಟಗಾರರ ನಡುವೆ ನಡೆದ ಈ ಹೋರಾಟವನ್ನು ಗಮನಿಸಿದಾಗ ಜನರು ತಮ್ಮ ಧಾರ್ಮಿಕ ಹಕ್ಕುಗಳಿಗಾಗಿ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿರುವುದು ಕಂಡುಬರುತ್ತದೆ (ಪೊಲೀಸ್ ಪಾಟೀಲ್ ೨೦೦೨:೬೪). ಹೈದರಾಬಾದಿನಲ್ಲಿ ಖಾಸಿಂ ರಜ್ವಿಯು 'ಧರ್ಮ ಯುದ್ಧಕ್ಕೆ' ಕರೆ ನೀಡಿದಾಗ ಪಾಕಿಸ್ತಾನದ ಪಿತಾಮಹ ಮಹಮ್ಮದ ಅಲಿ ಜಿನ್ನಾ ಕ್ವೆಟ್ಟಾಲ್‌ನಲ್ಲಿ ಮಾತಾಡಿ, 'ಹೈದರಾಬಾದ ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಗಿದೆ' ಎಂದು ಹೇಳಿದರು. ಇಂಗ್ಲೆಂಡಿನ ಮಾಜಿ ಪ್ರಧಾನಿ ವಿನ್ಸಟನ್ ಚರ್ಚಿಲ್ ಅವರು ೩೦ ಜೂನ್ ೧೯೪೮ ರಂದು 'ಹೈದರಾಬಾದನ್ನು ಸ್ವತಂತ್ರ ರಾಷ್ಟ್ರ'ವೆಂದು ಹೇಳಿದರು (ಹವಳೆ ೧೯೯೬:೧೧). ಹೀಗೆ ನಿಜಾಂ ಅವರನ್ನು ಸ್ವತಂತ್ರವಾಗಿ ಮುಂದುವರೆಯಲು ಬಿಟ್ಟರೆ ಭಾರತದಲ್ಲಿ ಪಾಕಿಸ್ತಾನದಂತೆ ಇನ್ನೊಂದು ಮುಸ್ಲಿಂ ರಾಜ್ಯ ಸ್ಥಾಪನೆಯಾಗುತ್ತದೆ ಎಂದು ತಿಳಿದು ರಮಾನಂದ ತೀರ್ಥರು ಭಾರತದ ಸಮಗ್ರತೆ ಕಾಪಾಡಲು ಭಾರತದ ಗೃಹಮಂತ್ರಿಯಾಗಿದ್ದ ಸರ್ದಾರ ವಲ್ಲಭಬಾಯಿ ಪಟೇಲರಿಗೆ ಮನವಿ ಮಾಡಿದರು. ೧೩ ಸೆಪ್ಟೆಂಬರ್ ೧೯೪೮ರಂದು ಜನರಲ್ ಚೌಧರಿಯ ಮುಖಂಡತ್ವದಲ್ಲಿ ಮತ್ತು ದಂಡನಾಯಕ ರಾಜೇಂದ್ರ ಸಿನ್ಹಾ ಅವರ ನಾಯಕತ್ವದಲ್ಲಿ ಅವಶ್ಯಕ ಕ್ರಮಗಳನ್ನು ಕೈಗೊಳ್ಳಲು 'ಪೊಲೀಸ್ ಕಾರ್ಯಾಚರಣೆ'ಯನ್ನು ಆರಂಭಿಸಿದರು (ಮಹಾಬಲೇಶ್ವರಪ್ಪ ೧೯೯೭:೧೨೨).

ಜೆ.ಎನ್.ಚೌಧರಿ ಅವರ ಪೂರ್ಣ ಹೆಸರು ಜನರಲ್ ಜಯಂತಿನಾಥ ಚೌಧರಿ ಇವರು ಪೊಲೀಸ್ ಕಾರ್ಯಾಚರಣೆಯಲ್ಲಿ ಪ್ರಮುಖವಾದ ಪಾತ್ರ ವಹಿಸಿದ್ದಾರೆ. ಇವರು ಸೋಲಾಪುರ ವಿಭಾಗದ ಸೈನ್ಯದ ನೇತೃತ್ವವನ್ನು ವಹಿಸಿದ್ದರು. ಮೇಜರ್ ಜನರಲ್ ಜೆ.ಎನ್.ಚೌಧರಿಯವರ ನಾಯಕತ್ವದಲ್ಲಿ ಸೋಲಾಪುರದಿಂದ ಹೊರಟ ತಂಡ ಯಾವ ವಿರೋಧವಿಲ್ಲದೆ ತುಳಜಾಪುರ ಮಾರ್ಗವಾಗಿ ಗಡಿಯ

ಪಟ್ಟಣವಾದ ನಳದುರ್ಗದವರೆಗೆ ಬಂದು ತಲುಪಿತು. ದಕ್ಷಿಣ ವಿಭಾಗದ ಲೆಪ್ಟಿನೆಂಟ್ ಜನರಲ್ ರಾಜೇಂದ್ರ ಸಿನ್ಹಾರವರು ಭಾರತದ ಪಡೆಗಳ ನೇತೃತ್ವ ವಹಿಸಿದರು.

ದಂಡನಾಯಕ ರಾಜೇಂದ್ರ ಸಿನ್ಹಾಅವರು ೧೩ ಸೆಪ್ಟೆಂಬರ್ ೧೯೪೮ ರಂದು ಆಜ್ಞೆ ಹೊರಡಿಸಿದರು. ಅವರು "ನಿಮ್ಮ ಉದ್ದೇಶದ ಈಡೇರಿಕೆಗಾಗಿ ಮುನ್ನುಗ್ಗಿರಿ ಎದುರಿಗೆ ಪ್ರತಿರೋಧ ಬಂದರೆ ಅದನ್ನು ಮಟ್ಟ ಹಾಕಿ ಮತ್ತು ಕಾನೂನು ಪಾಲಿಸುವ ಜನರನ್ನು ಜಾತಿ ಭೇದವಿಲ್ಲದೆ ರಕ್ಷಿಸಿ" ಎಂದು ಹೇಳಿರುವುದು ಹಿಂದೂ-ಮುಸ್ಲಿಂರ ಬಗ್ಗೆ ಇವರು ಹೊಂದಿರುವ ಸಾಮರಸ್ಯವನ್ನು ತಿಳಿಸುತ್ತದೆ (ಹೇಜೀಬ್ ೨೦೦೧:೧೧೦). ೧೩ನೇ ಸೆಪ್ಟೆಂಬರ್ ೧೯೪೮ರಂದು ಕಾರ್ಯಾಚರಣೆ ಆರಂಭವಾಗಿ ೧೮ ಸೆಪ್ಟೆಂಬರ್ ೧೯೪೮ಕ್ಕೆ ಮುಕ್ತಾಯವಾಯಿತು. ೫ ದಿನಗಳವರೆಗೆ ನಡೆದ ಈ ಕಾರ್ಯಾಚರಣೆಯಿಂದ ರಜಾಕಾರರು ಮತ್ತು ನಿಜಾಂ ಅವರ ಪೊಲೀಸರು ಭಾರತದಲ್ಲಿ ಹೈದರಾಬಾದ ಸಂಸ್ಥಾನದಿಂದ ವಿಲೀನ ಮಾಡಲು ಒಪ್ಪಿಕೊಂಡರು. ೧೭ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದಿನ ನಿಜಾಂ ಅವರ ಮೀರ ಉಸ್ಮಾನ ಅಲೀಖಾನರು ಭಾರತ ಸರ್ಕಾರಕ್ಕೆ ಶರಣಾದರು. ೧೮ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ ಸಂಸ್ಥಾನ ಭಾರತದೊಂದಿಗೆ ವಿಲೀನವಾಯಿತು (ಬಾಲಚಂದ್ರ ೨೦೦೭:೯೧).

ಈ ಹೋರಾಟದಲ್ಲಿ ಸಾಮಾನ್ಯ ಜನರು, ಶಿಬಿರಗಳ ನಾಯಕರು ಮತ್ತು ಹೋರಾಟಗಾರರು ಭಾರತದ ಸೈನ್ಯಕ್ಕೆ ಸಹಾಯ ಮಾಡಿ ಈ ವಿಮೋಚನಾ ಹೋರಾಟವು ಯಶಸ್ವಿಗೊಳಿಸಲು ಕಾರಣರಾಗಿರುವುದು ಗಮನಾರ್ಹವಾಗಿದೆ. ಹೀಗೆ ೧೮ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ ಕರ್ನಾಟಕ ಪ್ರದೇಶವು ಸ್ವತಂತ್ರಗೊಂಡಿದ್ದರಿಂದ ಆ ದಿನವನ್ನು 'ಹೈದರಾಬಾದ ಕರ್ನಾಟಕ ವಿಮೋಚನಾ ದಿನವನ್ನಾಗಿ ಆಚರಿಸುತ್ತಾರೆ. ಭಾರತಕ್ಕೆ ೧೫ ಆಗಸ್ಟ್ ೧೯೪೭ಕ್ಕೆ ಸ್ವಾತಂತ್ರ್ಯ ಬಂದರೆ ತಮ್ಮ ಪ್ರದೇಶದ 'ಸ್ವಾತಂತ್ರಕ್ಕಾಗಿ' ಒಂದು ವರ್ಷ ಕಾಯಬೇಕಾಯಿತು (ಸಂದರ್ಶನ : ಮಹಾದೇವಪ್ಪ ಹೂಗಾರ ೬.೨.೨೦೦೬).

## ೩.೨. ಆರ್ಯ ಸಮಾಜ

ಆರ್ಯ ಸಮಾಜ ಈ ವಿಷಯಕ್ಕೆ ಸಂಬಂಧಿಸಿದಂತೆ ಬಂದಿರುವ ಬರಹಗಳನ್ನು ಗಮನಿಸಿದಾಗ ಹಿಂದೂ ರಾಷ್ಟ್ರೀಯವಾದಿ ಮನೋಭಾವ ಹೊಂದಿದ ಬರಹಗಾರರೇ ಹೆಚ್ಚಾಗಿ ಕಂಡುಬರುತ್ತಾರೆ. ಅವರಲ್ಲಿ ಬಿ.ಸಿ.ಮಹಾಬಲೇಶ್ವರಪ್ಪ, ಬಸವರಾಜ ಪೊಲೀಸ್ ಪಾಟೀಲ್, ಚಂದ್ರಶೇಖರ ಲೋಖಂಡೆ ಮತ್ತು ಬಾಲಚಂದ್ರ ಜಯಶೆಟ್ಟಿ ಇವರೆಲ್ಲರು ಈ ವಿಷಯದ ಮಾಹಿತಿಯನ್ನು ಒದಗಿಸುವಾಗ ಏಕಮುಖಿಯಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಡೆದಿರುವ ಘಟನೆಗಳನ್ನು ಪರಿಶೀಲಿಸಿ ನ್ಯಾಯಬದ್ಧವಾದ ವಿವರಣೆಯನ್ನು ನೀಡುವಲ್ಲಿ ವಿಫಲರಾಗಿದ್ದಾರೆ. ಈ ಎಲ್ಲ ಲೇಖಕರ ಬರಹಗಳಲ್ಲಿ ಹಿಂದೂ ಪರವಾದ ಹೇಳಿಕೆಗಳೇ ಹೆಚ್ಚು ಕಂಡುಬಂದಿವೆ. ಹೈದರಾಬಾದ ಕರ್ನಾಟಕ ವಿಮೋಚನಾ

ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರ ಪ್ರಮುಖವಾಗಿದೆ. ಆರ್ಯ ಸಮಾಜವು ವಿವಿಧ ಜಾತಿಗಳಲ್ಲಿ ಸಾಮಾಜಿಕ ಐಕ್ಯತೆ ಮೂಡಿಸುವ ಒಂದು ಪ್ರಬಲ ರಾಷ್ಟ್ರೀಯ ಸಂಸ್ಥೆಯಾಗಿ ಬೆಳೆದು ಬಂದಿದೆ. ಆರ್ಯ ಸಮಾಜದ ಸ್ಥಾಪನೆಯ ಉದ್ದೇಶ ಹಿಂದೂ ಸಮಾಜವನ್ನು ಸುಧಾರಿಸುವುದಾಗಿತ್ತು. ಅಲ್ಲದೇ ಹಿಂದೂ ಸಮಾಜದಲ್ಲಿ ಬೇರೂರಿರುವಂತಹ ಅಂಧಃವಿಶ್ವಾಸ, ಮೂಢನಂಬಿಕೆ, ಕೆಟ್ಟ ಪರಂಪರೆ, ಜಾತಿ ಭೇದಗಳನ್ನು ಕಿತ್ತೊಗೆಯುವುದಾಗಿತ್ತು. ನಿಜಾಂ ಅವರ ಹಿಂದೂ ವಿರೋಧಿ ನೀತಿಯನ್ನು ಹಾಗೂ ಮತಾಂಧತೆಯನ್ನು ಸಮರ್ಥವಾಗಿ ಎದುರಿಸಿ, ಹಿಂದೂಗಳಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಪ್ರಮುಖ ಪಾತ್ರವನ್ನು ಆರ್ಯ ಸಮಾಜ ವಹಿಸಿದೆ.

ಈ ಅಂಶಕ್ಕೆ ಪೂರಕವಾಗಿ ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭), ಬಿ.ಸಿ.ಮಹಾಬಲೇಶ್ವರಪ್ಪನವರ 'ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು'(೧೯೯೭), ಎಚ್.ಎಸ್. ಪಾಟೀಲ್‌ರ 'ವಿಮೋಚನೆ'(೧೯೯೯), ಬಸವರಾಜ ಪೋಲೀಸ ಪಾಟೀಲರ 'ಬಿಡುಗಡೆ'(೨೦೦೨), ಚಂದ್ರಶೇಖರ ಲೋಖಂಡೆಯವರ 'ಹೈದರಾಬಾದ ಮುಕ್ತಿ ಸಂಗ್ರಾಮ ಕಾ ಇತಿಹಾಸ'(೨೦೦೪) ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ'(೨೦೦೬) ಇವೆಲ್ಲದೆ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧಗ ಳಾದ ಉಷಾ ದೇಸಾಯಿಯವರ 'Freedom Movement in Raichur Districts'(1994), ವೆಂಕಟರಾವ್ ಪಲಾತಿಯವರ 'Role of Freedom Fighters in Bidar Districts'(2002) ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧಗಳಾದ ಸುಭಾಸಚಂದ್ರ ದೊಡ್ಮನಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪) ಮೌಖಿಕ ಆಕರಗಳಾಗಿ ಹೋರಾಟಗಾರರನ್ನು ಸಂದರ್ಶಿಸಿ ಈ ವಿಷಯವನ್ನು ಕುರಿತಂತೆ ಅವರೊಂದಿಗೆ ಸಮಾಲೋಚನೆ ಮಾಡುವುದರ ಮೂಲಕ ಈ ವಿಷಯವನ್ನು ಸಂಗ್ರಹಿಸಲಾಗಿದೆ.

** **

ಹೈದರಾಬಾದ ರಾಜ್ಯದ ಭೀರ್ ಜಿಲ್ಲೆಯ ಧಾರೂರ ಗ್ರಾಮದಲ್ಲಿ ೧೮೮೦ರಲ್ಲಿ ಆರ್ಯ ಸಮಾಜವು ಆಚಾರ್ಯ ನರದೇವಜಿ ಶಾಸ್ತ್ರಿಯವರ ನೇತೃತ್ವದಲ್ಲಿ ಸ್ಥಾಪನೆಯಾಯಿತು. ಹೈದರಾಬಾದ ನಗರದಲ್ಲಿ ೧೮೯೨ರಲ್ಲಿ ಶ್ರೀಕಾಮತಾ ಪ್ರಸಾದಜೀಯವರ ನೇತೃತ್ವದಲ್ಲಿ ಸ್ಥಾಪನೆಯಾಯಿತು(ಲೋಖಂಡೆ, ೨೦೦೪:೩೫). ಇದರ ಉದ್ದೇಶ ಹಿಂದೂಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕತೆಯ ಜಾಗೃತಿ ಮೂಡಿಸಬೇಕು. ಧರ್ಮದ ಹೆಸರಿನಲ್ಲಿ ನಡೆಯುವ ಮೂಢನಂಬಿಕೆ, ತಪ್ಪು ಕಲ್ಪನೆಗಳ ಪರಂಪರೆ,

ಸಂಪ್ರದಾಯಗಳನ್ನು ಮುಂತಾದ ಅನಿಷ್ಟ ಪದ್ಧತಿಗಳನ್ನು ಖಂಡಿಸುವ ಸಲುವಾಗಿ ಆರ್ಯ ಸಮಾಜವನ್ನು ಸ್ಥಾಪನೆ ಆಗಿರುವುದು ಗಮನಾರ್ಹವಾಗಿದೆ. ನಿಜಾಂ ಅವರ ರಾಜ್ಯದಲ್ಲಿ ಸ್ಥಳೀಯ ಆರ್ಯ ಸಮಾಜಿಗರು ಆರ್ಯ ಸಮಾಜದ ಪ್ರಚಾರಕ್ಕಾಗಿ ಉತ್ತರ ಭಾರತದಿಂದ ಆರ್ಯ ಸಮಾಜದ ಕಾರ್ಯಕರ್ತರನ್ನು ಕರೆಸಿದರು. ೧೧-೧-೧೮೯೪ ರಲ್ಲಿ ಸ್ವಾಮಿ ನಿತ್ಯಾನಂದ ಜಿ, ಸ್ವಾಮಿ ವಿಶ್ವೇಶ್ವರಾನಂದಜೀ, ದಯಾನಂದರ ಶಿಷ್ಯ ಸ್ವಾಮಿ ಆತ್ಮನಂದ ಮಹಾರಾಜರು ಹೈದರಾಬಾದಕ್ಕೆ ಬಂದು ವೇದಗಳ ಆಧಾರದ ಮೇಲೆ ಅಸ್ಪೃಶ್ಯತಾ, ಜಾತೀಯತೆ, ಮೂರ್ತಿ ಪೂಜೆ, ಶ್ರೇಷ್ಟ-ಕನಿಷ್ಠ ಈ ಅಂಶಗಳನ್ನು ಖಂಡಿಸಿರುವುದು ಕಂಡುಬರುತ್ತದೆ (ಲೋಖಂಡೆ ೨೦೦೪:೩೬).

ಚಂದ್ರಶೇಖರ ಅವರ ಪ್ರಕಾರ ಇತ್ತೇಹಾದ-ಉಲ್-ಮುಸಲ್ಮಿನ ಸಂಘಟನೆ ಮತ್ತು ರಜಾಕಾರರ ಶಾಖೆಗಳು ದಲಿತರಿಗೆ ಆಸೆ ತೋರಿಸಿ ಆಕರ್ಷಣೆಗೊಳಗಾಗಿ ಮುಸ್ಲಿಂರನ್ನಾಗಿ ಮಾಡುವ ಷಡ್ಯಂತ್ರ ನಡೆದಿತ್ತು. ನಿಜಾಂ ಅವರ ಸರ್ಕಾರವು ಸತ್ಯಾರ್ಥ ಪ್ರಕಾಶ ಓದುವ ಬಗ್ಗೆ ನಿರ್ಬಂಧ ಹಾಕಿತು. ‘ಯಾವ ಸರ್ಕಾರಿ ನೌಕರರು ಆರ್ಯ ಸಮಾಜದಲ್ಲಿ ದೀಕ್ಷೆ ಪಡೆಯುತ್ತಾರೋ ಅವರನ್ನು ನೌಕರಿಯಿಂದ ತೆಗೆದು ಹಾಕಲಾಗುತ್ತದೆ’ ಎಂದು ಆದೇಶ ಹೊರಡಿಸಿತು. ಯಾವುದೇ ಮಂದಿರ ಅಥವಾ ಆರ್ಯ ಸಮಾಜ ಮಂದಿರದ ಜೀರ್ಣೋದ್ಧಾರ ಮಾಡಬೇಕಾದರೆ ‘ಅಮೂರೆ ಮಜಹಬಿ’ ಯಿಂದ ಪರವಾನಗಿ ಪಡೆಯಬೇಕಾಗುತ್ತಿತ್ತು ಎಂಬ ಅಂಶಗಳು ಅವರ ಗ್ರಂಥದಲ್ಲಿ ವ್ಯಕ್ತವಾಗಿದೆ (ಲೋಖಂಡೆ ೨೦೦೪:೫೧). ಹೈದರಾಬಾದಿನಲ್ಲಿ ಸ್ಥಾಪನೆಯಾಗಿದ್ದ ಆರ್ಯ ಸಮಾಜದ ಪ್ರತಿನಿಧಿಗಳಾದ ಪಂಡಿತ ಕೇಶವರಾವ್ ಕೊರಟಕರ್, ವಿನಾಯಕರಾವ್ ವಿದ್ಯಾಲಂಕಾರ, ಪಂಡಿತ ರಾಮಚಂದ್ರ ಮತ್ತು ಪಂಡಿತ ನರೇಂದ್ರಜಿಯವರು ಹೈದರಾಬಾದ ಕರ್ನಾಟಕದಾದ್ಯಂತ ಸಂಚಾರ ಮಾಡಿ ನಾಗರಿಕ ಹಾಗೂ ಧಾರ್ಮಿಕ ಹಕ್ಕುಗಳನ್ನು ಸಂರಕ್ಷಿಸಲು ಹೋರಾಟ ಮಾಡಲು ಜನರನ್ನು ಸಂಘಟಿಸಿದರು. ಸರ್ವ ದೇಶಿ ಕಾರ್ಯನಿಧಿಸಭಾ ಹೈದರಾಬಾದನ ಆರ್ಯ ಸಮಾಜಕ್ಕೆ ಹಣಕಾಸು ಹಾಗೂ ನೈತಿಕ ಬೆಂಬಲ ನೀಡುತ್ತಿತ್ತು (ಮಹಾಬಲೇಶ್ವರಪ್ಪ ೧೯೯೭:೪೦).

೧೯೨೬-೨೭ರ ವೇಳೆಗೆ ಆರ್ಯ ಸಮಾಜದ ಕಾರ್ಯಕರ್ತರು ಸೇರಿ ಹೈದ್ರಾಬಾದ್ ಕರ್ನಾಟಕ ಭಾಗಗಳಾದ ಕಲಬುರ್ಗಿ, ಬೀದರ ಮತ್ತು ರಾಯಚೂರ ಮುಂತಾದ ಪ್ರದೇಶಗಳಲ್ಲಿ ಆರ್ಯ ಸಮಾಜದ ಕೇಂದ್ರಗಳನ್ನು ಸ್ಥಾಪಿಸಿದರು. ಇವು ೧. ಮಾನವ ಜನಾಂಗದ ಸಮಾನತೆ ೨. ಜಾತಿ ಪದ್ಧತಿಯ ಖಂಡನೆ ೩. ಶಿಕ್ಷಣ ಮತ್ತು ಸಂಸ್ಕಾರಗಳಲ್ಲಿ ಸರ್ವರಿಗೂ ಸಮಾನ ಅವಕಾಶ ೪ ಸತ್ಯಾರ್ಥ ಪ್ರಕಾಶದ ಸಂದೇಶ ಅಂದರೆ ವೇದಗಳಿಗೆ ಹಿಂತಿರುಗಿ, ‘ಭಾರತೀಯರಿಗೆ ಭಾರತ’ ಮುಂತಾದ ತತ್ವ ಪ್ರಚಾರದ ಕೇಂದ್ರಗಳಾದವು. ಹೈದರಾಬಾದಿನಲ್ಲಿ ಸ್ಥಾಪನೆಯಾಗಿದ್ದ ಆರ್ಯಪ್ರತಿನಿಧಿ ಸಭಾ ಘಟಕದ ಮಾರ್ಗದರ್ಶನದಲ್ಲಿ ತಾಲೂಕು

ಮತ್ತು ಜಿಲ್ಲಾ ಮಟ್ಟದ ಆರ್ಯ ಸಮಾಜ ಕೇಂದ್ರಗಳು ತಮ್ಮ ಕಾರ್ಯದಲ್ಲಿ ನಿರತವಾಗಿದ್ದವು (ಮಹಾಬಲೇಶ್ವರಪ್ಪ ೧೯೯೭: ೩೯).

ಹಿಂದೂ ರಾಷ್ಟ್ರೀಯವಾದಿ ಬರಹಗಾರ ಬಾಲಚಂದ್ರ ಅವರ ಪ್ರಕಾರ "ಆರ್ಯ ಸಮಾಜದ ಕಾರ್ಯಚಟುವಟಿಕೆಗಳು ನಿಜಾಂ ಅವರ ಸರ್ಕಾರಕ್ಕೆ ನುಂಗಲಾರದ ತುತ್ತಾಯಿತು. ಹೇಗಾದರೂ ಮಾಡಿ ಆರ್ಯ ಸಮಾಜವನ್ನು ಬಗ್ಗು ಬಡಿಯಬೇಕೆಂದು ನಿಜಾಂ ಸರ್ಕಾರ ಯೋಚಿಸಿತು. ಆರ್ಯ ಸಮಾಜವನ್ನು ರಾಜ್ಯದಲ್ಲಿ ನಿಷೇಧಿಸಲು ಸಾಧ್ಯವಾಗಿರಲಿಲ್ಲವಾದ್ದರಿಂದ ಅದರ ಕಾರ್ಯ ಚಟುವಟಿಕೆಗಳ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿತು" ಎಂದು ಹೇಳಿದ್ದಾರೆ. ಅವುಗಳೆಂದರೆ

೧. ಹಿಂದೂ ದೇವಾಲಯಗಳನ್ನು, ಹಳೆಯ ಮಂದಿರಗಳನ್ನು ಜೀರ್ಣೋದ್ಧಾರ ಮಾಡಲು, ಹೊಸದಾಗಿ ನಿರ್ಮಿಸಬೇಕಾದರೆ 'ಅಮೂರೇ ಮಜಹಬಿ' ಈ ಇಲಾಖೆಯಿಂದ ಅನುಮತಿ ಪಡೆಯಬೇಕಾಗಿತ್ತು.

೨. ಆರ್ಯ ಸಮಾಜದ ಧಾರ್ಮಿಕ ಬಾವುಟವಾದ 'ಓಂ' ಧ್ವಜವನ್ನು ಹಾರಿಸುವುದನ್ನು ನಿಷೇಧಿಸಲಾಗಿತ್ತು. ಸಾರ್ವಜನಿಕ ಸ್ಥಳಗಳಲ್ಲೇ ಆಗಲಿ, ಖಾಸಗಿ ಸ್ಥಳಗಳಲ್ಲಿಯೇ ಆಗಲಿ 'ಓಂ' ಧ್ವಜವನ್ನು ಹಾರಿಸುವುದನ್ನು ಪ್ರತಿಬಂಧಿಸಿದರು.

೩. ಆರ್ಯ ಸಮಾಜದ ಒಳಗೆ ಹವನಕುಂಡಗಳನ್ನು ನಿರ್ಮಿಸುವುದನ್ನು ನಿಷೇಧಿಸಲಾಗಿತ್ತು.

೪. ಮೊಹರಂ ತಿಂಗಳಲ್ಲಿ ಹಬ್ಬ, ಉತ್ಸವ, ಆಚರಣೆ, ಮೆರವಣಿಗೆ ಜಾತ್ರೆಗಳನ್ನು ನಿಷೇಧಿಸಲಾಗಿತ್ತು. ಏಕೆಂದರೆ ನಿಜಾಂ ರಾಜ್ಯವು ಮುಸ್ಲಿಂರ ಶಿಯಾ ಪಂಥಕ್ಕೆ ಸೇರಿತ್ತು. ಈ ತಿಂಗಳಲ್ಲಿ ಖಲೀಫ ಹಜರತಿ ಅಲಿ ಹುಸೇನ ಕರ್ಬಲಾ ಯುದ್ಧದಲ್ಲಿ ಮರಣ ಹೊಂದಿದ್ದರಿಂದ ಈ ತಿಂಗಳನ್ನು ಶೋಕದ ತಿಂಗಳೆಂದು ಆಚರಿಸುತ್ತಿದ್ದರು.

೫. ಆ ರಾಜ್ಯದ ಸತ್ಸಂಗ ಮತ್ತು ಧಾರ್ಮಿಕ ಪ್ರವಚನಗಳ ಮೇಲೆ ನಿರ್ಬಧ ಹೇರಲಾಗಿತ್ತು. ಒಂದು ವೇಳೆ ಪ್ರವಚನ ಕಾರ್ಯಕ್ರಮ ಏರ್ಪಡಿಸಬೇಕಾದರೆ ಆ ಪ್ರವಚನದ ಒಂದು ನಕಲು ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಿ ಅನುಮತಿ ಪಡೆಯತಕ್ಕದ್ದು (ಬಾಲಚಂದ್ರ ೨೦೦೬:೪೮).

ಈ ರೀತಿ ನಿರ್ಬಂಧಗಳನ್ನು ಆರ್ಯ ಸಮಾಜದ ಮೇಲೆ ಹೇರಲಾಗಿತ್ತು. ಆರ್ಯ ಸಮಾಜದ ಹೈದರಾಬಾದಿನ ಸಾರ್ವದೇಶಿಕ ಸಭೆಯ ಪ್ರಧಾನರಾದ ನಾರಾಯಣ ಸ್ವಾಮಿಯವರು ನಿಜಾಂ ಅವರ ಸರ್ಕಾರಕ್ಕೆ ಕೆಲವು ಬೇಡಿಕೆಗಳನ್ನು ಈಡೇರಿಸಬೇಕೆಂದು ಕೇಳಿಕೊಂಡರು. ಆದರೆ ನಿಜಾಂ ಸರ್ಕಾರ ಆ ಬೇಡಿಕೆಗಳನ್ನು ತಿರಸ್ಕರಿಸಿತು. ಸಾರ್ವದೇಶಿಕ ಸಭೆಯು 'ಆರ್ಯ ರಕ್ಷಾ ಸಮಿತಿ' ಹೆಸರಿನಿಂದ ನಿಜಾಂ ಸರ್ಕಾರಕ್ಕೆ ಸಲ್ಲಿಸಿದ ಬೇಡಿಕೆಗಳೆಂದರೆ

೧. ಧಾರ್ಮಿಕ ನಿಯಮವನ್ನು ರದ್ದುಪಡಿಸಬೇಕು.

೨. ಹೊರಗಿನಿಂದ ಬರುವ ಉಪದೇಶಕರಿಗಾಗಿ ಪೂರ್ವಾನುಮತಿ ಪಡೆಯುವ ನಿರ್ಬಂಧ ಇರಬಾರದು.

೩. ಸಮಾಚಾರ ಪತ್ರಗಳ ಪ್ರಕಟಣೆಗೆ ಅನುಮತಿ ನೀಡಬೇಕು.

೪. ಹಿಂದೂ, ಮುಸ್ಲಿಂರ ಹಬ್ಬಗಳು ಒಟ್ಟಾಗಿ ಬಂದರೆ ಅವುಗಳನ್ನು ಆಚರಿಸುವ ಸ್ವಾತಂತ್ರ್ಯ ಇರಬೇಕು.

೫. ಆರ್ಯ ಸಮಾಜ ಮತ್ತು ಹವನ ಕುಂಡಗಳನ್ನು ನಿರ್ಮಿಸುವುದಕ್ಕೆ ಅವಕಾಶ ಮಾಡಿಕೊಡಬೇಕು.

೬. ಜೈಲುಗಳಲ್ಲಿರುವ ಕೈದಿಗಳನ್ನು ಮುಸ್ಲಿಂರನ್ನಾಗಿ ಮತಾಂತರಗೊಳಿಸಕೂಡದು.

೭. ಸರ್ಕಾರಿ ಕೆಲಸದಲ್ಲಿರುವ ಆರ್ಯ ಸಿಬ್ಬಂದಿಯ ಮೇಲೆ ಅವರು ಆರ್ಯರಾಗಿರುವ ಕಾರಣ ದಿಂದ ಒತ್ತಡ ಹೇರಬಾರದು (ಬಾಲಚಂದ್ರ ೨೦೦೬:೫೩-೫೪).

ನಿಜಾಂ ಸರ್ಕಾರ ಈ ಬೇಡಿಕೆಗಳನ್ನು ಒಪ್ಪಲಿಲ್ಲ. ೯ ಅಕ್ಟೋಬರ್ ೧೯೩೮ರಂದು ಹೈದರಾಬಾದ ಸಮಸ್ಯೆಗಳ ಕುರಿತು ಚಿಂತನೆ ಮಾಡಲು ಮತ್ತು ಸರಿಯಾದ ಕ್ರಮ ಕೈಗೊಳ್ಳಲು ಒಂದು ಮಹಾಸಭೆಯನ್ನು ಆಯೋಜಿಸಲು ನಿರ್ಣಯಿಸಿದರು. ಆ ನಿರ್ಣಯದಂತೆ ೨೫, ೨೬ ಮತ್ತು ೨೭ ಡಿಸೆಂಬರ್ ೧೯೩೮ ಈ ೩ ದಿನ ಸೋಲಾಪುರದಲ್ಲಿ ಆರ್ಯ ಸಮ್ಮೇಳನ ನಡೆಯಿತು. ಈ ಸಮ್ಮೇಳನದ ಸಂಪೂರ್ಣ ಹೊಣೆಯನ್ನು ನಾರಾಯಣ ಸ್ವಾಮಿಯವರಿಗೆ ವಹಿಸಿಕೊಡಲಾಗಿತ್ತು. ಹೈದರಾಬಾದ ಸಮಸ್ಯೆಯ ಕುರಿತು ಇಡೀ ಭಾರತ ದೇಶದ ಆರ್ಯರ ಅಭಿಪ್ರಾಯಗಳನ್ನು ಪಡೆದು ಸತ್ಯಾಗ್ರಹವನ್ನು ನಡೆಸಬೇಕೆಂಬುದು ನಾರಾಯಣಸ್ವಾಮಿಯವರ ಆಶಯವಾಗಿತ್ತು(ಮಹಾಬಲೇಶ್ವರಪ್ಪ ೧೯೯೭:೪೧). ಇವರ ಜೊತೆಗೆ ಗುಲಬರ್ಗಾದ ಖ್ಯಾತ ವಕೀಲರಾದ ಪಂಡಿತ ದತ್ತಾತ್ರೇಯ ಪ್ರಸಾದರನ್ನು ಸ್ವಾಗತ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿದ್ದರು. ಈ ಸಮ್ಮೇಳನದಲ್ಲಿ ಒಟ್ಟಿಗೆ ೨೦ ಪ್ರಸ್ತಾವನೆಗಳು ಪಾಸಾದವು. ಈ ಸಮ್ಮೇಳನವು ಕೇವಲ ಧಾರ್ಮಿಕ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಮಾತ್ರ ಸತ್ಯಾಗ್ರಹವನ್ನು ಘೋಷಿಸುತ್ತಿದೆ ಹೊರತು ನಿಜಾಂ ಸರ್ಕಾರದ ವಿರುದ್ಧ ಯಾವುದೇ ರೀತಿಯ ಚಳುವಳಿಯನ್ನು ಹುಟ್ಟು ಹಾಕುವ ವಿಚಾರವಿಲ್ಲ ಎಂದು ಹೇಳಿದರು. ಆರ್ಯ ಸಮಾಜದೊಂದಿಗೆ ಭಿನ್ನಾಭಿಪ್ರಾಯ ಹೊಂದಿದ್ದ ಸಂಘಟನೆಗಳು ನೇರವಾಗಿ ಸಹಕರಿಸದಿದ್ದರೂ ಅವು ತಮ್ಮ ಬೇಡಿಕೆಗಾಗಿ ಈ ಸತ್ಯಾಗ್ರಹದ ಜೊತೆಗೆ ಸ್ವತಂತ್ರವಾಗಿ ಸತ್ಯಾಗ್ರಹ ಆರಂಭಿಸಿದವು. ಈ ಎಲ್ಲ ಚಳುವಳಿಗಳಿಂದ ನಿಜಾಂ ಸರ್ಕಾರದ ಅಡಿಪಾಯ ಅಲ್ಲಾಡತೊಡಗಿತು.

'ಮಹಕಮ್-ಎ-ಉಮೂರ್-ಎ-ಮಜಹಬೀಟ ಎಂಬ ಧಾರ್ಮಿಕ ಇಲಾಖೆಯು ೭ ಜುಲೈ ೧೯೩೯ರ ವಕ್ತ ಪತ್ರಿಕೆಯ ಸಂಚಿಕೆಯ ಲೇಖನದ ಮೂಲಕ ಸರ್ಕಾರದ ಘೋಷಣೆಯನ್ನು ಪ್ರಕಟಿಸಿತು.

೨೨ ಜುಲೈಗೆ ಮೊದಲೇ ನಿಜಾಂ ಸರ್ಕಾರವು ಆರ್ಯ ಸಮಾಜದ ಎಲ್ಲ ಬೇಡಿಕೆಗಳನ್ನು ಈಡೇರಿಸುವುದು ಎಂದು ತಿಳಿಸಲಾಯಿತು. ಅದರಂತೆ ೧೯ ಜುಲೈ ೧೯೩೯ ರಂದು ನಿಜಾಂ ಅವರ ಸರ್ಕಾರವು ಆರ್ಯ ಸಮಾಜದ ಸತ್ಯಾಗ್ರಹವನ್ನು ತಡೆಯುವಲ್ಲಿ ವಿಫಲವಾಯಿತು (ಬಾಲಚಂದ್ರ ೨೦೦೬:೫೭). ೧೯೩೯ ಜುಲೈ ೨೧ ರಲ್ಲಿ ಪಂಡಿತ ವಿನಾಯಕರಾವ್ ವಿದ್ಯಾಲಂಕಾರರು ಸತ್ಯಾಗ್ರಹದ ರೂಪರೇಷೆ ತಯಾರಿಸಿದರು. ಅಷ್ಟರಲ್ಲಿ ನಿಜಾಂ ಅವರ ಸರ್ಕಾರ ಕೆಲವೊಂದು ಘೋಷಣೆಗಳನ್ನು ಮಾಡಿದ್ದರಿಂದ ಸತ್ಯಾಗ್ರಹವನ್ನು ಸ್ಥಗಿತಗೊಳಿಸಿದರು. ಸ್ಥಳೀಯ ಆರ್ಯ ಸಮಾಜಿಗರಾದ ಬನ್ಸಿಲಾಲ್ ಮತ್ತು ಶಾಮಲಾಲರು ಗುಲಬರ್ಗಾ, ಬೀದರ್ ಮತ್ತು ಉದ್ಗೀರಗಳಲ್ಲಿ ಬಹುಮುಖವಾದ ಸೇವೆಯನ್ನು ಸಲ್ಲಿಸಿ ಆರ್ಯ ಸಮಾಜದ ಚಟುವಟಿಕೆಗಳನ್ನು ವಿಸ್ತರಿಸಿದರು. ಈ ಸ್ಥಳಗಳಲ್ಲಿ ಶಾಲೆಗಳನ್ನು ಮತ್ತು ಗ್ರಂಥಾಲಯಗಳನ್ನು ಸ್ಥಾಪಿಸಿದರು. ಇದು ಧಾರ್ಮಿಕ ಪದ್ಧತಿಯ ಹಿಂದೂಗಳನ್ನಾಗಿ ಪರಿವರ್ತಿಸುವ ಸಂಸ್ಥೆ ಎಂದು ಟೀಕೆಗೊಳಗಾಯಿತು. ಆರ್ಯ ಸಮಾಜದ ಕಾರ್ಯಕರ್ತರು ಹವನ, ಭಜನೆ, ಧ್ವಜವಂದನೆ ಶಾಸ್ತ್ರ, 'ಓಂ' ಧ್ವಜಗಳನ್ನು ಹಾರಿಸುತ್ತಿದ್ದರು. ಹೈದ್ರಾಬಾದ್ ರಾಜ್ಯದಲ್ಲಿ ಆರ್ಯ ಸಮಾಜದವರು 'ಮುಶೀರೆ ದಕ್ಕನ್' 'ಹಶ್ಮತ ಗಂಜ', 'ನಯಿಜಿಂದಗೀ' ಸೋಲಾಪುರದಿಂದ 'ವೈದಿಕ ಸಂದೇಶ', 'ಸುದರ್ಶನ' ಎಂಬ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರು. ಪಂಡಿತ ನರೇಂದ್ರಜಿಯವರ ಸಹಯೋಗದೊಂದಿಗೆ ಶ್ರೀಚಂದುಲಾಲರು 'ವೈದಿಕ ಆದರ್ಶ' ಎಂಬಪತ್ರಿಕೆಯನ್ನು ಆರಂಭಿಸಿದರು (ಲೋಖಂಡೆ ೨೦೦೪:೧೨೨). ಸರ್ ಜಾನ್ ಲಾರ್ಡ್‌ರು ತಮ್ಮ ಪುಸ್ತಕದಲ್ಲಿ "ನಾನು ಹೈದ್ರಾಬಾದ್ ರಾಜ್ಯದಲ್ಲಿ ಆಧುನಿಕ ಕಾಲದ ಹಿಂದೂ ಮಂದಿರಗಳನ್ನು ನೋಡಬೇಕೆಂಬ ಆಸೆ, ಆದರೆ ಮಂದಿರಗಳ ಬದಲಿಗೆ ಎಲ್ಲ ಕಡೆಗಳಲ್ಲಿ ಮಸೀದಿಗಳು ಕಂಡುಬಂದವು" ಎಂದು ಬರೆದಿದ್ದಾರೆ (ಲೋಖಂಡೆ ೨೦೦೪:೧೪೬).

ಗುಲಬರ್ಗಾ ಕೂಡಾ ಆರ್ಯ ಸಮಾಜದ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿತ್ತು. ಉತ್ತರ ಭಾರತ ಹಾಗೂ ಹೈದರಾಬಾದಿನ ಪ್ರಮುಖ ಆರ್ಯ ಸಮಾಜದ ಕಾರ್ಯಕರ್ತರು ಗುಲಬರ್ಗಾಕ್ಕೆ ಬಂದು ಆರ್ಯ ಸಮಾಜದ ಚಟುವಟಿಕೆಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಆರ್ಯ ಸಮಾಜದ ತೀವ್ರವಾದ ಬೇಡಿಕೆಗಳನ್ನು ನಿಜಾಂ ಅವರ ಸರ್ಕಾರ ಒಪ್ಪದಿದ್ದರೂ ಅದು ಹಿಂದೂ ಮತಾಂಧ ಶಕ್ತಿಯನ್ನು ಒಟ್ಟಿಗೆ ತರಲು ಸಫಲವಾಯಿತು. ಮುಸ್ಲಿಂ ಮತಾಂಧರನ್ನು ಎದುರಿಸಲು ಹಿಂದೂ ಮತಾಂಧರು ಸಿದ್ದರಾದಾಗ ಆಗುವುದೇ ಹಿಂಸೆ. ಅನೇಕ ಹಿಂಸಾತ್ಮಕ ಘಟನೆಗಳು ನಡೆದಿರುವುದು ಹೋರಾಟದಲ್ಲಿ ಸ್ಪಷ್ಟವಾಗಿದೆ.

೧. ೧೯೩೮ರ ಹೋಳಿ ಹಬ್ಬದ ಸಂದರ್ಭದಲ್ಲಿ ಹಿಂದೂ-ಮುಸ್ಲಿಂರ ನಡುವೆ ನಡೆದ ಗಲಭೆಯಾಯಿತು. ಈ ಗಲಭೆಯಲ್ಲಿ ಓರ್ವ ಮುಸ್ಲಿಂನು ಹತನಾದನು. ಲಾಲ್‌ಸಿಂಗ್, ವಿಜಯಪಾಲ್ ಮತ್ತು ಶರಣಪ್ಪ ಮುಂತಾದವರು ಈ ಗಲಭೆಯ ಅಪರಾಧಿಗಳೆಂದು ಗುಲಬರ್ಗಾ ನ್ಯಾಯಾಲಯ ಅವರಿಗೆ ೧೦ ವರ್ಷ ಜೈಲು ಶಿಕ್ಷೆ ವಿಧಿಸಿತು (ಪೊಲೀಸ್ ಪಾಟೀಲ್ ೨೦೦೨:೧೧೬).

೨. ೧೯೪೨ ಡಿಸೆಂಬರ್ ೧೧ರಂದು ಗುಲಬರ್ಗಾದಲ್ಲಿ ಹಿಂದೂಗಳ ಅಂಗಡಿಗಳು ಲೂಟಿ ಮಾಡಲ್ಪಟ್ಟವು. ಏಕೆಂದರೆ ಅವರು ಆರ್ಥಿಕವಾಗಿ ಸದೃಢರಾಗಿರುವುದರ ಜೊತೆಗೆ ಆರ್ಯ ಸಮಾಜದ ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಇದರ ಪ್ರಯುಕ್ತ ೧೯೪೨ ಡಿಸೆಂಬರ್‌ದಲ್ಲಿ ದಸರಾ ಮೆರವಣಿಗೆಯ ಸಮಯದಲ್ಲಿ ಗಲಾಟೆ ಆರಂಭವಾಯಿತು. ಈ ಗಲಾಟೆಯಲ್ಲಿ ನಿಜಾಂ ಅವರ ಸರ್ಕಾರದ ಪೊಲೀಸ್‌ರು ಆರ್ಯಸಮಾಜದವರ ಮೇಲೆ ಆಕ್ರಮಣ ಮಾಡಿದರು. ಈ ಸಮಯದಲ್ಲಿ ಕೊಲ್ಲೂರ ಮಲ್ಲಪ್ಪ ಮತ್ತು ಜಗನ್ನಾಥರಾವ್ ಚಂಡ್ರಿಕಿ ಮುಂತಾದವರನ್ನು ಬಂಧಿಸಿ ಅವರಿಂದ ದಂಡವನ್ನು ಪಡೆದರು. ಇವರಲ್ಲದೇ ದತ್ತಾತ್ರೇಯ ಅವರಾದಿ, ವೈಜಯಂತ ಇರ್ವಿ, ಅಮರಸಿಂಹ ರಾಠೋಡ, ಚಂದ್ರಶೇಖರ ಪಾಟೀಲ್, ಸರ್ದಾರ ಶರಣಗೌಡ ಮತ್ತು ಕಕ್ಕೇರಿ ಹನುಮಂತರಾಯ ಮುಂತಾದವರು ಭಾಗವಹಿಸಿದ್ದರು.

೩. ೧೯೪೫ ಏಪ್ರಿಲ್ ೨೭ ರಿಂದ ೨೪ರವರೆಗೆ ಗುಲಬರ್ಗಾದಲ್ಲಿ ಆರ್ಯ ಸಮಾಜದ ೪ನೇ ಅಧಿವೇಶ ಸಮಾವೇಶಗೊಂಡಿತ್ತು. ಇದರ ಅಧ್ಯಕ್ಷತೆಯನ್ನು ನಾರಾಯಣರಾವ್ ಲಾಲಪಿಟ್ಟರವರು ವಹಿಸಿಕೊಂಡಿದ್ದರು. ಸ್ಥಳೀಯ ಪೊಲೀಸರು ಮತ್ತು ರಜಾಕಾರರು ಯಾವ ಮುನ್ಸೂಚನೆಯಿಲ್ಲದೆ ದಾಳಿ ಮಾಡಿ ಪಂಡಿತ ವಿನಾಯಕರಾವ್, ಗಣಪತಿಶಾಸ್ತ್ರಿ, ಪಂಡಿತ ನರೇಂದ್ರಜೀ ಹಾಗೂ ಒಬ್ಬ ಸ್ವಯಂ ಸೇವಕ ಹೀರಾಲಾಲ್ ಪಾಂಡೆ ಮುಂತಾದವರನ್ನು ದಾರುಣವಾಗಿ ಹೊಡೆದರೆಂದು ತಿಳಿದುಬರುತ್ತದೆ (ಪೊಲೀಸ್ ಪಾಟೀಲ್ ೨೦೦೨: ೩೨೨). ಪೊಲೀಸರ ಲಾಟಿಚಾರ್ಜಿನಿಂದ ಉಂಟಾದ ಅತೃಪ್ತಿಯು ಗುಲಬರ್ಗಾ ಜಿಲ್ಲಾಯಾದ್ಯಂತ ವ್ಯಾಪಕವಾಗಿ ಹರಡಿ ರಾಷ್ಟ್ರೀಯ ಐಕ್ಯತೆಯ ಚುರುಕುಗೊಂಡಿತು. ಹೀಗೆ ಆರ್ಯ ಸಮಾಜವು ಸಂಸ್ಥಾನಿ ಹೋರಾಟಗಾರರಲ್ಲಿ ಪರಿಣಾಮಕಾರಿಯಾದ ಸಂಘಟನೆ ಮೂಡಿಸುವಲ್ಲಿ ಗಣನೀಯ ಪಾತ್ರವಹಿಸಿದೆ.

ಈ ಮೇಲಿನ ಎಲ್ಲ ಘಟನೆಗಳನ್ನು ಗಮನಿಸಿದಾಗ ಮೊದಲನೇ ಘಟನೆಯಲ್ಲಿ ಆರ್ಯ ಸಮಾಜಿಗರು ಮುಸ್ಲಿಂರ ಮೇಲೆ ದಾಳಿ ಮಾಡಿದ್ದು ಕಂಡುಬರುತ್ತದೆ. ಎರಡನೆಯ ಮತ್ತು ಮೂರನೆಯ ಘಟನೆಗಳಲ್ಲಿ ಮುಸ್ಲಿಂರು, ರಜಾಕಾರರು ಮತ್ತು ಪೊಲೀಸರು ಆರ್ಯ ಸಮಾಜದವರ ಮೇಲೆ ದಾಳಿ ಮಾಡಿದ್ದಾರೆ. ಈ ಮೇಲಿನ ಘಟನೆಗಳಲ್ಲಿ ಪೊಲೀಸರು ಮತ್ತು ರಜಾಕಾರರು ಕೈಗೊಂಡಿರುವ ಹಿಂಸಾತ್ಮಕ ಕಾರ್ಯಚಟುವಟಿಕೆ ಎದ್ದು ಕಾಣುತ್ತದೆ.

ಇಷ್ಟೆಲ್ಲಾ ಹಿಂಸಾತ್ಮಕ ಕಾರ್ಯಚಟುವಟಿಕೆಗಳು ಜರುಗಿದರೂ ಕೂಡ ಆರ್ಯ ಸಮಾಜದ ನಾಯಕರಾದ ದತ್ತಾತ್ರೇಯ ಅವರಾದಿ, ಅಮರಸಿಂಹ ರಾಠೋಡ, ಚಂದ್ರಶೇಖರ ಪಾಟೀಲ್ ಇವರ ಭಾಗಗಳಲ್ಲಿ ಆರ್ಯ ಸಮಾಜದ ಮಂದಿರಗಳು ಹಾಗೂ ಕಚೇರಿಗಳನ್ನು ಸ್ಥಾಪಿಸಲಾಯಿತು (ದೊಡ್ಮನಿ ೨೦೦೨:೨೪). ಆರ್ಯಸಮಾಜದ ಸಂಘಟನೆಯ ರೂಪರೇಷೆಗಳೆಂದರೆ ರವಿವಾರಕ್ಕೊಮ್ಮೆ ಹೋಮ ಮಾಡುವುದು, ಸಭೆ, ಸಮಾರಂಭಗಳನ್ನು ಏರ್ಪಡಿಸುವುದಾಗಿತ್ತು.

ಗುಲಬರ್ಗಾದಿಂದ ಆರ್ಯ ಸಮಾಜದ ಮುಖಂಡರು ಸುರಪುರಕ್ಕೆ ಬರುತ್ತಿದ್ದರು. ಸುರಪುರದಲ್ಲಿ ವೆಂಕೋಬರಾವ್ ಪದಕಿಯವರು ಮನೆಯಲ್ಲಿ ಮತ್ತು ಶ್ರೀ ವೇಣುಗೋಪಾಲ ದೇವಾಲಯದ ಪ್ರಾಂಗಣದಲ್ಲಿ ಆರ್ಯ ಸಮಾಜದ ಸಭೆ ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ಆ ಸಭೆಗಳಲ್ಲಿ 'ದೇಶಾಭಿಮಾನದ ಬಗ್ಗೆ ಸ್ವಾತಂತ್ರ್ಯದ ಬಗ್ಗೆ ಮತ್ತು ಭಾರತವಾಸಿಗಳಾದ ನಾವೆಲ್ಲರೂ ಒಂದು' ಎಂಬ ಅಂಶಗಳನ್ನು ಕುರಿತು ಉಪನ್ಯಾಸಗಳನ್ನು ಹೇಳುತ್ತಿದ್ದರು ಎಂದು ಆರ್ಯ ಸಮಾಜದ ಸಭೆ-ಸಮಾರಂಭಗಳಲ್ಲಿ ಭಾಗಿಯಾದ ಮಹಾದೇವಪ್ಪ ಹೂಗಾರರು ಸಂದರ್ಶನದಲ್ಲಿ ಹೇಳಿದ್ದಾರೆ (ಸಂದರ್ಶನ : ಮಹಾದೇವಪ್ಪ ಹೂಗಾರ, ೦೧.೦೨.೨೦೦೬).

ಸುರಪುರದಲ್ಲೂ ಕೂಡ ಆರ್ಯ ಸಮಾಜ ಸಂಸ್ಥೆಯ ಕಛೇರಿಯನ್ನು ಸ್ಥಾಪನೆ ಮಾಡಿದರು ಇದರ ಅಧ್ಯಕ್ಷತೆಯನ್ನು ಶಿವನಾರಾಯಣ ವರ್ಮಾ, ಕಾರ್ಯದರ್ಶಿಯರಾಗಿ ಕೃಷ್ಣಮಾಚಾರ್ಯ ಪುಣೇಕರ ಮತ್ತು ಮಾಣಿಕರಾವ್ ನಾಯಕ ಇವರು ವಹಿಸಿಕೊಂಡಿದ್ದರು. ಆರ್ಯ ಸಮಾಜದ ಕಛೇರಿಗೆ ಸ್ವಂತ ಜಾಗವಿರಲಿಲ್ಲ. ಬಾಡಿಗೆ ಕಟ್ಟಡದಲ್ಲಿ ಕಛೇರಿಯನ್ನು ನಡೆಸುತ್ತಿದ್ದರು. ದಸರಾದಲ್ಲಿ ಮೆರವಣಿಗೆ ಮಾಡುತ್ತಿದ್ದರು. ಗುಲಬರ್ಗಾದಿಂದ ಆರ್ಯ ಸಮಾಜದ ಕಾರ್ಯಕರ್ತರು ಸುರಪುರಕ್ಕೆ ಬಂದು ಹಿಂದೂ ಧರ್ಮದ ಬಗ್ಗೆ, ರಜಾಕಾರರ ವಿರುದ್ಧ ಮಾಡಬೇಕಾದ ಕರ್ತವ್ಯಗಳ ಬಗ್ಗೆ, ಮತಾಂತರವಾಗದಂತೆ ನೋಡಿಕೊಳ್ಳುವುದು ಈ ವಿಷಯಗಳನ್ನು ಕುರಿತಂತೆ ಉಪನ್ಯಾಸ ಮಾಡುತ್ತಿದ್ದರು. ಅದಾದ ನಂತರ ಸುರಪುರದಲ್ಲಿ ರಾಮಚಂದ್ರವರ್ಮಾರವರು ಅಧ್ಯಕ್ಷರಾದರು, ಭೀಮರಾವ್ ಹೋಟೆಲ್, ಯಂಕಯ್ಯ ಮಾಸ್ತರ ಕಾರ್ಯದರ್ಶಿ ಗಳಾಗಿ ಆರ್ಯ ಸಮಾಜದ ಕಾರ್ಯಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋದರು (ಸಂದರ್ಶನ: ರಾಮಚಂದ್ರವರ್ಮ ೨.೦೨.೨೦೦೬).

ಸುರಪುರದ ಒಂದು ಭಾಗವಾದ ರಂಗಂಪೇಟದಲ್ಲಿಯೂ ಕೂಡ ಅನೇಕ ಜನ ಆರ್ಯ ಸಮಾಜದವರಿದ್ದರು. ವಂಕೋಬರಾವ್ ಆರ್ಯ, ಮಲ್ಲಯ್ಯ ಪಾಣಿಭಾತೆ, ಕಿಡಕಿ ಬಸ್ಸಣ್ಣ, ತಮ್ಮಣ್ಣ ಬಾಸುತ್ಕರ ಇವರೆಲ್ಲರು ಆರ್ಯ ಸಮಾಜದವರಾಗಿದ್ದರು.

೧೯೪೪ರಲ್ಲಿ ಗುಲಬರ್ಗಾದಲ್ಲಿ ನಡೆದ ಆರ್ಯ ಸಮಾಜದ ೪ನೇ ಅಧಿವೇಶನದಲ್ಲಿ ನಾರಾಯಣ ಲಾಲಪಿಟ್ಟಯವರು ಅವರ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ಸುಮಾರು ೨೫ ಜನ ಆರ್ಯ ಸಮಾಜಿಗರು ರಂಗಂಪೇಟ ಮತ್ತು ಸುರಪುರದಿಂದ ಅಧಿವೇಶನದಲ್ಲಿ ಭಾಗವಹಿಸಿದ್ದರು. ಇವರಲ್ಲಿ ವಿಠೋಬಾ ಪಾಣಿಭಾತೆ, ಮಾರ್ಥಂಡರಾವ್ ಪಾಣಿಭಾತೆ, ಕಾಶೀನಾಥರಾವ್ ಧಾಯಪುಲೆ, ತಮ್ಮಣ್ಣ ಬಾಸುತ್ಕರ, ವೆಂಕೋಬರಾವ್ ಆರ್ಯ ಪ್ರಮುಖರಾಗಿದ್ದಾರೆ. ಸುರಪುರದಲ್ಲಿ ವೆಂಕೋಬರಾವ್ ಪದಕಿ, ಶಿವನಾರಾಯಣ ಸೇಠ, ಮಾಧವರಾವ ಬಾಸುತ್ಕರ ಆರ್ಯ ಸಮಾಜಿಗರ ಪ್ರಮುಖ ನಾಯಕರಾಗಿದ್ದಾರೆ.

ಒಮ್ಮೆ ಮೊಹರಂ ಹಬ್ಬದ ಸಂದರ್ಭದಲ್ಲಿ ಕಿಡಕಿ ಬಸಣ್ಣನ ಮೇಲೆ ಹಮಲಾ ನಡೆಯಿತು. ಆ ನಾರಾಯಣಪ್ಪ ಜುಜಾರೆ ಮತ್ತಿತರರು ಜಗಳವಾಗದಂತೆ ನೋಡಿಕೊಂಡರು. ಮಾಣಿಕರಾವ ಪಾಡಮುಖಿ, ಪ್ರಧಾನಪ್ಪ ಪಾಣಿಭಾತೆ ಇವರ ಮನೆಯಲ್ಲಿ ಕೈಮಗ್ಗಗಳಿದ್ದವು. ಅಲ್ಲಿ ದುಡಿಯುವವರೆಲ್ಲರು ಮುಸ್ಲಿಂರಾಗಿದ್ದರು. ಮುಸ್ಲಿಂರು ಹಿಂದೂಗಳೊಂದಿಗೆ ಅನ್ಯೋನ್ಯದಿಂದ್ದರು. ಒಂದು ವೇಳೆ ಹಿಂದೂಗಳೊಂದಿಗೆ ಜಗಳವಾಡಿದರೇ ಅವರು ಎಲ್ಲಿ ಕೆಲಸ ಬಿಡಿಸುತ್ತಾರೋ ಎನ್ನುವ ಭಯವಿತ್ತು (ಸಂದರ್ಶನ : ರಾಮಚಂದ್ರವರ್ಮ ೦೨.೦೨.೨೦೦೬).

ರಂಗಂಪೇಟೆಯ ಸಹಜಾನಂದ ಸ್ವಾಮಿಗಳ ಗುಡಿಯಲ್ಲಿ ಯಾವಾಗಲೂ ಭಜನೆ, ಮಂತ್ರ ಘೋಷಣೆ, ಘಂಟೆ ಬಾರಿಸುವುದು ನಡೆಯುತ್ತಿತ್ತು. ಅಲ್ಲಿಯೇ ಸಮೀಪದಲ್ಲಿ ಮಸೀದಿ ಇತ್ತು. ಮುಸ್ಲಿಂರು ಹಿಂದೂಗಳ ಧಾರ್ಮಿಕ ಕಾರ್ಯಗಳನ್ನು ವಿರೋಧಿಸಿದರು. ಹಿಂದೂಗಳು ಹೈದರಾಬಾದಿನ ಮಂತ್ರಿಯಾಗಿದ್ದ ಮಿರ್ಜಾ ಇಸ್ಮಾಯಿಲ್‌ರನ್ನು ಭೇಟಿ ಮಾಡಿ ನಡೆದ ಪರಿಸ್ಥಿತಿಯನ್ನು ವಿವರಿಸಿದರು. ಇದನ್ನರಿತ ಮಿರ್ಜಾ ಇಸ್ಮಾಯಿಲ್‌ರು ರಂಗಂಪೇಟೆಗೆ ಬಂದು ಹಿಂದೂ-ಮುಸ್ಲಿಂರ ವಿವಾದವನ್ನು ಇತ್ಯಾರ್ಥಪಡಿಸಿ ಶ್ರೀ ಸಹಜಾನಂದರ ಸಮಾಧಿಯನ್ನು ಕಟ್ಟಲು ಅನುಮತಿ ನೀಡಿದರು. ಸುರಪುರದ ಶ್ರೀ ವೇಣುಗೋಪಾಲ ದೇವರ ದರ್ಶನವನ್ನು ಮಾಡಿಕೊಂಡು ಹೋದರು (ಸಂದರ್ಶನ : ರಾಮಚಂದ್ರವರ್ಮ ೧೨.೦೨.೨೦೦೬).

೧೭ ಸೆಪ್ಟೆಂಬರ್ ೧೯೪೮ರ ನಂತರ ಹೈದರಾಬಾದ ಭಾರತದಲ್ಲಿ ವಿಲೀನಗೊಂಡ ಮೇಲೆ ರಾಜಾ ವೆಂಕಟಪ್ಪನಾಯಕನ ಜೊತೆ ಊರಿನ ಪ್ರಮುಖರು ಸುರಪುರದೊಳಗೆ ಪ್ರವೇಶ ಮಾಡಿದರು. ಸುರಪುರದ ಮಧ್ಯಭಾಗದಲ್ಲಿದ್ದ ರಮಣಪ್ಪನಾಯಕನ ಕಟ್ಟೆಯ ಮೇಲಿದ್ದ ಮಸೀದಿಯನ್ನು ಕೆಡವಿ ಆ ಸ್ಥಳದಲ್ಲಿ ಸರ್ದಾರ ವಲ್ಲಭಾಯಿ ಪಟೇಲರ ಮೂರ್ತಿಯನ್ನು ಪ್ರತಿಷ್ಠಾಪಿಸುವ ಮನೋಭಾವವನ್ನು ಹಿಂದೂ ಮತಾಂದರು ಹೊಂದಿದ್ದರು ಎಂಬ ರೀತಿಯ ವಿವರಗಳನ್ನು ರಾಮಚಂದ್ರವರ್ಮ ಅವರು ಸಂದರ್ಶನದಲ್ಲಿ ತಿಳಿಸಿದ್ದಾರೆ. ವಲ್ಲಭಬಾಯಿಯವರ ಮೂರ್ತಿಯನ್ನು ತರುವ ಜವಾಬ್ದಾರಿ ರಾಮಚಂದ್ರವರ್ಮರವರ ಮನೆತನದವರಾದ ಶಿವನಾರಾಯಣವರ್ಮ ಮತ್ತು ಜಗನ್ನಾಥವರ್ಮರವರು ವಹಿಸಿಕೊಂಡಿದ್ದರು. ಈ ಮೂರ್ತಿಯನ್ನು ಜೈಪುರದಿಂದ ತರಿಸಿದರು. ಆದರೆ ಮೂರ್ತಿಯನ್ನು ಪ್ರತಿಷ್ಠಾಪಿಸುವುದು ವಿಳಂಬವಾದಾಗ ಗುಲಬರ್ಗಾದಿಂದ ಆರ್ಯ ಸಮಾಜಿಗರು ಮೇಲಿಂದ ಮೇಲೆ ಸುರಪುರಕ್ಕೆ ಬಂದು ಮೂರ್ತಿಯನ್ನು ಆದಷ್ಟು ಬೇಗ ಕೂಡಿಸಬೇಕೆಂಬ ತೀವ್ರವಾದ ಇಚ್ಛೆ ಅವರದಾಗಿತ್ತು.

ಮನೋಹರಸಿಂಗ, ತುಕಾರಾಮ ಕೊಟ್ಟೂರು, ಧರ್ಮವೀರಗಂಪ, ಧರ್ಮಪಾಲಗಂಪಾ ಈ ಎಲ್ಲ ಆರ್ಯ ಸಮಾಜಿಗರು ಸುರಪುರಕ್ಕೆ ಬಂದು ಇಲ್ಲಿಯವರೊಡಗೂಡಿ ವಲ್ಲಭಬಾಯಿಯವರ ಮೂರ್ತಿಯನ್ನು

ಮೆರವಣಿಗೆ ಮಾಡಿ ೧೯೫೬ರಲ್ಲಿ ಪ್ರತಿಷ್ಠಾಪಿಸಿದರು. ಇದರ ಬಗ್ಗೆ ವ್ಯಾಜ್ಯ ನಡೆಯಿತು. ಗುಲಬರ್ಗಾದ ಡಿಸ್ಟ್ರಿಕ್ಟ್ ಸೂಪರಿಂಡೆಂಟ್ ಆಫ್ ಪೊಲೀಸ್ ಶ್ರೀ ತಿವಾರಿ, ಹೈದರಾಬಾದಿನ ಗೃಹಮಂತ್ರಿ ಜಿ.ಎಸ್.ಮೇಲ್ಕೋಟೆ ವ್ಯಾಜ್ಯದ ವಿಚಾರಣೆಯನ್ನು ನಡೆಸಿದರು. ಇದಕ್ಕಾಗಿ ತಿರುಪತಿರಾವ್, ಜಬರಚಂದ, ಶಿವನಾರಾಯಣವರ್ಮಾರವರನ್ನು ವಿಚಾರಣೆ ನಡೆಸಿದರು. ಸುರಪುರದಲ್ಲಿ ಈ ವ್ಯಾಜ್ಯವು ಬಗೆಹರಿಯದೆ ಇದ್ದಾಗ ಸುರಪುರದ ಮುನ್ಸಿಫರಾದ ಯಶವಂತರಾವ್ ದೇಶಪಾಂಡೆಯವರು ಈ ವ್ಯಾಜ್ಯವನ್ನು ಗುಲಬರ್ಗಾಕ್ಕೆ ವರ್ಗಾಯಿಸಿದರು. ಗುಲಬರ್ಗಾದ ಮುನ್ಸಿಫ ಆಡಿವಾಚಾರ್ಯರಾಗಿದ್ದರು. ಇವರಿಬ್ಬರು ಹಿಂದುಗಳ ಪರವಾಗಿದ್ದರು. ಗುಲಬರ್ಗಾದ ಆರ್ಯ ಸಮಾಜದ ಕಾರ್ಯದರ್ಶಿ ತುಕರಾಮ ಈ ಘಟನೆಯ ಮೊದಲನೆ ಆರೋಪಿಯಾಗಿದ್ದರು. ಆರ್ಯಸಮಾಜದವರ ಪ್ರಭಾವದಿಂದ ಈ ವ್ಯಾಜ್ಯ ಬಗೆಹರಿಯಿತು.

ಹೀಗೆ ಹೈದರಬಾದ್ ಕರ್ನಾಟಕದಲ್ಲಿ ಆರ್ಯ ಸಮಾಜವು ಪಡೆದುಕೊಂಡ ಪ್ರಾಮುಖ್ಯತೆಯ ಯಾವ ಭಾಗಗಳಲ್ಲಿ ಗಳಿಸಿಕೊಂಡಿರಲಿಲ್ಲ. ಹೈದರಾಬಾದ ಕರ್ನಾಟಕದ ರಾಷ್ಟ್ರೀಯ ವಾದಿಗಳಲ್ಲಿ ಹೆಚ್ಚಿನ ಜನರು ಆರ್ಯ ಸಮಾಜದ ಕಾರ್ಯಕರ್ತರಾಗಿದ್ದರು. ನಿಜಾಂ ಸರ್ಕಾರದ ವಿರುದ್ಧ ನಡೆದ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರವು ಗಮನಾರ್ಹವಾಗಿದೆ.

## ೩.೩. ಭಾಷೆಯ ದಬ್ಬಾಳಿಕೆ

ಹೈದರಾಬಾದ ಕರ್ನಾಟಕ ವಿಮೋಚನೆಯ ಹೋರಾಟದಲ್ಲಿ ಪ್ರಮುಖ ಅಂಶಗಳಲ್ಲಿ ಮುಖ್ಯವಾದುದು ಭಾಷಾ ದಬ್ಬಾಳಿಕೆ. ಹೈದರಾಬಾದ ಸಂಸ್ಥಾನದ ನಿಜಾಂ ಮೀರ್ ಉಸ್ಮಾನ ಅಲಿಖಾನನ ಆಳ್ವಿಕೆಯಲ್ಲಿ ಭಾಷಾ ದಬ್ಬಾಳಿಕೆಯ ಪಾತ್ರವು ಮಹತ್ವದ್ದಾಗಿದೆ ಎಂಬ ವಿಷಯ ಜನಜನಿತವಾಗಿದೆ. ಭಾಷಾ ದಬ್ಬಾಳಿಕೆಯೆಂದರೆ ಭಾಷೆಗಳ ನಡುವಿನ ತಾರತಮ್ಯವಾಗಿದೆ. ಮರಾಠವಾಡದ ೫ ಜಿಲ್ಲೆಗಳು, ತೆಲಂಗಾಣದ ೮ ಜಿಲ್ಲೆಗಳು ಮತ್ತು ಕನ್ನಡದ ಪ್ರದೇಶದ ೩ ಜಿಲ್ಲೆಗಳು ಸೇರಿದ ಪ್ರದೇಶಗಳು ಹೈದರಾಬಾದ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟಿದ್ದವು. ಈ ಸಂಸ್ಥಾನವು ಬಹು ಭಾಷೆಗಳನ್ನು ಮಾತನಾಡುವ ಪ್ರದೇಶಗಳನ್ನು ಒಳಗೊಂಡಿತು. ಬ್ರಿಟಿಷರ ನಂತರ ಬಂದ ನಿಜಾಂ ಅವರ ಆಳ್ವಿಕೆಯ ಕಾಲದಲ್ಲಿ ಉರ್ದು ಭಾಷೆಯು ಆಡಳಿತದ ಭಾಷೆಯಾಗಿ ಮತ್ತು ಶಿಕ್ಷಣ ಮಾಧ್ಯಮದ ಪ್ರಧಾನ ಭಾಷೆಯಾಗಿ ಅಸ್ತಿತ್ವಕೆ ಬಂದಿತು.

ಈ ವಿಷಯಕ್ಕೆ ಸಂಬಂಧಿಸಿದಂತೆ ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೬), ಎಚ್.ಎಸ್.ಪಾಟೀಲರ 'ವಿಮೋಚನೆ'(೧೯೯೯), ಬಿ.ಸಿ. ಮಹಾಬಲೇಶ್ವರಪ್ಪನವರ 'ಹೈದರಾಬಾದ ಕರ್ನಾಟಕದ ರಾಜಕೀಯ ಚಳುವಳಿ'(೧೯೯೪), ಬಸವರಾಜ ಪೋಲೀಸ ಪಾಟೀಲರ 'ಬಿಡುಗಡೆ'(೨೦೦೨), ಅಮರೇಶ ನುಗಡೋಣಿಯವರ 'ಹೈದರಾಬಾದು ಕರ್ನಾಟಕ ಹಾಡು ಪಾಡು'(೨೦೦೩), ಟಿ.ಎಂ.ಭಾಸ್ಕರರ 'ಕಲಬುರ್ಗಿ ಜಿಲ್ಲಾ ದರ್ಶನ'(೨೦೦೫), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ

ಕರ್ನಾಟಕ ವಿಮೋಚನಾ ಚಳುವಳಿ'(೨೦೦೬) ಎಂಬ ಪ್ರಕಟಿತ ಗ್ರಂಥಗಳಲ್ಲದೆ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ನಿಬಂಧಗಳಾದ ಸುಭಾಸಚಂದ್ರ ದೊಡ್ಮನಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪)ಗಳನ್ನು ಪೂರಕವಾಗಿ ಬಳಸಿಕೊಂಡಿದ್ದೇನೆ. ಇವುಗಳಲ್ಲದೆ ಈ ಹೋರಾಟಕ್ಕೆ ಸಂಬಂಧಿಸಿದ ವ್ಯಕ್ತಿಗಳನ್ನು ಮತ್ತು ಹೋರಾಟಗಾರರನ್ನು ಸಂದರ್ಶನ ಮಾಡುವುದರ ಮೂಲಕ ಇದಕ್ಕೆ ಸಂಬಂಧಿಸಿದಂತಹ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

** **

ನಿಜಾಂ ಅವರ ಆಳ್ವಿಕೆಯ ಕಾಲದಲ್ಲಿ ಮೊದಲು ಫಾರಸಿ ಭಾಷೆಯು ಮುಂಚೂಣಿಯ ಸ್ಥಾನದಲ್ಲಿತ್ತು. ನಂತರ ಉರ್ದು ಭಾಷೆಯನ್ನು ರಾಜ್ಯದ ಆಡಳಿತ ಭಾಷೆಯನ್ನಾಗಿ ಕಡ್ಡಾಯಗೊಳಿಸಿದರು. ಅಂದರೆ ಹೈದರಾಬಾದಿನ ನಿಜಾಂನು ಉರ್ದು ಭಾಷೆಯನ್ನು ಅಭಿವೃದ್ಧಿಪಡಿಸಲು ಕ್ರಮವನ್ನು ಕೈಗೊಂಡರು. ಹೈದರಾಬಾದ ಸಂಸ್ಥಾನದ ಪ್ರಾಂತ್ಯಗಳಲ್ಲಿ ಕನ್ನಡ, ಮರಾಠಿ. ತೆಲುಗು, ಭಾಷೆಗಳು ದೇಶಿಭಾಷೆಗಳಾಗಿದ್ದವು. ಬಹುಸಂಖ್ಯಾತರಾದ ಕನ್ನಡಿಗರು ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಬದಿಗೊತ್ತಿ ಪ್ರಭುತ್ವದ ಭಾಷೆಯಾದ ಉರ್ದು ಭಾಷೆಯನ್ನು ಕಲಿಯುವ ಒತ್ತಡಕ್ಕೊಳಗಾದರು.

ಸಂಸ್ಥಾನದಲ್ಲಿ ಉರ್ದು ಭಾಷೆಯನ್ನು ಕಲಿತರುವವರ ಸಂಖ್ಯೆ ಕಡಿಮೆಯಿತ್ತು. ಆಡಳಿತವನ್ನು ಸುವ್ಯವಸ್ಥಿತವಾಗಿ ನಡೆಸುವುದಕ್ಕೆ ಉತ್ತರ ಭಾರತದಿಂದ ಉರ್ದು ಭಾಷೆ ಕಲಿತ ಜನರನ್ನು ಸಂಸ್ಥಾನಕ್ಕೆ ಬರಮಾಡಿಕೊಂಡು ಅವರು ಸಂಸ್ಥಾನದಲ್ಲಿ ನೆಲೆಸಲು ಎಲ್ಲ ರೀತಿಯ ಸೌಲಭ್ಯಗಳನ್ನು ಒದಗಿಸುತ್ತಿದ್ದರು. ಸ್ಥಳೀಯವಾಗಿ ಉರ್ದು ಭಾಷಿಕರನ್ನು ಆಡಳಿತಾತ್ಮಕ ಕಾರಣಗಳಿಂದ ಸೃಷ್ಟಿಸುವುದು ಈ ಕಾಲದಲ್ಲಿ ಅವಶ್ಯಕತೆಯಾಗಿತ್ತು ಎಂಬ ಎಚ್.ಎಸ್.ಪಾಟೀಲರು ಸಂಪಾದಿಸಿದ ಕೃತಿಯಿಂದ ತಿಳಿದುಬರುತ್ತದೆ (ಪಾಟೀಲ್ ೧೯೯೯:೧೨೫).

[illegible] ಉರ್ದು ಭಾಷೆಯನ್ನು ದೇಶಿ ಭಾಷೆಯನ್ನಾಗಿ ಮಾಡಲು ನಿಜಾಂ ಸರ್ಕಾರ ಶ್ರಮಿಸಿತು. ಆದರೆ ಸಂಸ್ಥಾನದ ದೇಶಿಭಾಷೆಗಳು ಕನ್ನಡ, ತೆಲುಗು, ಮರಾಠಿ ಆಗಿದ್ದವು (ನುಗಡೋಣಿ ೨೦೦೩:೭೩). ಬಹುಸಂಖ್ಯಾತರಾಗಿದ್ದ ಕನ್ನಡಿಗರು ಕನ್ನಡ ಭಾಷೆಯಲ್ಲಿ ಶಿಕ್ಷಣ ಪಡೆದು ಮುಂದೊಂದು ದಿನ ನಿಜಾಂ ಸಂಸ್ಥಾನಕ್ಕೆ ಮಾರಕವಾಗಬಹುದು ಎನ್ನುವ ದೃಷ್ಟಿಯಿಂದ ನಿಜಾಂ ಅವರು ಉರ್ದು ಭಾಷೆಯನ್ನು ಅಸ್ತಿತ್ವಕ್ಕೆ ತಂದರು. ಕನ್ನಡ ಭಾಷೆಯನ್ನಾಡುವ ಜನರು ಕಾಲದ ಒತ್ತಡಕ್ಕೆ ಮಣಿದು ಉರ್ದು ಮಾಧ್ಯಮದಲ್ಲಿಯೇ ಶಿಕ್ಷಣವನ್ನು ಆರಂಭಿಸಿದರೂ ಶೈಕ್ಷಣಿಕ ಅವಶ್ಯಕತೆಗಾಗಿ

ಉರ್ದು ಭಾಷೆಯನ್ನು ಕಲಿಯಬೇಕಾಗಿತ್ತು (ನುಗಡೋಣಿ ೨೦೦೩:೬೮). ಇದರಿಂದ ವಿದ್ಯಾರ್ಥಿಗಳು ಬಹಳಷ್ಟು ಸಂಕಷ್ಟಕ್ಕೆ ಒಳಗಾಗಿದ್ದರು. ವಿದ್ಯಾರ್ಥಿಗಳ ಸಂಖ್ಯೆಯು ಕೂಡ ಇಳಿಮುಖವಾಗತೊಡಗಿತು. ಇದಕ್ಕೆ ನಿಜಾಂ ಅವರ ಭಾಷಾ ನೀತಿ ಹಾಗೂ ಶಿಕ್ಷಣ ನೀತಿಗಳೇ ಕಾರಣವಾಗಿದ್ದವು. ಉರ್ದು ಶಿಕ್ಷಣದ ಉದ್ದೇಶವೆನೆಂದರೆ ಸರ್ಕಾರಿ ಸೇವೆಗೆ ನೇಮಕಗೊಳ್ಳಲು ಉರ್ದು ಭಾಷಿಕರನ್ನು ತಯಾರಿಸುವುದಾಗಿತ್ತು. ಈ ರೀತಿಯ ಉರ್ದುಭಾಷೆಯ ಹೇರಿಕೆ ಬಹುಸಂಖ್ಯಾತ ಜನರ ಶೈಕ್ಷಣಿಕ ಹಕ್ಕು ಅವಕಾಶಗಳನ್ನು ಮೊಟಕುಗೊಳಿಸಿತು (ಪಾಟೀಲ್ ೧೯೯೯:೧೨೫). ಆ ಕಾಲದ ಪರಿಸ್ಥಿತಿಯನ್ನು "ಹಿಂದೂ ರಾಷ್ಟ್ರೀಯವಾದಿ" ಬರಹಗಾರರು ವಿಶ್ಲೇಷಿಸಲು ಯತ್ನಿಸಿದರೂ, ಅವರು ಮಾಡಿರುವ ಕೆಲವು ಸಾಮಾನ್ಯೀಕರಣವು ಪ್ರಶ್ನಾರ್ಹವಾಗಿದೆ. ಈ ಮೇಲೆ ತಿಳಿಸಿದಂತೆ ಕನ್ನಡಿಗರಾದ ಈ ಪ್ರಾಂತ್ಯದ ಜನರು ಎಂದು ತೆಗೆದುಕೊಂಡರೆ ಈ ಪ್ರದೇಶದಲ್ಲಿ ನೂರಾರು ವರ್ಷಗಳಿಂದ ವಾಸವಾಗಿದ್ದ ಇತರೆ ಭಾಷಿಕರು ಅಂದರೆ ಗುಲಬರ್ಗಾದಲ್ಲಿ ಉರ್ದು ಭಾಷಿಕರಾಗಲಿ ಅಥವಾ ತೆಲಗು ಭಾಷಿಕರಾಗಲಿ ಇವರು ಹೇಳುವಂತೆ ಪ್ರಾಂತ್ಯದ ಜನರಾಗುವುದಿಲ್ಲ.

ನಿಜಾಂ ಅವರ ಭಾಷಾ ದಬ್ಬಾಳಿಕೆ ಧೋರಣೆಯಿಂದಾಗಿ ಕನ್ನಡ ಭಾಷೆಯ ಬೆಳವಣಿಗೆಯು ಕುಂಠಿತ ಗೊಂಡಿತು. ಆಳುವ ವರ್ಗದ ಭಾಷೆಯಾದ ಉರ್ದುವನ್ನು ಪ್ರಾಥಮಿಕ ಶಾಲೆಯಿಂದ ಸ್ನಾತಕೋತ್ತರ ಪದವಿಯವರೆಗೆ ಕಲಿಯಬೇಕಾಗಿತ್ತು. ರಾಜ ಮನೆತನಗಳ ಆಳ್ವಿಕೆಯಲ್ಲಿ ಕನ್ನಡ ಭಾಷೆ ಉನ್ನತ ಸ್ಥಾನದಲ್ಲಿತ್ತು. ನಿಜಾಂ ಅವರ ಆಳ್ವಿಕೆಯಲ್ಲಿ ಅದರಲ್ಲೂ 'ಹೈದರಾಬಾದ ಕರ್ನಾಟಕ' ಎಂದು ಕರೆಯಲಾಗುವ ಗುಲ್ಬರ್ಗಾ, ಬೀದರ್ ಮತ್ತು ರಾಯಚೂರುಗಳಲ್ಲಿ ಕನ್ನಡ ಭಾಷೆ ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೆ ಒಳಗಾಯಿತು (ಮಹಾಬಲೇಶ್ವರಪ್ಪ ೧೯೯೭:೨೪).

ಬ್ರಿಟಿಷರ ಕಾಲದಲ್ಲಿ ೧೮೭೫ ೭೬ರಲ್ಲಿ ಪ್ರಾರಂಭವಾಗಿದ್ದ ಆಂಗ್ಲ ಭಾರತೀಯ ಭಾಷಾ ಸಂಯುಕ್ತ ಶಾಲೆಗಳನ್ನು ನಿಜಾಂ ಅವರು ೧೯೧೭ರಲ್ಲಿ ಉರ್ದು ಶಿಕ್ಷಣ ಮಾಧ್ಯಮವಾದ ಉಸ್ಮಾನಿಯಾ ವಿಶ್ವವಿದ್ಯಾಲಯವಾಗಿ ಮಾರ್ಪಾಡು ಮಾಡಿದರು. ಇಂಗ್ಲಿಷ್ ಭಾಷೆಯಲ್ಲಿ ಕಲಿಯಲು ಅವಕಾಶವಿದ್ದರೂ ಉನ್ನತ ಪದವಿ ಪರೀಕ್ಷೆಗಳನ್ನು ಉರ್ದು ಭಾಷೆಯಲ್ಲಿ ಬರೆಯುವುದು ಕಡ್ಡಾಯವಾಗಿತ್ತು. ನಿಜಾಂ ಸರ್ಕಾರ ಇಂಗ್ಲಿಷ್ ಭಾಷೆಯಿಂದ ಉರ್ದುವಿಗೆ ಭಾಷಾಂತರಿಸಲು ಒಂದು ಪ್ರತ್ಯೇಕ ವಿಭಾಗವನ್ನು ತೆರೆದಿದ್ದರು. ಇದನ್ನು ಗಮನಿಸಿದಾಗ ಉರ್ದು ಭಾಷೆಯನ್ನು ಅಭಿವೃದ್ಧಿಪಡಿಸಿದ ನಿಜಾಂ ಅವರ ನೀತಿ ಉಳಿದವರಿಗೆ ಮಾದರಿಯಾಗಿದೆ ಎಂದು ಸಿದ್ಧಯ್ಯ ಪುರಾಣಿಕರು ಅಭಿಪ್ರಾಯಪಟ್ಟಿದ್ದಾರೆ. ನಿಜಾಂ ಅವರ ಆಳ್ವಿಕೆಯಲ್ಲಿ ಉರ್ದು ಕಲಿಯದಿದ್ದರೆ ನೌಕರಿ ಏಕೆ ಮೋಕ್ಷವೂ ಇಲ್ಲವೆಂಬ ಪರಿಸ್ಥಿತಿಯಿರುವುದು ನುಗಡೋಣಿಯವರ ಗ್ರಂಥದಿಂದ ತಿಳಿದುಬರುತ್ತದೆ (ನುಗಡೋಣಿ ೨೦೦೩:೭೪).

ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿಗಳನ್ನು ಉರ್ದು ಮಾಧ್ಯಮದಲ್ಲಿ ಕಲಿಯಲು ವ್ಯವಸ್ಥೆ ಮಾಡಿದರು. "ದೇಶಿಭಾಷೆಯಲ್ಲಿ ಶಿಕ್ಷಣ ಕೊಡಬೇಕಾದುದು ನಮ್ಮ ನೀತಿ" ಎಂದು

ನಿಜಾಂ ಅವರು ದೃಢ ನಿಲುವನ್ನು ತಾಳಿದರು. 'ದೇಶಿಭಾಷೆ' ಎಂದರೆ 'ಉರ್ದುಭಾಷೆ' ಎಂದು ನಿಜಾಂ ಸರ್ಕಾರ ಘೋಷಿಸಿತ್ತು (ನುಗಡೋಣಿ ೨೦೦೩:೫೧).

ಹೈದರಾಬಾದ ಪ್ರಾಂತ್ಯದ ಕೆಲವು ಪ್ರದೇಶಗಳು ಮರಾಠಿಮಯವಾಗಿದ್ದವು. ಆದಿಲ್ ಶಾಹಿ ಮತ್ತು ನಿಜಾಂ ಅವರ ಆಳ್ವಿಕೆಯ ಕಾಲದಲ್ಲಿ ಫಾರಸಿ(ಉರ್ದು), ಪೇಶ್ವೆಗಳ ಕಾಲದಲ್ಲಿ ಮರಾಠಿ ಭಾಷೆಗಳು ಆಡಳಿತಾತ್ಮಕವಾಗಿ ಪ್ರಮುಖ ಸ್ಥಾನ ಪಡೆದವು. ಉಳಿದ ಭಾಷೆಗಳಿಗಿರುವಂತೆ ಪ್ರತ್ಯೇಕ ಆಡಳಿತ ವಿಭಾಗ, ವ್ಯವಸ್ಥೆ ಕನ್ನಡ ಭಾಷೆಗೆ ಇರಲಿಲ್ಲವಾದ್ದರಿಂದ ಕನ್ನಡ ಭಾಷೆ ನಿರ್ಲಕ್ಷ್ಯಕ್ಕೆ ಒಳಗಾಯಿತು. ಈ ನೀತಿಯನ್ನು ವಿರೋಧಿಸಲು ಹಾಗೂ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಲು ರಾಷ್ಟ್ರೀಯ ನಾಯಕರು ಶ್ರಮಿಸಿದರು. ಅಲ್ಲದೆ ದೇಶೀಯ ಭಾಷೆಯ ಶಿಕ್ಷಣದ ಅಗತ್ಯವನ್ನು ಅರಿತುಕೊಂಡು ನಿಜಾಂ ಅವರ ಭಾಷಾ ದಬ್ಬಾಳಿಕೆ ನೀತಿಯ ವಿರುದ್ಧ ಜನಸಾಮಾನ್ಯರು ಮತ್ತು ರಾಷ್ಟ್ರೀಯನಾಯಕರು ಸಿಡಿದೆದ್ದರು. ಹೈದರಾಬಾದ ಸಂಸ್ಥಾನದಲ್ಲಿ 'ಹಿಂದುಗಳು' ಮಾತನಾಡುವ ಮರಾಠಿ, ಕನ್ನಡ ಮತ್ತು ತೆಲುಗು ಭಾಷೆಗಳು ಕೇವಲ ಮೌಖಿಕ ಭಾಷೆಗಳಾಗಿ ಪರಿವರ್ತನೆಗೊಂಡಿದ್ದವು ಎಂಬ ಮಹಾಬಲೇಶ್ವರಪ್ಪ ಅಭಿಪ್ರಾಯಪಟ್ಟಿದ್ದಾರೆ (ಮಹಾಬಲೇಶ್ವರಪ್ಪ ೧೯೯೪:೬).

ಈ ಪ್ರಾಂತ್ಯದಲ್ಲಿ ಉರ್ದು ಭಾಷೆಯು ಶಾಲೆಗಳು ಆರಂಭವಾದರೂ ಶಿಕ್ಷಣದಲ್ಲಿ ಕನ್ನಡ ಒಂದು ಭಾಷಾ ವಿಷಯವಾಗಿ ಕಲಿಯಲು ಅವಕಾಶವಿತ್ತು. ಮಠಗಳಲ್ಲಿ ಮತ್ತು ಗಾವಂಠಿ ಶಾಲೆಗಳಲ್ಲಿ ಕನ್ನಡ ಬೋದನೆಯನ್ನು ಮಾಡುತ್ತಿದ್ದರು. ಹೈದರಾಬಾದ ಕರ್ನಾಟಕದ ಪ್ರದೇಶಗಳಲ್ಲಿ ಮರಾಠಿ ಮತ್ತು ಉರ್ದು ಭಾಷೆ ಬಿಟ್ಟರೆ ಬೇರೆ ಭಾಷೆಗೆ ಸ್ಥಾನವಿರಲಿಲ್ಲ. ಕನ್ನಡ ಭಾಷೆ ಆಡು ಮಾತಾಗಿ ಉಳಿದಿದ್ದರು ಕೂಡ ಅನ್ಯ ಭಾಷೆಗಳ ಒತ್ತಡಕ್ಕೆ ಒಳಗಾಗಿತ್ತು. ಸುರಪುರಕ್ಕೆ ಸಂಬಂಧಿಸಿದಂತೆ ವಿವರಗಳನ್ನು ಸಂದರ್ಶನಗಳ ಮೂಲಕ ಸಂಗ್ರಹಿಸಲಾಗಿದೆ.

ಸುರಪುರ ಸಂಸ್ಥಾನವು ಸ್ವರಾಜ್ಯ, ಸ್ವಧರ್ಮ, ಕನ್ನಡ ಭಾಷೆಯ ರಕ್ಷಣೆಗಾಗಿ ಅಸ್ತಿತ್ವಕ್ಕೆ ಬಂದ ಸಂಸ್ಥಾನವಾಗಿತ್ತು. ಕನ್ನಡ ಭಾಷೆಯು ಸುರಪುರ ಅರಸರ ಕಾಲದಲ್ಲಿ ಉನ್ನತ ಸ್ಥಾನದಲ್ಲಿತ್ತು. ಈ ಸಂಸ್ಥಾನವು ಮುಸ್ಲಿಂರ ಆಳ್ವಿಕೆಗೂ ಒಳಗಾಗಿದ್ದರು ಕೂಡ ಕನ್ನಡ ಭಾಷೆಯನ್ನು ನಿರ್ಲಕ್ಷಿಸಿರಲಿಲ್ಲ. ಆದರೆ ಸುರಪುರ ಸಂಸ್ಥಾನದ ಪತನದ ನಂತರ ಅಸ್ತಿತ್ವಕ್ಕೆ ಬಂದ ಹೈದರಾಬಾದಿನ ನಿಜಾಂ ಅವರ ಆಳ್ವಿಕೆಯಲ್ಲಿ ಕನ್ನಡ ಭಾಷೆಯನ್ನು ನಿರ್ಲಕ್ಷಿಸಿದ್ದರು. ಯಾವಾಗ ತಮ್ಮ ಭಾಷೆಯನ್ನು ನಿರ್ಲಕ್ಷಿಸಿದ್ದರೋ ಅಂದಿನಿಂದ ಕನ್ನಡಿಗರು ಕೂಡಾ ನಿಜಾಂ ನಿರಂಕುಶ ವರ್ತನೆಯನ್ನು ಖಂಡಿಸತೊಡಗಿದರು. ಇವೆಲ್ಲವುಗಳ ಪರಿಣಾಮವಾಗಿ ಈ ಪ್ರದೇಶದಲ್ಲಿ ಭಾಷಾ ದಬ್ಬಾಳಿಕೆ ಕಂಡುಬಂದಿತು. ರಾಜ್ಯ ಮಟ್ಟದಲ್ಲಿ ಉರ್ದುವನ್ನು ಆಡಳಿತ ಭಾಷೆಯನ್ನಾಗಿಟ್ಟುಕೊಂಡು ಪ್ರಾಂತೀಯ ಮಟ್ಟಗಳಲ್ಲಿ ಆಯಾ ಪ್ರಾಂತ್ಯದ ಭಾಷೆಗಳಾದ ಕನ್ನಡ, ತೆಲುಗು, ಮರಾಠಿ ಭಾಷೆಗಳನ್ನು ಆಡಳಿತ ಭಾಷೆಗಳನ್ನಾಗಿ ಮಾಡುವ ಔದಾರ್ಯವನ್ನು ಹೈದರಾಬಾದಿನ ನಿಜಾಂ

ಅವರು ತೋರಿಸಲಿಲ್ಲ. ಒಂದು ವೇಳೆ ಈ ತರಹದ ಪ್ರಾಥಮಿಕ ಶಾಲೆಯಲ್ಲಿ ಕನ್ನಡ ಮಾಧ್ಯಮವನ್ನು ಕಲಿತರೂ ೫ನೇ ತರಗತಿಯಿಂದ ಕಡ್ಡಾಯವಾಗಿ ಉರ್ದು ಮಾಧ್ಯಮದಲ್ಲಿ ಕಲಿಯಬೇಕಾಗಿತ್ತು. ಕನ್ನಡ ಭಾಷೆಯ ಒಂದು ಪಿರೀಡ್ ಇತ್ತು ಎಂಬ ವಿವರ ರಾಮಚಂದ್ರವರ್ಮರವರ ಸಂದರ್ಶನದಲ್ಲಿ ತಿಳಿಸಿದ್ದಾರೆ (ಸಂದರ್ಶನ : ರಾಮಚಂದ್ರ ವರ್ಮ, ೨.೨.೨೦೦೬).

ಸಂದರ್ಶನವೊಂದರಲ್ಲಿ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದ ಮಹಾದೇವಪ್ಪ ಹೂಗಾರ ಅವರ ಮಿತಿಯ ಪ್ರಕಾರ, "ಶಾಲೆಯಲ್ಲಿ ಹಿಂದೂ-ಮುಸ್ಲಿಂ ವಿದ್ಯಾರ್ಥಿಗಳು ಕೂಡಿಯೇ ಕಲಿಯಬೇಕಾಗಿತ್ತು. ಪ್ರತಿಯೊಂದು ಸಣ್ಣ ಸಣ್ಣ ವಿಷಯಕ್ಕೂ ಹಿಂದೂ ವಿದ್ಯಾರ್ಥಿಗಳಿಗೆ ಮುಸ್ಲಿಂ ವಿದ್ಯಾರ್ಥಿಗಳು ಅವಮಾನ ಮಾಡುತ್ತಿದ್ದರು. ಪ್ರತಿ ಶುಕ್ರವಾರಕ್ಕೊಮ್ಮೆ ಶಾಲೆಗೆ ರಜೆ ಕೊಡುತ್ತಿದ್ದರೆಂದು" ಮಹಾದೇವಪ್ಪ ಹೂಗಾರ ತಮ್ಮ ವಿದ್ಯಾರ್ಥಿ ದೆಸೆಯ ಜೀವನವನ್ನು ಕುರಿತು ಹೇಳಿದ್ದಾರೆ. ಸಂಪೂರ್ಣವಾಗಿ ಉರ್ದುಮಯವಾದಂತಹ ಕಾಲದಲ್ಲಿ ಸುರಪುರದಲ್ಲಿ ಜನರು ಕನ್ನಡ ಭಾಷೆಯ ಉಳಿವಿಗಾಗಿ ಪತ್ರಿಕೆಗಳನ್ನು ಪ್ರಕಟಿಸುವುದರ ಮೂಲಕ, ಕನ್ನಡ ಸಾಹಿತ್ಯ ಸಂಘಗಳನ್ನು ಸ್ಥಾಪಿಸುವುದರ ಮೂಲಕ ಕನ್ನಡ ಭಾಷೆಗೆ ಒಂದು ನೆಲೆಯನ್ನು ಒದಗಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ (ಸಂದರ್ಶನ : ಮಹಾದೇವಪ್ಪ ಹೂಗಾರ ೧.೨.೨೦೦೬). ಉರ್ದು ಮಾಧ್ಯಮದಲ್ಲಿ ಶಿಕ್ಷಣ ಪಡೆದು ಉನ್ನತ ಉದ್ಯೋಗಗಳಿಗೆ ಹೋಗಲು ಅವಕಾಶವಿತ್ತು. ಇಲ್ಲಿಯ ಜನರು ಸ್ವಾತಂತ್ರ್ಯ ಮನೋಭಾವನೆವುಳ್ಳವರು. ತಮ್ಮ ಅಸ್ತಿತ್ವಕ್ಕೆ ಸಂಚಕಾರ ಬಂದಿರುವುದರಿಂದ ಅದನ್ನು ಸಹಿಸಿಕೊಳ್ಳಲಾರದೆ ಅದಕ್ಕೆ ಪ್ರತಿಯಾಗಿ ವಿರೋಧ ವ್ಯಕ್ತಪಡಿಸಿರುವುದು ಈ ಅಂಶಗಳಿಂದ ತಿಳಿದುಬರುತ್ತದೆ.



## ೩.೪. ವಂದೇ ಮಾತರಂ ಚಳುವಳಿ

'ವಂದೇ ಮಾತರಂ' ಗೀತೆಯು ಬ್ರಿಟಿಷರ ವಿರುದ್ಧ ಮತ್ತು ನಿಜಾಂ ಸರ್ಕಾರದ ವಿರುದ್ಧ ನಡೆದ ಹೋರಾಟವನ್ನು ರಾಷ್ಟ್ರವ್ಯಾಪ್ತಿಯನ್ನಾಗಿಸಿತು. ಹೀಗೆ ನಮ್ಮ ರಾಷ್ಟ್ರೀಯ ಜೀವನದ ಹೋರಾಟದಲ್ಲಿ ವಂದೇ ಮಾತರಂ ವಹಿಸಿದ ಪಾತ್ರ ಅಮೋಘವಾಗಿದೆ. ವಂದೇ ಮಾತರಂ ಚಳುವಳಿಯಿಂದಾಗಿ ರಾಷ್ಟ್ರೀಯ ಶಿಕ್ಷಣ ಆರಂಭವಾದ್ದರಿಂದ ವಿದ್ಯಾರ್ಥಿಗಳು ಆಂಗ್ಲ ಶಾಲಾ-ಕಾಲೇಜುಗಳನ್ನು ಬಿಟ್ಟು ದೇಶೀಯ ಶಿಕ್ಷಣ ಸಂಸ್ಥೆಗಳಿಗೆ ಧಾವಿಸಿದರು. ಈ ರೀತಿ ಹೈದರಾಬಾದ ನಿಜಾಂ ಸರ್ಕಾರದ ದುರಾಡಳಿತದ ವಿರುದ್ಧ ಜನರು ಬಳಸಿರುವ ಪ್ರಬಲ ಅಸ್ತ್ರಗಳಲ್ಲಿ 'ವಂದೇ ಮಾತರಂ' ಗೀತೆಯು ಒಂದಾಗಿದೆ. ಈ ಘೋಷಣೆ ರಾಷ್ಟ್ರೀಯತೆಯ ಪ್ರತೀಕವಾಗುವುದರ ಜೊತೆಗೆ ನಿಜಾಂ ಸಂಸ್ಥಾನದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಪ್ರೇರಣೆ ನೀಡಿತು (ಲೋಖಂಡೆ ೨೦೦೪:೨೨೪). ಹೀಗೆ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ವಂದೇ ಮಾತರಂ ಚಳುವಳಿ ಪ್ರಮುಖ ಪಾತ್ರ ವಹಿಸಿತು.

ಈ ವಿಷಯಕ್ಕೆ ಸಂಬಂಧಿಸಿದಂತೆ ಸೂರ್ಯನಾಥ ಕಾಮತ್‌ರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'(೧೯೮೦), ಬಿ.ಸಿ.ಮಹಾಬಲೇಶ್ವರಪ್ಪರವರ 'ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು'( ೧೯೯೭), ಎಚ್. ಎಸ್.ಪಾಟೀಲರ 'ವಿಮೋಚನೆ'(೧೯೯೯), ಎಸ್.ಆರ್. ರಾಮಸ್ವಾಮಿಯವರ 'ಸ್ವಾತಂತ್ರ್ಯಾಂದೋಲನದ ಮೈಲುಗಲ್ಲುಗಳು'(೧೯೯೯), ಗೋಪಾಲರಾವ್ ಹೇಜೀಬರ 'ಹೈದರಾಬಾದ ಮುಕ್ತಿ ಸಂಘರ್ಷ'(೨೦೦೧), ಬಸವರಾಜ ಪೊಲೀಸ ಪಾಟೀಲರ 'ಬಿಡುಗಡೆ'(೨೦೦೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ'(೨೦೦೩), ಚಂದ್ರಶೇಖರ ಲೋಖಂಡೆಯವರ 'ಹೈದರಾಬಾದ ಮುಕ್ತಿ ಸಂಗ್ರಾಮ ಕಾ ಇತಿಹಾಸ'(೨೦೦೪), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ'(೨೦೦೬) ಈ ಗ್ರಂಥಗಳು ಮುಖ್ಯವಾಗಿವೆ. ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಪಿಎಚ್.ಡಿ.ಮಹಾಪ್ರಬಂಧಗಳಾದ ಉಷಾ ದೇಸಾಯಿಯವರ 'Freedom movement in Raichur District'(1994) ಅಲ್ಲದೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಎಂ.ಫಿಲ್.ನಿಬಂಧಗಳಾದ ಸುಭಾಸ ಚಂದ್ರ ದೊಡ್ಮನಿ 'ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪), ಪ್ರಬಂಧಗಳನ್ನು ಅವಲೋಕಿಸಲಾಗಿದೆ. ಇದರ ಜೊತೆಗೆ ಇದರಲ್ಲಿ ಭಾಗಿಯಾಗಿದ್ದ ಹೋರಾಟಗಾರರನ್ನು ನೇರವಾಗಿ ಭೇಟಿಯಾಗಿ ಅವರಿಂದ ಇದರ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

** **

ನಿಜಾಂ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ವಿದ್ಯಾರ್ಥಿಗಳು ಪ್ರಾರ್ಥನಾ ಗೀತೆಯಾಗಿ 'ನಿಜಾಂ ಅವರು ಚಿರಕಾಲ ಬಾಳಲಿ, ಆತನ ಸಾಮ್ರಾಜ್ಯ ಸೂರ್ಯ ಚಂದ್ರರಿರುವವರೆಗೂ ಮುಂದುವರಿಯಲಿ' ಎಂಬ ಹಾಡನ್ನು ಹಿಂದೂ ಮತ್ತು ಮುಸ್ಲಿಂ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಲ್ಲಿ ಹಾಡಬೇಕಾಗಿತ್ತು (ಹೇಜೀಬ್ ೨೦೦೧:೧೬). ಶಾಲಾ, ಕಾಲೇಜು, ನೌಕರಿಗಳಲ್ಲಿ ಹಿಂದೂ-ಮುಸ್ಲಿಂರ ನಡುವೆ ಭೇದಭಾವವಿತ್ತು. ಇದು ಕೂಡ ವಿದ್ಯಾರ್ಥಿಗಳ ಅಸಂತೋಷಕ್ಕೆ ಕಾರಣವಾಯಿತು. ಮೀರ್ ಉಸ್ಮಾನ್ ಅಲೀಖಾನ ಅವರು ಸಿಂಹಾಸನಕ್ಕೆ ಬಂದ ೨೫ ವರ್ಷಗಳ ಪ್ರಯುಕ್ತ ರಜತ ಮಹೋತ್ಸವವನ್ನು ಆಚರಿಸಿದಾಗ 'ವಂದೇ ಮಾತರಂ' ಚಳುವಳಿಯು ಇಡೀ ನಿಜಾಂ ಅವರ ಸಂಸ್ಥಾನದ ಸರ್ಕಾರವನ್ನು ದಂಗುಬಡಿಸಿತು (ಪೊಲೀಸ್ ಪಾಟೀಲ್ ೨೦೦೨:೫೨). ವಿದ್ಯಾರ್ಥಿಗಳಲ್ಲಿ ರಾಷ್ಟ್ರ ಪ್ರಜ್ಞೆ ಜಾಗೃತವಾಗಿ ಅವರು ನಿಜಾಂ ಅವರ ನಿರಂಕುಶ ಆಡಳಿತದ ವಿರುದ್ಧ ಹೋರಾಡುವ ಮನೋಭಾವ ಬೆಳೆಯತೊಡಗಿತು.[೭]

೧೯೨೦ರಲ್ಲಿ ವಂದೇ ಮಾತರಂ ಚಳುವಳಿ ಮೊದಲಿಗೆ ಬಂಗಾಳ ಪ್ರಾಂತ್ಯಕ್ಕೆ ಸೀಮಿತವಾಗಿತ್ತು. ಅದು ಭಾಷಾ ಗಡಿಗಳನ್ನು ದಾಟಿ, ಭಾರತದ ಉದ್ದಗಲಕ್ಕೂ ಹರಡಿ ಜನರಲ್ಲಿ ಸುಪ್ತವಾಗಿದ್ದ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸಿತು. 'ವಂದೇ ಮಾತರಂ' ಚಳುವಳಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಸಂಘಟನೆ, ಸ್ಥಿರತೆಗೆ ಕಾರಣವಾದಂತೆ ಹೈದರಾಬಾದ ಕರ್ನಾಟಕದ ವಿಮೋಚನೆಗೂ ಈ ಗೀತೆ ಪ್ರೇರಿತವಾಯಿತು. ವಿದ್ಯಾರ್ಥಿಗಳ ಈ ಚಳುವಳಿಯಲ್ಲಿ ಆರ್ಯ ಸಮಾಜದ ಕಾರ್ಯಕರ್ತರು ಸೇರಿಕೊಂಡಿದ್ದರಿಂದ 'ವಂದೇ ಮಾತರಂ' ಚಳುವಳಿ ಇನ್ನಷ್ಟು ಉಗ್ರರೂಪ ತಾಳಿತು. ಆರ್ಯ ಸಮಾಜದವರು 'ವಂದೇ ಮಾತರಂ' ಎಂಬುದನ್ನು ತಾರಕ ಮಂತ್ರವನ್ನಾಗಿ ಮಾಡಿಕೊಂಡು ಚಳುವಳಿಗೆ ಧುಮುಕಿದರು. ಸತ್ಯಾಗ್ರಹಿಗಳನ್ನು ಸೆರೆಮನೆಗೆ ತಳ್ಳಿ ಅವರನ್ನು ಹಿಂಸಿಸಿದರು. ಬಾಲಚಂದ್ರ ಅವರು ಇಂತಹ ಕೆಲವು ಘಟನೆಗಳನ್ನು ದಾಖಲು ಮಾಡಿದ್ದಾರೆ. ಅಂತಹ ಸತ್ಯಾಗ್ರಹಿಗಳಲ್ಲಿ ರಾಮಚಂದ್ರರಾವರು ಪ್ರಮುಖರಾಗಿದ್ದಾರೆ. ಇವರು ತಮಗೆ ನೀಡುತ್ತಿರುವ ಪ್ರತಿಯೊಂದು ಏಟಿಗೂ 'ವಂದೇ ಮಾತರಂ' ಎಂದು ಕನವರಿಸುತ್ತಿದ್ದರು. ರಾಮಚಂದ್ರ ಎಂಬ ಹೆಸರಿದ್ದ ಆ ಸತ್ಯಾಗ್ರಹಿಗೆ ಮುಂದೆ 'ವಂದೇ ಮಾತರಂ ರಾಮಚಂದ್ರರಾವ್' ಎಂಬ ಹೆಸರು ಶಾಶ್ವತವಾಯಿತು. ಈ ಪ್ರದೇಶಗಳಲ್ಲಿ ಮುಸ್ಲಿಂ ವಿದ್ಯಾರ್ಥಿಗಳು ಆ ಕಾಲದ ಸಂದರ್ಭಗಳಲ್ಲಿ 'ವಂದೇಮಾತರಂ' ಹಾಡುತ್ತಿರಲಿಲ್ಲ ಎಂಬುದು ಗಮನಾರ್ಹವಾಗಿದೆ (ಬಾಲಚಂದ್ರ ೨೦೦೬:೪೦).

ರಾಮಚಂದ್ರರಾವ್ ಅವರ ಮರಣದಿಂದ ಗುಲಬರ್ಗಾದಲ್ಲಿ 'ವಂದೇ ಮಾತರಂ' ಚಳುವಳಿಗೆ ಪುಷ್ಠಿ ಸಿಕ್ಕಿತು. ಗುಲಬರ್ಗಾದ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾದ ಧಾರವಾಡಕರರು 'ಹಿಂದೂ ವಿದ್ಯಾರ್ಥಿಗಳಿಗೆ' ಎಂದು ಎಂ.ಬಿ.ಪಾಟೀಲರು ತಿಳಿಸಿದ್ದಾರೆ. 'ವಂದೇ ಮಾತರಂ' ಗೀತೆಯನ್ನು ಹಾಡಲು ಅವಕಾಶ ಮಾಡಿಕೊಟ್ಟರು (ಪಾಟೀಲ್ ೧೯೯೭:೮೫). ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ[2] ಆರಂಭವಾದ 'ವಂದೇ ಮಾತರಂ' ಚಳುವಳಿಯ ನಾಯಕತ್ವವನ್ನು ಗುಲಬರ್ಗಾದ ಜಗನ್ನಾಥ ಚಂಡ್ರಿಕಿ, ಪದ್ಮನಾಭ ಪುರಾಣಿಕರು ವಹಿಸಿಕೊಂಡಿದ್ದರು. ಹೈದರಾಬಾದ ಸಂಸ್ಥಾನದ ಮುಂದಿನ ಹೋರಾಟಗಳಲ್ಲಿ ಪಾಲ್ಗೊಂಡ ಅನೇಕ ನಾಯಕರುಗಳು 'ವಂದೇ ಮಾತರಂ' ಚಳುವಳಿಯಿಂದ ಸ್ಫೂರ್ತಿ ಪಡೆದರು (ಪಾಟೀಲ್ ೧೯೯೭: ೮೫-೮೬).

ಭಾರತ ಹೈದರಾಬಾದ ಕರ್ನಾಟಕ, ಗುಲಬರ್ಗಾ ಮುಂತಾದ ಪ್ರದೇಶಗಳಲ್ಲಿ ನಡೆದಿರುವ ಅಧ್ಯಯನದಂತೆ ಈ ಭಾಗದಲ್ಲಿ ಮುಖ್ಯವಾಗಿ ಸುರಪುರದಲ್ಲಿ 'ವಂದೇ ಮಾತರಂ' ಚಳುವಳಿಯ ಪ್ರಭಾವವನ್ನು ಲಭ್ಯವಿರುವ ಮಾಹಿತಿಗಳ ಮೂಲಕ ಕಲೆಹಾಕಲಾಗಿದೆ. ಸ್ವಾತಂತ್ರ್ಯ ಹೋರಾಟದ ಸಂಕೇತವಾದ ವಂದೇ ಮಾತರಂ ಚಳುವಳಿಯು ಕೆಲವೇ ದಿನಗಳಲ್ಲಿ ಇಡೀ ಹೈದರಾಬಾದ ಸಂಸ್ಥಾನದಾದ್ಯಂತ ಪಸರಿಸಿತು. ಪ್ರತಿಯೊಬ್ಬರ ಬಾಯಲ್ಲೂ ವಂದೇ ಮಾತರಂ ಗೀತೆ ಜಪವಾಗಿ ಪರಿಣಮಿಸಿತು. ಈ

ಚಳುವಳಿಯ ಕಾಡ್ಗಿಚ್ಚು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿಗೂ ಹರಡಲು ಬಹಳ ಸಮಯ ಬೇಕಾಗಲಿಲ್ಲ. ಗುಲಬರ್ಗಾದ ಕಾಂಗ್ರೆಸ್ ಮುಖಂಡರಾದ ಜಗನ್ನಾಥ ಚಂಡ್ರಿಕೆ ಮತ್ತು ಇತರರು ಸುರಪುರಕ್ಕೆ ಬಂದು ಹೋಗುತ್ತಿದ್ದರು. ಸುರಪುರದಲ್ಲಿ ಅನೇಕ ಸಭೆ ಸಮಾರಂಭಗಳನ್ನು ಏರ್ಪಡಿಸುವುದರ ಮೂಲಕ ಜನರನ್ನು ಜಾಗೃತಗೊಳಿಸುತ್ತಿದ್ದರು. ಇಂತಹ ಸಭೆ ಸಮಾರಂಭಗಳನ್ನು ನಡೆಸುವ ಮೊದಲು 'ವಂದೇ ಮಾತರಂ' ಗೀತೆಯನ್ನು ಹೇಳುತ್ತಿದ್ದರು (ಸಂದರ್ಶನ : ಗೋಪಾಲರಾವ್ ಹೇಜೀಬ್ ೨೩.೦೧.೨೦೦೬).

೧೫ ಆಗಸ್ಟ್ ೧೯೪೭ರಂದು ಭಾರತ ಸ್ವಾತಂತ್ರ್ಯವಾದಾಗ ಹೈದರಾಬಾದ ಸಂಸ್ಥಾನವು ಭಾರತದಲ್ಲಿ ವಿಲೀನವಾಗದೆ ಸ್ವತಂತ್ರವಾಗಿತ್ತು. ಭಾರತ ಸ್ವಾತಂತ್ರ್ಯವಾದ ದಿನದಂದು ಹೈದರಾಬಾದ ಕರ್ನಾಟಕದ ಪ್ರಾಂತ್ಯಗಳಲ್ಲಿ ಧ್ವಜವನ್ನು ಹಾರಿಸಬಾರದೆಂದು ನಿಜಾಂ ಸರ್ಕಾರ ಆದೇಶ ನೀಡಿತು. ಆದರೂ ಚಳುವಳಿಗಾರರು ನಿಜಾಂ ಅವರ ಸರ್ಕಾರದ ಆದೇಶವನ್ನು ಧಿಕ್ಕರಿಸಿ ಪ್ರಮುಖ ಸ್ಥಳಗಳಲ್ಲಿ ಧ್ವಜಾರೋಹಣ ಮಾಡಿದರು. ಸ್ವಾತಂತ್ರ್ಯ ಪಡೆದ ದಿನದಂದು ತಿರುಮಲರಾವ್ ದೇಸಾಯಿಯವರ ಸಲಹೆ ಪಡೆದ ವಿದ್ಯಾರ್ಥಿಗಳು ಧ್ವಜ ಮೆರವಣಿಗೆ ಮಾಡಿದರು. ರಾಮರಾವ ಹೇಜೀಬ್, ಗೋಪಾಲರಾವ್ ಆದೋನಿಕರ, ಪಿ.ಕೃಷ್ಣಮಾಚಾರಿ, ಕಿಶನರಾವ್ ಮಳ್ಳಿ, ಕೃಷ್ಣಮಾಚಾರ್ಯ ಪುಣೇಕರ, ಮಾಧವರಾವ ಭಾಸುತ್ಕರ, ಡಿ.ಗೋವಿಂದಪ್ಪ, ಕಿಶನರಾವ್ ಮಳ್ಳಿ, ಭೀಮಾಚಾರ ಕೆಂಭಾವಿ ಇನ್ನು ಮುಂತಾದವರು ಧ್ವಜಗಳನ್ನು ಹಿಡಿದು ರಾಷ್ಟ್ರಗೀತೆಗಳನ್ನು ಹಾಡುತ್ತಾ ಸುರಪುರದಿಂದ ರಂಗಂಪೇಟೆ, ತಿಮ್ಮಾಪುರಗಳವರೆಗೆ ಮೆರವಣಿಗೆ ಹೊರಟರು. 'ವಂದೇ ಮಾತರಂ' ಗೀತೆಯನ್ನು ಹಾಡುವುದರ ಮೂಲಕ, 'ಭಾರತ ಮಾತಾಕೀ ಜೈ' ಎಂಬ ಘೋಷಣೆಯನ್ನು ಕೂಗುವುದರ ಮೂಲಕ ಪೋಲೀಸರ ಕೋಪಕ್ಕೆ ಬಲಿಯಾದರು. ಈ ಸಂದರ್ಭದಲ್ಲಿ ಸುರಪುರ ತಾಲೂಕಿನ ೧೯೮ ಹಳ್ಳಿಗಳಲ್ಲಿ ಧ್ವಜ ಮೆರವಣಿಗೆ, ಭಿತ್ತಿ ಪತ್ರಗಳನ್ನು ಅಂಟಿಸುವ ಕಾರ್ಯವನ್ನು ಹೋರಾಟಗಾರರು ಮಾಡಿದರು (ಕುಷ್ಟಗಿ ೨೦೦೩:೧೭೫-೧೭೬). ಧ್ವಜ ಮೆರವಣಿಗೆಯಲ್ಲಿ 'ಮಹಾತ್ಮಾಗಾಂಧಿ ಕಿ ಜೈ', 'ಮಜಾಲಿಯೇ ಪೊಲೀಸ ಮರ್ದಾಬಾದ್' ಎಂಬ ಘೋಷಣೆಗಳನ್ನು ಕೂಗುತ್ತಿದ್ದರು. 'ಕದಂ ಕದಂ ಬಡಾಯೇ ಜಾ, ಖುಷಿ ಕಾ ಗೀತ ಗಾಯೇ ಜಾ' ಎಂಬ ಹಾಡು ಹೇಳುತ್ತಿದ್ದರು' ಎಂದು ಕಿಶನರಾವ್ ಮಳ್ಳಿ ಅವರು ಸಂದರ್ಶನದಲ್ಲಿ ತಿಳಿಸಿದ್ದಾರೆ (ಸಂದರ್ಶನ: ಕಿಶನರಾವ್ ಮಳ್ಳಿ, ೨೩.೦೧.೨೦೦೬). ಹೀಗೆ ಆರಂಭವಾದ ವಂದೇ ಮಾತರಂ ಚಳುವಳಿಯು ಸುರಪುರ ಹೋರಾಟಗಾರರ ಮನಸ್ಸಿನಲ್ಲಿ ಆಳವಾಗಿ ಬೇರೂರಿರುವುದರ ಜೊತೆಗೆ ಜನರಲ್ಲಿ ದೇಶದ ಬಗ್ಗೆ ಹೊಂದಿರುವ ಅಭಿಮಾನ ಇನ್ನು ಹೆಚ್ಚಿಸಿತು. ವಂದೇ ಮಾತರಂ ಗೀತೆಯು ಪ್ರತಿಯೊಬ್ಬರಲ್ಲೂ ಕೇಳಿ ಬರುತ್ತಿತ್ತು. ಈ ಚಳುವಳಿಯ ಪ್ರಭಾವದಿಂದಲೇ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟ ಸಾಧ್ಯವಾಯಿತು. ವಂದೇ ಮಾತರಂ ಗೀತೆಯನ್ನು ಧ್ವಜ ಮೆರವಣಿಗೆಯಲ್ಲಿ ಹಾಡಿದ್ದರಿಂದ ಸುಮಾರು ೩೪ ಜನರು ಬಂಧನಕ್ಕೊಳಗಾದರು. ಈ

ಚಳುವಳಿಯ ಮುಖ್ಯ ನಾಯಕರಾದ ಮಾಧವರಾವ್ ಬಾಸುತ್ಕರ, ತಿರುಮಲರಾವ್ ದೇಸಾಯಿ, ಶಿವನಾರಾಯಣವರ್ಮ ಅವರನ್ನು ಬಂಧಿಸಿ ಗುಲಬರ್ಗಾದ ಸೆರೆಮನೆಗೆ ಕಳಿಸಿದರು. ಹೀಗೆ ಆರಂಭವಾದ 'ವಂದೇ ಮಾತರಂ' ಚಳುವಳಿ ಕೆಲವೇ ದಿನಗಳಲ್ಲಿ ಹೈದರಾಬಾದ ಸಂಸ್ಥಾನದಾದ್ಯಂತ ಪಸರಿಸಿತು. ಚಳುವಳಿ ಪ್ರತಿಯೊಂದು ನಗರ ಗ್ರಾಮಗಳಲ್ಲಿ ಕಂಡುಬಂದು ಜನತೆಯನ್ನು ಜಾಗೃತಗೊಳಿಸಿ ನಿಜಾಂ ಸರ್ಕಾರದ ನಿರಂಕುಶ ವರ್ತನೆಯ ವಿರುದ್ಧ ಪ್ರತಿಭಟಿಸುವಂತೆ ಮಾಡಿತು.

## ೩.೫. ಹೈದರಾಬಾದ ರಾಜ್ಯ ಕಾಂಗ್ರೆಸ್ಸಿನ ಪಾತ್ರ

ಹೈದರಾಬಾದ ವಿಮೋಚನಾ ಹೋರಾಟದಲ್ಲಿ ರಾಜ್ಯ ಕಾಂಗ್ರೆಸ್ಸಿನ ಪಾತ್ರವು ಮುಖ್ಯವಾಗಿದೆ. ಇದು ಅಖಿಲ ಭಾರತೀಯ ಕಾಂಗ್ರೆಸ್ಸಿಗಿಂತ ಭಿನ್ನವಾದ ಕಾಂಗ್ರೆಸ್ ಆಗಿದೆ. ರಾಜ್ಯ ಕಾಂಗ್ರೇಸ್ ಕೂಡ ಆರ್ಯಸಮಾಜ, ಹಿಂದೂ ಮಹಾಸಭೆಗಳಂತೆ ವಿಮೋಚನಾ ಹೋರಾಟದಲ್ಲಿ ಗಮನಾರ್ಹ ಸಾಧನೆ ಮಾಡಿದೆ. ಹರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನವು ಹೈದರಾಬಾದ ಸಂಸ್ಥಾನಕ್ಕೆ ವರವಾಗಿ ಪರಿಣಮಿಸಿತು. ಈ ಅಧಿವೇಶನದಲ್ಲಿ ಬ್ರಿಟಿಷ್ ಆಡಳಿತದಲ್ಲಿ ಅಸ್ತಿತ್ವದಲ್ಲಿದ್ದ ಕಾಂಗ್ರೆಸ್ಸಿನಂತಹ ಸಂಸ್ಥೆಯನ್ನು ಪ್ರತಿಯೊಂದು ದೇಶಿ ಸಂಸ್ಥಾನಗಳಲ್ಲಿ ಜನಜಾಗೃತಿಯನ್ನುಂಟು ಮಾಡಲು ಇಂತಹ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಅಭಿಪ್ರಾಯ ಪಡಲಾಯಿತು. ಹೈದರಾಬಾದ ಸಂಸ್ಥಾನದ ಜನರು ಹರಿಪುರ ಕಾಂಗ್ರೆಸ್ ಅಧಿವೇಶನದಿಂದ ಸ್ಫೂರ್ತಿ ಪಡೆದು 'ಹೈದರಾಬಾದ ಸಂಸ್ಥಾನ ಕಾಂಗ್ರೆಸ್' ಸಂಸ್ಥೆಯನ್ನು ಸ್ಥಾಪನೆ ಮಾಡಲು ತಾತ್ಪೂರ್ತಿಕವಾಗಿ ಸಮಿತಿಯನ್ನು ಅಸ್ತಿತ್ವಕ್ಕೆ ತಂದರು. ಈ ಸಂಸ್ಥೆಯಲ್ಲಿ ಎಲ್ಲ ವರ್ಗದ ಜನರು ಇದರ ಸದಸ್ಯರಾದರು (ಪೊಲೀಸ್ ಪಾಟೀಲ್ ೨೦೦೨:೫೧).

'ರಾಜ್ಯ ಕಾಂಗ್ರೆಸ್' ಈ ವಿಷಯಕ್ಕೆ ಸಂಬಂಧಿಸಿದಂತೆ ಎನ್.ಪಿ.ಶಂಕರನಾರಾಯಣರಾವರ 'ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು'(೧೯೯೬), ಬಿ.ಸಿ.ಮಹಾಬಲೇಶ್ವರಪ್ಪ 'ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿ'(೧೯೯೭), ಗೋಪಾಲರಾವಹೇಜೀಬ್‌ರ 'ಹೈದರಾಬಾದ ಮುಕ್ತಿ ಸಂಘರ್ಷ'(೨೦೦೧), ಬಸವರಾಜ ಪೋಲೀಸ್ ಪಾಟೀಲ್‌ರ 'ಬಿಡುಗಡೆ'(೨೦೦೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ'(೨೦೦೩) ಎನ್ನುವ ಗ್ರಂಥಗಳು ಮುಖ್ಯವಾಗಿ ಗಮನ ಸೆಳೆದಿವೆ. ಮೌಖಿಕ ಆಕರವಾಗಿ ಹೋರಾಟಗಾರರ ಸಂದರ್ಶನಗಳನ್ನು ಈ ವಿಷಯಕ್ಕೆ ಪೂರಕವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

*** ***

ಆರ್ಯ ಸಮಾಜದ ಸಂಘಟನೆ ಹೈದರಾಬಾದ ಸಂಸ್ಥಾನದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಿಂಸಾತ್ಮಕ ಮಾರ್ಗ ಅನುಸರಿಸಿದರೆ, ರಾಜ್ಯ ಕಾಂಗ್ರೆಸ್ ಪಕ್ಷ ಅಹಿಂಸಾತ್ಮಕ ಮಾರ್ಗ ಅನುಸರಿಸಿತು. ೧೯೩೮ರಲ್ಲಿ ಕಾಂಗ್ರೆಸ್ಸನ್ನು ಆರಂಭಿಸುವ ಪ್ರಯತ್ನ ನಡೆಸಲಾಯಿತು. ಹೈದರಾಬಾದ ಕಾಂಗ್ರೆಸ್

ಸಂಸ್ಥಾನಕ್ಕೆ ಮಾತ್ರ ಸೀಮಿತಗೊಂಡಿದ್ದ ಸಂಸ್ಥೆಯಾಗಿದ್ದರೂ, ಇದನ್ನು ಆರಂಭಿಸುವ ಮುಂಚೆ ಆ ಸಂಸ್ಥೆಯನ್ನು 'ಹಿಂದೂ ಮತೀಯ ಸಂಸ್ಥೆ' ಎಂದು ಹೆಸರಿಸಿ ನಿಜಾಂ ಅವರ ಸರ್ಕಾರ ನಿಷೇಧಿಸಿತು. (ಶಂಕರನಾರಾಯಣರಾವ್ ೧೯೯೧:೩೫). ಇದನ್ನು ಜಾತಿಯ ಪಕ್ಷವೆಂದು ಪರಿಗಣಿಸಿ ಅದರ ಧರ್ಮನಿರಪೇಕ್ಷಿತ ತತ್ವಗಳು ಮುಸಲ್ಮಾನರನ್ನು ಮೋಸಗೊಳಿಸುವ ತಂತ್ರಗಳಾಗಿವೆಯೆಂದು ನಿಜಾಂ ಸರ್ಕಾರ ನಂಬಿತ್ತು (ಹೇಜೀಬ್ ೨೦೦೧:೫೧). ಈ ತರಹದ ಬರಹಗಳನ್ನು ಹಿಂದೂ ರಾಷ್ಟ್ರೀಯವಾದಿಗಳೆಂದು ಎನಿಸಿಕೊಂಡಿದ್ದ ಲೇಖಕರು ಯಾವುದನ್ನು ಕೂಲಂಕುಷವಾಗಿ ಪರಿಶೀಲಿಸದೆ ಬರೆದಿರುವುದು ಕಂಡುಬರುತ್ತದೆ.

"ರಾಜ್ಯ ಕಾಂಗ್ರೆಸ್" ಅಸ್ತಿತ್ವಕ್ಕೆ ಬರುವ ಮೊದಲು ಆಂಧ್ರ ಮಹಾಸಭಾ, ಮಹಾರಾಷ್ಟ್ರ ಪರಿಷತ್ ಮತ್ತು ಕರ್ನಾಟಕ ಪರಿಷತ್ ಈ ಮೂರು ಪರಿಷತ್‌ಗಳು ಬೇರೆ ಬೇರೆಯಾಗಿದ್ದವು. ಆದರೆ ಈ ಮೂರು ಪರಿಷತ್‌ಗಳ ಉದ್ದೇಶ ಒಂದೇಯಾಗಿದ್ದವು. ಈ ಮೂರು ಸಂಘಟನೆಗಳು ೧೯೩೮ರಲ್ಲಿ 'ಹೈದರಾಬಾದ ರಾಜ್ಯ ಕಾಂಗ್ರೆಸ್' ಎಂಬ ಹೆಸರಿನ ಅಡಿಯಲ್ಲಿ ಪರಸ್ಪರ ಒಂದಾಗಲು ನಿಶ್ಚಯಿಸಿದವು. ಮೂಲತಃ ಈ ಸಂಘಟನೆಗಳು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನೊಂದಿಗೆ ಬೇರೆಯುವ ಉದ್ದೇಶ ಹೊಂದಿದ್ದವು. ಈ ಸಂಘಟನೆಗಳು ಒಟ್ಟುಗೂಡಿ ಹೈದರಾಬಾದ ಸಂಸ್ಥಾನದ ವಿರುದ್ಧ ಜನಜಾಗೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡವು (ಬಾಲಚಂದ್ರ ೨೦೦೬, ೩೫-೩೬). ನಿಜಾಂ ಅವರಿಗೆ ಕಾಂಗ್ರೆಸ್ ಅಂದರೆ ಆಗುತ್ತಿರಲಿಲ್ಲ. ಏಕೆಂದರೆ 'ರಾಷ್ಟ್ರೀಯ ಕಾಂಗ್ರೆಸ್ಸು' ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿರುವುದನ್ನು ಕಂಡು ನಿಜಾಂ ಅವರು ಕಾಂಗ್ರೆಸ್ ಚಟುವಟಿಕೆಗಳು ತಮ್ಮ ರಾಜ್ಯದಲ್ಲಿ ನಡೆಯದಂತೆ ನೋಡಿಕೊಂಡರು. ಅಲ್ಲದೆ ಕಾಂಗ್ರೆಸ್ ನಾಯಕರುಗಳಾದ ತಿಲಕ್, ಗಾಂಧೀ, ನೆಹರು ಮುಂತಾದವರ ಹೆಸರನ್ನು ಹೈದರಾಬಾದ ರಾಜ್ಯದಲ್ಲಿ ಬಳಸಲು ನಿಷೇಧಿಸಿದ್ದರು.

ಎಲ್ಲ ಅಡೆತಡೆಗಳ ಮಧ್ಯೆ ೨೪ ಅಕ್ಟೋಬರ್ ೧೯೩೮ ರಂದು 'ಹೈದರಾಬಾದ ರಾಜ್ಯ ಕಾಂಗ್ರೆಸ್' ಅಧಿಕೃತವಾಗಿ ಘೋಷಿಸಲ್ಪಟ್ಟು ಅಸ್ತಿತ್ವಕ್ಕೆ ಬಂದಿತು. ಶ್ರೀ ಗೋವಿಂದರಾವ್ ನಾನಲ್‌ರು ರಾಜ್ಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಶ್ರೀರಾಮಕೃಷ್ಣಧೂತ (ಹೈದರಾಬಾದ) ಕಾರ್ಯದರ್ಶಿಗಳಾಗಿ, ಶ್ರೀ ರವಿನಾರಾಯಣರೆಡ್ಡಿ (ತೆಲಂಗಾಣ), ಶ್ರೀನಿವಾಸರಾವ್ ಬೋರಿಕರ್ (ಮರಾಠವಾಡ), ಶ್ರೀ ಜನಾರ್ಧನರಾವ್ ದೇಸಾಯಿ(ಕರ್ನಾಟಕ) ಇವರೆಲ್ಲರೂ ಸದಸ್ಯರಾಗಿ ಆಯ್ಕೆಯಾದರು. ಹೈದರಾಬಾದದ ಸುಲ್ತಾನ ಬಜಾರ್ ಪ್ರದೇಶದಲ್ಲಿ ೧೯೩೮ ಅಕ್ಟೋಬರ್ ೨೪ ರಲ್ಲಿ ಪ್ರಥಮ ಕಾಂಗ್ರೆಸ್ ಸತ್ಯಾಗ್ರಹ ಜರುಗಿತು. ಈ ಸತ್ಯಾಗ್ರಹದಲ್ಲಿ ಮೇಲಿನ ೫ ನಾಯಕರೊಂದಿಗೆ ಇತರ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು (ಪೊಲೀಸ್ ಪಾಟೀಲ್ ೨೦೦೭:೫೨).

ಕೋಮುವಾದಿ ಸಂಸ್ಥೆಯೆಂದು ನಿಜಾಂ ಸರ್ಕಾರ 'ರಾಜ್ಯ ಕಾಂಗ್ರೆಸ್ ಸಂಸ್ಥೆ'ಗೆ ಕರೆದಿದ್ದರು. ಮುಸ್ಲಿಂರನ್ನು ಸೇರಿಸಿಕೊಳ್ಳದೆ ಅದು ಜಾತ್ಯಾತೀತ ಸಂಘಟನೆ ಹೇಗಾಗುತ್ತದೆ ಎಂಬುದು ಪದ್ಮಜಾ

ನಾಯ್ನು ಅವರ ಪ್ರಶ್ನೆಯಾಗಿತ್ತು(ಬಾಲಚಂದ್ರ ೨೦೦೬:೩೭). ಇವರು ಕೇಳಿದ ರೀತಿ ಅತ್ಯಂತ ನಿಜಾಂಶದಿಂದ ಕೂಡಿದೆ. ಯಾವುದೇ ಸಂಸ್ಥೆಯನ್ನು ಕೋಮುವಾದಿ ಎಂದು ಕರೆಯುವ ಮೊದಲು ಅದು ಯಾವ ಯಾವ ವರ್ಗದ ಜನರನ್ನು ಒಳಗೊಂಡಿದೆ ಅದರ ಕಾರ್ಯಗಳೇನು? ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಆದರೆ "ರಾಜ್ಯ ಕಾಂಗ್ರೆಸ್" ಸಂಸ್ಥೆಯು ರಾಜಕೀಯದಲ್ಲಿ ಸುಧಾರಣೆ ತರುವ ಉದ್ದೇಶವನ್ನು ಹೊಂದಿತ್ತೆ ವಿನಹಃ ಧರ್ಮದ ಕುರಿತು ಯಾವುದೇ ಮನೋಭಾವನೆ ಹೊಂದಿರಲಿಲ್ಲ ಎಂಬುದು ಕಾಂಗ್ರೇಸ್‌ನ ಕಾರ್ಯಚಟುವಟಿಕೆಗಳಿಂದ ತಿಳಿದುಬರುತ್ತದೆ. ದೇಶದ ಪರಿಸ್ಥಿತಿಗನುಗುಣವಾಗಿ ಬಂಧಿತರಾದ ನಾಯಕರನ್ನು, ಉಳಿದ ಸತ್ಯಾಗ್ರಹಿಗಳನ್ನು ೧೦ ಏಪ್ರಿಲ್ ೧೯೩೯ರಂದು ಬಿಡುಗಡೆ ಮಾಡಿದರು. ಆದರೆ ಕಾಂಗ್ರೇಸ್ಸಿನ ಮೇಲಿನ ನಿಷೇಧವನ್ನು ರದ್ದುಪಡಿಸಲಿಲ್ಲ.

ರಾಜ್ಯ ಕಾಂಗ್ರೇಸ್‌ನ ಮೇಲೆ ನಿಷೇಧವಿದ್ದಾಗ ರಮಾನಂದ ತೀರ್ಥರು. ಜನಾರ್ಧನರಾವ್ ದೇಸಾಯಿ, ಗುಡಗುಂಟಿ ರಾಮಾಚಾರ್ ಜೋಶಿ ಮತ್ತು ಜಿ.ಕೆ.ಪ್ರಾಣೇಶಾಚಾರ್ಯ ಮುಂತಾದವರು 'ನಿಜಾಂ ಕರ್ನಾಟಕ ಪರಿಷತ'ನ ಕಾರ್ಯಚಟುವಟಿಕೆಗಳಿಗೆ ಮಾರ್ಗದರ್ಶನ ಮಾಡುವುದರ ಮೂಲಕ ಸಭೆಗಳನ್ನು ನಡೆಸುತ್ತಿದ್ದರು. ಅಂದರೆ ರಾಜ್ಯ ಕಾಂಗ್ರೆಸ್‌ನ ಚಟುವಟಿಕೆಗಳು ನಿಜಾಂ ಪರಿಷತ್ ಮೂಲಕ ನಡೆಯುತ್ತಿದ್ದವು. ನಿಜಾಂ ಕರ್ನಾಟಕ ಪರಿಷತ್ ಒಟ್ಟು ಐದು ಅಧಿವೇಶನಗಳನ್ನು ನಡೆಸಿರುವುದು ಕಂಡುಬರುತ್ತದೆ.

೩ ಜುಲೈ ೧೯೪೭ರಂದು ಕಾಂಗ್ರೆಸ್ ಅಧಿವೇಶನದ ಕಾರ್ಯಕರ್ತರ ಮತ್ತು ಜನಾಂದೋಲನದ ಪರಿಣಾಮವಾಗಿ ನಿಜಾಂ ಅವರು ರಾಜ್ಯ ಕಾಂಗ್ರೇಸ್‌ನ ಮೇಲಿದ್ದ ನಿಷೇಧವನ್ನು ರದ್ದುಪಡಿಸಿದರು. ೧೯೪೬ರಲ್ಲಿ ಮಿರ್ಜಾ ಇಸ್ಮಾಯಿಲ್‌ರು ಹೈದರಾಬಾದ ಸಂಸ್ಥಾನದ ಪ್ರಧಾನ ಮಂತ್ರಿಯಾಗಿ ಆಯ್ಕೆಯಾದರು. ಮಿರ್ಜಾ ಇಸ್ಮಾಯಿಲ್‌ರು ರಾಜ್ಯ ಕಾಂಗ್ರೆಸ್ ಮೇಲೆ ವಿಧಿಸಿದ್ದ ನಿಷೇಧವನ್ನು ೩ ಜುಲೈ ೧೯೪೬ ರಂದು ರದ್ದುಪಡಿಸಿದರು. ಇದು ಹೈದರಾಬಾದ ವಿಮೋಚನಾ ಹೋರಾಟಕ್ಕೆ ದೊರೆತ ಪ್ರಥಮ ವಿಜಯವಾಗಿತ್ತು(ಮಹಾಬಲೇಶ್ವರಪ್ಪ ೧೯೯೭:೭೦). ಕಾಂಗ್ರೆಸ್ ಸಂಸ್ಥೆಯು ಹೈದರಾಬಾದ ಸಂಸ್ಥಾನದ ವಿಮೋಚನೆಯ ಕಾರ್ಯವನ್ನು ಭರದಿಂದ ಪ್ರಾರಂಭಿಸಿದವು. ರಜಾಕಾರರ ಹಾಗೂ ನಿಜಾಂ ಅವರ ಸಂಕೋಲೆಯಿಂದ ಹೈದರಾಬಾದ ಸಂಸ್ಥಾನವನ್ನು ಮುಕ್ತಗೊಳಿಸುವ ಬಗ್ಗೆ ಜನರಿಗೆ ಹೋರಾಟದ ಬಗ್ಗೆ ತರಬೇತಿ ನೀಡುವ ಕಾರ್ಯ ಚಟುವಟಿಕೆ ಆರಂಭವಾದವು.

ರಜಾಕಾರರ ಹಾಗೂ ನಿಜಾಂ ಅವರ ಸಂಕೋಲೆಯಿಂದ ಹೈದರಾಬಾದ ಸಂಸ್ಥಾನವನ್ನು ಮುಕ್ತಗೊಳಿಸುವ ಬಗ್ಗೆ ಇದು ಜನರಲ್ಲಿ ಜಾಗೃತಿ ಮೂಡಿಸಿತು. ರಮಾನುದ ತೀರ್ಥರ ಅಧ್ಯಕ್ಷತೆಯಲ್ಲಿ ೧೬ ಆಗಸ್ಟ್ ೧೯೪೬ ರಿಂದ ೧೮ ಆಗಸ್ಟ್ ೧೯೪೬ರವರೆಗೆ ಹೈದರಾಬಾದನ ನಾನಲ್ ನಗರದಲ್ಲಿ ಪ್ರಥಮ 'ಅಖಿಲ ಹೈದರಾಬಾದ ರಾಜ್ಯ ಕಾಂಗ್ರೆಸ್ ಅಧಿವೇಶನ'ವನ್ನು ಕಾರ್ಯಕರ್ತರು ಸಂಘಟಿಸಿದರು. ಸ್ವಾತಂತ್ರ್ಯ,

ದೇಶಭಕ್ತಿಯನ್ನು ಜನರಲ್ಲಿ ಜಾಗೃತಿಗೊಳಿಸಲು ಹೈದರಾಬಾದ ಕರ್ನಾಟಕದ ವಿವಿಧ ಭಾಗಗಳಲ್ಲಿ ನಿಜಾಂ ಕರ್ನಾಟಕ ಪರಿಷತ್ತಿನ ಶಾಖೆಗಳನ್ನು 'ಕರ್ನಾಟಕ ಸಾಹಿತ್ಯ ಸಂಘಗಳ' ಹೆಸರಿನಿಂದ ಮಾಡಿರುವುದು ಮಹಾಬಲೇಶ್ವರಪ್ಪನವರ ಗ್ರಂಥದಿಂದ ತಿಳಿದುಬರುತ್ತದೆ (ಮಹಾಬಲೇಶ್ವರಪ್ಪ ೧೯೯೭: ೭೧). ರಾಜ್ಯ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾಗಿದ್ದ ಜಿ.ಕೆ.ಪ್ರಾಣೇಶಾಚಾರ್ಯರು ಹೈದರಾಬಾದ ಕರ್ನಾಟಕದ ಪ್ರದೇಶಗಳಾದ್ಯಂತ ಸಂಚರಿಸಿ ಚಳುವಳಿಯನ್ನು ತೀವ್ರಗೊಳಿಸಲು ಜಿಲ್ಲಾಮಟ್ಟದ ಹಾಗೂ ತಾಲೂಕಾ ಮಟ್ಟದ ಸಮಿತಿಯನ್ನು ರಚಿಸಿದರು. ಹೈದರಾಬಾದ ಕರ್ನಾಟಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಜನಾರ್ಧನರಾವ್ ದೇಸಾಯಿ, ಗುಲಬರ್ಗಾ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಕಕ್ಕೇರಿ ಹನುಮಂತರಾವರು ನೇಮಕವಾದರು. ಕಾಂಗ್ರೆಸ್ ಕಾರ್ಯಕರ್ತರು ನಡೆಸಿದ ಪ್ರಚಾರ ಕಾರ್ಯದ ಪರಿಣಾಮವಾಗಿ ಗುಲಬರ್ಗಾದ ಹತ್ತು ಜನರು ತಮ್ಮ ಉದ್ಯೋಗಕ್ಕೆ ರಾಜೀನಾಮೆ ನೀಡಿ ಅವರು ಈ ಸಂಘಟನೆಯಲ್ಲಿ ಭಾಗವಹಿಸಿದರು. ಕಾಂಗ್ರೆಸ್ ಸಮಿತಿಯಲ್ಲಿ ಗುಲಬರ್ಗಾ ಜಿಲ್ಲೆಯ ಜನರು ಪ್ರಮುಖ ಪಾತ್ರವಹಿಸಿದ್ದಾರೆ ಮತ್ತು ಈ ಸಂಘಟನೆಯಲ್ಲಿ ಈ ಭಾಗದ ಜನರೇ ಹೆಚ್ಚಾಗಿ ಭಾಗವಹಿಸಿರುವುದು ಕಂಡುಬರುತ್ತದೆ. ಸರ್ದಾರ ಶರಣಗೌಡ, ದತ್ತಾತ್ರೇಯ ಅವರಾದಿ, ನಾರಾಯಣ ಕಾನಿಹಾಳರವರು 'ನಾಗರಿಕ' ಎಂಬ ವಾರಪತ್ರಿಕೆಯನ್ನು ಹೊರಡಿಸುತ್ತಿದ್ದರು. ಹೈದರಾಬಾದ ಸಂಸ್ಥಾನದ ವಿಮೋಚನೆಗಾಗಿ ನಡೆಯುತ್ತಿರುವ ಚಳುವಳಿ ಹಾಗೂ ಕಾಂಗ್ರೆಸ್‌ನ ತತ್ವಗಳನ್ನು ಜನಸಮೂಹದ ಗಮನಕ್ಕೆ ತರುವುದಕ್ಕಾಗಿ ಈ ಪತ್ರಿಕೆಯನ್ನು ಹೊರತಂದರು (ಮಹಾಬಲೇಶ್ವರಪ್ಪ ೧೯೯೭:೭೨).

ಆರ್ಯ ಸಮಾಜ ಮತ್ತು ಹಿಂದೂ ಮಹಾಸಭಾದ ಕಾರ್ಯಕರ್ತರು ಕಾಂಗ್ರೆಸ್‌ನ್ನು ಸೇರಿದರು. ಭಾರತ ಸ್ವಾತಂತ್ರ್ಯವಾಗುವ ಸಮಯದಲ್ಲಿ ಹೈದರಾಬಾದ ನಿಜಾಂ ಅವರು ಸ್ವತಂತ್ರವಾಗಿರುತ್ತೇವೆ ಎಂದು ಘೋಷಣೆ ಮಾಡಿದರು. ಈ ಸ್ವಾತಂತ್ರ್ಯದ ಘೋಷಣೆ ರಾಜ್ಯ ಕಾಂಗ್ರೆಸ್‌ಗೆ ಸವಾಲಾಯಿತು. ಹೈದರಾಬಾದ ಸಂಸ್ಥಾನವನ್ನು ಭಾರತದೊಂದಿಗೆ ವಿಲೀನ ಮಾಡುವುದಕ್ಕಾಗಿ ಮತ್ತು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವುದಕ್ಕಾಗಿ ೭ ಅಗಸ್ಟ್ ೧೯೪೭ ವಿಲೀನ ಸತ್ಯಾಗ್ರಹ ರಮಾನಂದ ತೀರ್ಥರ ನೇತೃತ್ವದಲ್ಲಿ ನಡೆಯಿತು. ಇದಕ್ಕಾಗಿ ಎಲ್ಲ ಕಡೆಗಳಲ್ಲಿ ವ್ಯಾಪಕ ಪ್ರತಿಭಟನೆಗಳು ನಡೆದವು. ಭಾರತ ಸ್ವಾತಂತ್ರ್ಯವಾದಾಗ ನಿಜಾಂ ಅವರ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ಯಾರು ರಾಷ್ಟ್ರಧ್ವಜವನ್ನು ಹಾರಿಸಬಾರದೆಂದು ನಿಜಾಂ ಅವರು ನಿರ್ಬಂಧ ವಿಧಿಸಿದರು.

*** ***

ಸುರಪುರದಲ್ಲಿ ರಮಾನಂದ ತೀರ್ಥರ ಹೋರಾಟದ ಪ್ರಬಲ ಛಾಯೆಯನ್ನು ಕಾಣಬಹುದು. ರಮಾನಂದ ತೀರ್ಥರು ಸತ್ಯಾಗ್ರಹ ಆರಂಭಿಸಲು ಕಾಂಗ್ರೆಸ್ ಕಾರ್ಯಕರ್ತರನ್ನು ಹೈದರಾಬಾದಿಗೆ ಬರಬೇಕೆಂದು ಕರೆನೀಡಿದರು. ಆಗ ಸುರಪುರ ತಾಲೂಕಿನ ಕಾಂಗ್ರೆಸ್ ಸಮಿತಿಯ ಪರವಾಗಿ ಸುರಪುರದಿಂದ

ನಾಗಣ್ಣ ವಕೀಲ್, ವೆಂಕೋಬರಾವ್ ಪದಕಿ, ಕಕ್ಕೇರಿ ಸುಬ್ಬರಾಯ, ಅಪ್ಪಾರಾವ್ ವಕೀಲ ಮೊದಲಾದವರು ಹೋದರು. ಈ ಸತ್ಯಾಗ್ರಹ ನಡೆಸಿದ ಮುಂದಾಳುಗಳಲ್ಲಿ ಪ್ರಮುಖರು ಸ್ವಾಮಿ ರಮಾನಂದ ತೀರ್ಥ, ಜನಾರ್ಧನರಾವ್ ದೇಸಾಯಿ ಮತ್ತು ಡಾ. ಮೇಲ್ಕೋಟೆಯವರಾಗಿದ್ದರು. ರಮಾನಂದ ತೀರ್ಥರು ಹೈದರಾಬಾದ ರಾಜ್ಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. 'ಅಖಿಲ ಭಾರತ ಕಾಂಗ್ರೆಸ್ ಸಮಿತಿ'ಯಿಂದ ಬರಬೇಕಾದ ಆದೇಶವು ತಕ್ಷಣ ಇವರ ಕೈಸೇರುತ್ತಿತ್ತು. ರಾಷ್ಟ್ರೀಯ ಕಾಂಗ್ರೆಸ್ ಕೈಗೊಂಡ ಅನೇಕ ಮಹತ್ವದ ನಿರ್ಣಯಗಳನ್ನು ಎಲ್ಲ ರಾಜ್ಯಶಾಖೆಗಳಿಗೆ ಮತ್ತು ಅಲ್ಲಿಂದ ಜಿಲ್ಲಾ, ತಾಲೂಕು ಸಮಿತಿಗಳಿಗೆ ಕಳಿಸಿಕೊಡುತ್ತಿದ್ದರು.

ಸುರಪುರ ತಾಲೂಕು ಕಾಂಗ್ರೆಸ್ ಸಮಿತಿಗೆ ನಾಗಣ್ಣವಕೀಲರು ಅಧ್ಯಕ್ಷರಾಗಿದ್ದರು. ತುಳಜಾರಾಮ ಸಿಂಗ್ ವಕೀಲರು ಉಪಾಧ್ಯಕ್ಷರಾಗಿದ್ದರು. ರಾಜಾ ವೆಂಕಟಪ್ಪನಾಯಕ, ಡಾ.ಜಿ.ಸುಬ್ಬಯ್ಯ, ಬಸಣ್ಣ ದರ್ಜಿ, ವೆಂಕೋಬರಾವ್ ಪದಕಿ ಮೊದಲಾದವರು ಕಾಂಗ್ರೆಸ್‌ನ ಸ್ಥಳೀಯ ಮುಖಂಡರಾಗಿದ್ದರು. ಗುಲಬರ್ಗಾದಿಂದ ಕಾಂಗ್ರೆಸ್ ಕಾರ್ಯಕರ್ತರು ಸುರಪುರಕ್ಕೆ ಬಂದು ಸಭೆ-ಸಮಾರಂಭಗಳನ್ನು ನಡೆಸಿ ಉಪನ್ಯಾಸ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದರು ಎಂಬ ಅಂಶಗಳು ತಿಮ್ಮಯ್ಯ ದರಬಾರಿ ಅವರ ಸಂದರ್ಶನದಲ್ಲಿ ವ್ಯಕ್ತವಾಗಿದೆ (ತಿಮ್ಮಯ್ಯ ದರಬಾರಿ: ೫.೦೨.೨೦೦೬). ಕಾಂಗ್ರೆಸ್ ಸಂಘಟಕರಾದ ವೆಂಕೋಬರಾವ್ ಪದಕಿಯವರು ಭೂಗತರಾಗಿ ನಿಜಾಂ ಅವರ ವಿರುದ್ಧ ಹೋರಾಟಕ್ಕಿಳಿದರು. ಆಗ ಗುಲಬರ್ಗಾದ ಕಾಂಗ್ರೆಸ್ ಕಾರ್ಯಕರ್ತರಾದ ವಿ.ಪಿ.ದೇವುಳಗಾಂವಕರರು ಸುರಪುರಕ್ಕೆ ಬಂದು ತಿರುಮಲರಾವ್ ದೇಸಾಯಿಯವರೊಡನೆ ಕೂಡಿ ಹೋರಾಟದ ಕಾರ್ಯತಂತ್ರಗಳನ್ನು ರೂಪಿಸುತ್ತಿದ್ದರು. ಭಾರತ ಸ್ವಾತಂತ್ರ್ಯ ಪಡೆದ ದಿನದಂದು ೧೫ ಅಗಸ್ಟ್ ೧೯೪೭ ರಂದು ಸುರಪುರದಲ್ಲಿ ಧ್ವಜವನ್ನು ಹಾರಿಸಿ ವಿದ್ಯಾರ್ಥಿಗಳು ಮತ್ತು ಕಾಂಗ್ರೆಸ್ ಕಾರ್ಯಕರ್ತರು ತಿರುಮಲರಾವ್ ದೇಸಾಯಿಯವರ ನಾಯಕತ್ವದಲ್ಲಿ ಧ್ವಜ ಮೆರವಣಿಗೆ ಕೈಗೊಂಡರು. ಈ ಧ್ವಜ ಮೆರವಣಿಗೆಯ ಸಂದರ್ಭದಲ್ಲಿ ಇದರಲ್ಲಿ ಭಾಗಿಯಾಗಿದ್ದವರೆಲ್ಲರು ಪೋಲೀಸರಿಂದ ಬಂಧನಕ್ಕೊಳಗಾದರು. ನಂತರ ಗುಲಬರ್ಗಾದ ಕೇಂದ್ರ ಕಾರಾಗೃಹಕ್ಕೆ ಇವರನ್ನು ವರ್ಗಾಯಿಸಲಾಯಿತು. ಕೆಲದಿನಗಳ ನಂತರ ಬಿಡುಗಡೆ ಹೊಂದಿದರೆಂದು ರಾಮಚಂದ್ರ ವರ್ಮಾರವರು ತಮ್ಮ ಸಂದರ್ಶನದಲ್ಲಿ ತಿಳಿಸಿದ್ದಾರೆ (ರಾಮಚಂದ್ರವರ್ಮ; ೨.೨.೨೦೦೬).

ರಾಜ್ಯ ಕಾಂಗ್ರೆಸ್ಸಿನ ಪಾತ್ರವು ಹೈದರಾಬಾದ ಕರ್ನಾಟಕದ ಈ ಭಾಗಗಳಲ್ಲಿ ಹೊಂದಿದ್ದ ಪ್ರಭಾವವನ್ನು ಸಂದರ್ಶನದುದ್ದಕ್ಕೂ ಕಾಣಬಹುದು. ವಿಮೋಚನಾ ಹೋರಾಟಕ್ಕೆ ಇದೊಂದು ಮುಖ್ಯವಾದ ಸ್ಫೂರ್ತಿಯಾಗಿತ್ತು ಮತ್ತು ಸಂಘಟನೆ ಸ್ಥಳೀಯ ಜನರ ಆಶೋತ್ತರಗಳನ್ನು ಬಿಂಬಿಸುತ್ತಿತ್ತು ಎನ್ನುವುದು ಗಮನಾರ್ಹವಾಗಿದೆ.

## ೩.೬. ರಜಾಕಾರರ ದಬ್ಬಾಳಿಕೆ

ಹೈದರಾಬಾದ ವಿಮೋಚನೆ ಹೋರಾಟದಲ್ಲಿ ರಜಾಕಾರರು ನಡೆಸಿದ ದಬ್ಬಾಳಿಕೆ ಎದ್ದು ಕಾಣುತ್ತದೆ. ಹೈದರಾಬಾದಿನ ನಿಜಾಂ ಅವರು ತಮ್ಮ ಸಂಸ್ಥಾನವನ್ನು 'ಮುಸ್ಲಿಂ ರಾಷ್ಟ್ರವನ್ನಾಗಿ' ಮಾಡಬೇಕೆಂಬ ಆಸೆ ಹೊಂದಿದ್ದರು ಎಂಬುದು ಜನಜನಿತ ಅಭಿಪ್ರಾಯವಾಗಿದೆ. ೧೫ ಅಗಸ್ಟ್ ೧೯೪೭ ರಂದು ಭಾರತವು ಬ್ರಿಟೀಷ್‌ರಿಂದ ಮುಕ್ತವಾಯಿತು. ಹೈದರಾಬಾದ ಸಂಸ್ಥಾನವು ಭಾರತದೊಂದಿಗೆ ವಿಲೀನವಾಗಲಿಲ್ಲ. ಈ ಕಾರಣದಿಂದ ಆರ್ಯ ಸಮಾಜ, ರಾಜ್ಯ ಕಾಂಗ್ರೆಸ್ ಮುಂತಾದ ಸಂಘಸಂಸ್ಥೆಗಳ ನಾಯಕರು 'ಹೈದರಾಬಾದ ವಿಮೋಚನೆಗಾಗಿ' ೧೫ ಆಗಸ್ಟ್ ೧೯೪೭ರಲ್ಲಿ ಸತ್ಯಾಗ್ರಹಕ್ಕೆ ಕರೆ ನೀಡಿದ್ದರು. ಈ ರೀತಿ ಆರಂಭವಾದ ಸತ್ಯಾಗ್ರಹವನ್ನು ನಿಜಾಂ ಅವರು ಖಾಸಗೀ ಸೈನ್ಯವನ್ನು ಈ ಭಾಗದಲ್ಲಿ ತಂದಿಟ್ಟರು. ಇವರಿಗೆ 'ರಜಾಕಾರ'ರು ಎಂದು ಹೆಸರು. 'ರಜಾಕಾರ' ಎಂದರೆ 'ಸ್ವಯಂ ಸೇವಕರು' ಎಂದರ್ಥ. ಮಿಲಿಟರಿ ಹೊರತಾದ ಖಾಸಗೀ ಸೇನೆಯನ್ನು ನಿಜಾಂ ಅವರು ಹುಟ್ಟು ಹಾಕಿದರು. 'ರಜಾಕಾರರ' ಪಡೆಯ ನಾಯಕತ್ವವನ್ನು ಕಾಸಿಂ ರಜ್ವಿ ಅವರಿಗೆ ನೀಡಲಾಯಿತು.

ಸೂರ್ಯನಾಥ ಕಾಮತ್‌ರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'(೧೯೮೦), ರಾಮಣ್ಣ ಹವಳೆಯವರ 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ'(೧೯೯೬), ಎನ್.ಪಿ. ಶಂಕರನಾರಾಯಣರಾವರ 'ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು'(೧೯೯೬), ಬಿ.ಸಿ.ಮಹಾಬಲೇಶ್ವರಪ್ಪನವರ "ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು' (೧೯೯೭), ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭), ಡಿ.ಆರ್.ಮುಜುಂದಾರರ 'ಭಾರತದ ಸ್ವಾತಂತ್ರ್ಯ ಸಂಗ್ರಾಮ'(೧೯೯೮), ಎಚ್.ಎಸ್.ಪಾಟೀಲರ 'ವಿಮೋಚನೆ'(೧೯೯೯), ಅಮರೇಶ ನುಗಡೋಣಿಯವರ 'ರಾಯಚೂರ ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟ'(೨೦೦೦), ಆರ್.ಎಲ್. ಅನಂತರಾಮಯ್ಯನವರ 'ಸ್ವಾತಂತ್ರ್ಯದ ಹೋರಾಟ'(೨೦೦೧), ಗೋಪಾಲರಾವರ ಹೇಜೀಬ್ 'ಹೈದರಾಬಾದ ಮುಕ್ತಿ ಸಂಘರ್ಷ'(೨೦೦೧), ಬಸವರಾಜ ಪೋಲೀಸ ಪಾಟೀಲರ 'ಬಿಡುಗಡೆ'(೨೦೦೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ' (೨೦೦೩), ಚಂದ್ರಶೇಖರ ಲೋಖಂಡೆಯವರ 'ಹೈದರಾಬಾದ ಮುಕ್ತಿ ಸಂಗ್ರಾಮ ಕಿ ಇತಿಹಾಸ'(೨೦೦೪), ಟಿ.ಎಂ.ಭಾಸ್ಕರರ 'ಕಲಬುರ್ಗಿ ಜಿಲ್ಲಾ ದರ್ಶನ'(೨೦೦೫), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ'(೨೦೦೬) ಮುಂತಾದ ಗ್ರಂಥಗಳಲ್ಲಿ ರಜಾಕಾರರ ಬಗ್ಗೆ ವಿವರಗಳಿವೆ. ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧಗಳಾದ ಪ್ರಭಾತ ಪದ್ಮನೈನಾರವರ 'Freedom Movement in Hyderabad Karnataka Area'(1992), ಉಷಾ ದೇಸಾಯಿಯವರ 'Freedom Movement in Raichur District'(1994), ವೆಂಕಟರಾವ್ ಪಲಾತಿಯವರ 'Role of Freedom Fighters in Bidar

District'(2002) ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ನಿಬಂಧಗಳಾದ ಸುಭಾಷ್‌ಚಂದ್ರ ದೊಡ್ಮನಿಯವರ 'ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪) ವಿಮೋಚನಾ ಹೋರಾಟದ ಹೋರಾಟಗಾರರ ಸಂದರ್ಶನಗಳ ಮೂಲಕ ರಜಾಕಾರರ ಬಗ್ಗೆ ಮಾಹಿತಿಯನ್ನು ಪಡೆಯಲಾಗಿದೆ.

ಕೇವಲ ಪ್ರಕಟಿತ ಗ್ರಂಥಗಳಲ್ಲದೆ ಅಪ್ರಕಟಿತ ಗ್ರಂಥಗಳಾದ ಸುಭಾಸ್ ಚಂದ್ರ ದೊಡ್ಮನಿಯವರ 'ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨) ಮೌಖಿಕ ಆಕರಗಳಾಗಿ ಹೋರಾಟಗಾರರ ಸಂದರ್ಶನಗಳು, ರಜಾಕಾರ ನಡೆಸಿದ ದಬ್ಬಾಳಿಕೆಯನ್ನು ಕಂಡಂತಹ ವ್ಯಕ್ತಿಗಳ ಜೊತೆ ಚರ್ಚೆ ಮಾಡುವುದರ ಮೂಲಕ ಈ ವಿಷಯವನ್ನು ಕಂಡುಕೊಳ್ಳಲಾಗಿದೆ.

*** ***

ಹಿಂದೂ ರಾಷ್ಟ್ರೀಯವಾದಿ ಬರಹಗಾರರು ಈ ವಿಷಯದ ಬಗ್ಗೆ ಬಹಳಷ್ಟು ಮಾಹಿತಿಯನ್ನು ನೀಡಿದ್ದಾರೆ. ಬಾಲಚಂದ್ರ ಅವರ ಪ್ರಕಾರ ಹೈದರಾಬಾದಿನ ನಿಜಾಂ ಮೀರ ಉಸ್ಮಾನ ಅಲಿಖಾನನು ೧೯೧೧ರಲ್ಲಿ ಹೈದರಾಬಾದ ಸಂಸ್ಥಾನದ ಅಧಿಕಾರ ವಹಿಸಿಕೊಂಡರು. ಇವರು ಹೈದರಾಬಾದ ಸಂಸ್ಥಾನವನ್ನು ಮುಸ್ಲಿಂ ರಾಷ್ಟ್ರವನ್ನಾಗಿಸಬೇಕೆಂಬ ಮಹತ್ವಾಕಾಂಕ್ಷೆ ಹೊಂದಿದ್ದನು. ಆದರೆ ಹೈದರಾಬಾದ ಸಂಸ್ಥಾನದಲ್ಲಿ ಮುಸ್ಲಿಂರ ಸಂಖ್ಯೆ ಕಡಿಮೆಯಿತ್ತು. ಮುಸ್ಲಿಂರ ಸಂಖ್ಯೆಯನ್ನು ಹೆಚ್ಚಿಸುವ ಸಲುವಾಗಿ ಮತಾಂತರವನ್ನು ಜಾರಿಗೊಳಿಸಿದ್ದರು. ಬ್ರಿಟಿಷರೊಂದಿಗೆ ಆದ ಒಪ್ಪಂದದ ಪ್ರಕಾರ ನಿಜಾಂ ಅವರು ಹೆಚ್ಚಿನ ಸೈನ್ಯವನ್ನು ಸಂಸ್ಥಾನದಲ್ಲಿ ಇಟ್ಟುಕೊಳ್ಳುವಂತಿರಲಿಲ್ಲ. ಸೈನ್ಯದ ಸಂಖ್ಯೆ ಕಾಲಾಳು, ಕುದುರೆ ಸವಾರರು ಪೋಲೀಸರು ಸೇರಿದಂತೆ ೨೦,೦೦೦ಕ್ಕಿಂತ ಹೆಚ್ಚಿರಬಾರದಿತ್ತು (ಬಾಲಚಂದ್ರ ೨೦೦೬:೧೫). ಈ ಸೇನಾಪಡೆಗಳಲ್ಲಿ ಹಿಂದೂಗಳ ಸಂಖ್ಯೆಯನ್ನು ಕಡಿಮೆಗೊಳಿಸಿ ಮುಸ್ಲಿಂರ ಸಂಖ್ಯೆಯನ್ನು ಹೆಚ್ಚಿಸಿದ್ದರು. ನಿಜಾಂ ಅವರು ಕಾನೂನುಬದ್ಧವಾಗಿ ಘೋಷಿಸಿಕೊಂಡ ಪೋಲೀಸ ದಳವನ್ನು ಹೊರತು ಪಡಿಸಿ ೪೨೦೦೦ ಸೈನ್ಯವನ್ನು ಮತ್ತು ೭ ಲಕ್ಷ ರಜಾಕಾರರನ್ನು ಅರೆಸೈನಿಕ ದಳವೆಂದು ನೇಮಿಸಿದ್ದರು (ಬಾಲಚಂದ್ರ ೨೦೦೬:೧೫).

ರಜಾಕಾರರ ಸಂಘಟನೆಯು ಹೈದರಾಬಾದಿನ ರಾಜ್ಯಾಡಳಿತಕ್ಕೆ ಬರುವ ಮುಂಚೆ ಒಂದೆರಡು ಸಂಘಟನೆಗಳು ನಿಜಾಂ ಅವರ ಆಸೆಯನ್ನು ಪೂರೈಸಲು ಹುಟ್ಟಿಕೊಂಡಿದ್ದವು. ಅವುಗಳೆಂದರೆ 'ಖಾಕಸಾರ ಪಾರ್ಟಿ'/'ನಿಜಾಮ ಸೇನೆ' ಮತ್ತು 'ದೀನದಾರ ಅಂಜುಮನ ಚನ್ನಬಸವೇಶ್ವರ ಕಿಬಲಿ' ಈ ಎರಡು ಸಂಘಟನೆಗಳು ಹಿಂದೂಗಳನ್ನು ಮುಸ್ಲಿಂ ಧರ್ಮಕ್ಕೆ ಮತಾಂತರ ಮಾಡುವ ಉದ್ದೇಶಗಳನ್ನು ಹೊಂದಿದ್ದವು. ಇವೆರಡು ಅಂಶಗಳಿಂದ ತಿಳಿದುಬರುವುದೆನೆಂದರೆ ಮೊದಲಿನಿಂದಲೂ ಹೈದರಾಬಾದ ಸಂಸ್ಥಾನದಲ್ಲಿ

ಮತಾಂಧತೆಯನ್ನು ಪೋಷಿಸಿಕೊಂಡು ಬರುತ್ತಿರುವುದು ಕಂಡುಬಂದಿದೆ. ಆದರೆ ಇದಕ್ಕೊಂದು ಸ್ಪಷ್ಟವಾದ ಸ್ವರೂಪ ಕೊಟ್ಟದ್ದು ೧೯೨೭ರಲ್ಲಿ ಸ್ಥಾಪಿತವಾದ 'ಇತ್ತೇಹಾದ-ಉಲ್-ಮುಸಲ್ಮೀನ್' ಎಂಬ ಸಂಘಟನೆ. ಮಹಮ್ಮದ್ ನವಾಬಖಾನ ಎಂಬುವರು ಈ ಸಂಘಟನೆಯನ್ನು ಹುಟ್ಟು ಹಾಕಿದರು (ಪಾಟೀಲ ೧೯೯೯:೧೧೫).

ಪೊಲೀಸ್ ಪಾಟೀಲ್‌ರು ಹೇಳುವಂತೆ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಷರನ್ನು ಪ್ರತಿಭಟಿಸಲು ೧೯೩೨ರ ನಂತರ ಖಾನ ಅಬ್ದುಲ್ ಗಫಾರಖಾನ ಎಂಬುವವರು ಮುಸ್ಲಿಂರ ಸಂಘಟನೆ ಮಾಡಿದರು. ಈ ಮುಸ್ಲಿಂ ಸಂಘಟನೆಗೆ "ರಜಾಕಾರ" ಎಂದು ಕರೆದರು. ಅಬ್ದುಲ್ ಗಫಾರಖಾನ ಸಂಘಟಿಸಿದ 'ರಜಾಕಾರ' ಸಂಘಟನೆ ಬ್ರಿಟಿಷರ ವಿರುದ್ಧವಾದರೆ, ಕಾಸೀಂ ರಜ್ವಿ ಹುಟ್ಟುಹಾಕಿದ ಸಂಘಟನೆ ಹಿಂದೂಗಳ ವಿರುದ್ಧವಾಗಿರುವುದು ವಿಪರ್ಯಾಸದ ಸಂಗತಿಯಾಗಿದೆ ಎಂದಿದ್ದಾರೆ (ಪೊಲೀಸ್ ಪಾಟೀಲ್ ೨೦೦೨:೨೨೬).

ಮಜುಂದಾರರ ಪ್ರಕಾರ ಹೈದರಾಬಾದಿನ ನಿಜಾಂ ಅವರು ಪಾಕಿಸ್ತಾನದ ಪಿತಾಮಹನೆಂದು ಪ್ರಸಿದ್ಧನಾಗಿದ್ದ ಮಹಮ್ಮದ ಅಲಿ ಜಿನ್ನಾರವರ ದ್ವಿರಾಷ್ಟ್ರ ಸಿದ್ಧಾಂತದಿಂದ ಆಕರ್ಷಿತರಾಗಿದ್ದರು. ಜಿನ್ನಾರವರು "ಮುಸ್ಲಿಂರು ಒಂದು ರಾಷ್ಟ್ರ ಅವರಿಗೆ ಅವರದೇ ಆದ ಮಾತೃಭೂಮಿ ಹಾಗೂ ಅವರದೇಯಾದ ರಾಜ್ಯಭಾರ ಇರಬೇಕು" ಎಂದು ಜಿನ್ನಾ ದ್ವಿರಾಷ್ಟ್ರ ಸಿದ್ಧಾಂತಕ್ಕೆ ಪ್ರೇರಣೆ ನೀಡಿದರು. ಜಿನ್ನಾರವರು ಕೆಲವೊಂದು ಅಂಶಗಳನ್ನು ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯಲ್ಲಿ ಈ ಬೇಡಿಕೆಯನ್ನು ಮುಂದಿಟ್ಟರು. ಅವುಗಳಲ್ಲಿ

೧. ವಂದೇ ಮಾತರಂ ಹಾಡನ್ನು ಹಾಡದಂತೆ ಅದರ ಮೇಲೆ ನಿಷೇಧ ಹೇರಬೇಕು.

೨. ಉರ್ದು ಭಾಷೆಯ ಬಳಕೆಯನ್ನು ಕಡಿತ ಮಾಡದಿರುವ ಬಗ್ಗೆ ಕಾನೂನಿನ ರಕ್ಷಣೆ

೩. ಮುಸ್ಲಿಂ ಧರ್ಮದ ಆಚರಣೆಗೆ ಯಾವುದೇ ರೀತಿಯ ಅಡ್ಡಿ ಆತಂಕಗಳಿರಬಾರದು.

ಎಂಬ ಅಂಶಗಳನ್ನು ಸೇರಿಸಿದ್ದರು (ಮಜುಂದಾರ ೧೯೭೮:೭೫). ಈ ಅಂಶಗಳಿಂದ ಪ್ರೇರಿತರಾದ ನಿಜಾಂ ಅವರು ಸ್ವತಂತ್ರ್ಯವಾದ ರಾಷ್ಟ್ರ ಕಟ್ಟುವ ಉದ್ದೇಶ ಸೂಚಿಸಿದರು. ಇದಕ್ಕಾಗಿ ಮುಸ್ಲಿಂ ಧರ್ಮದಿಂದ ಪ್ರೇರಿತರಾದದವರನ್ನು 'ರಜಾಕಾರ'ರೆಂದು ಹೆಸರಿಸಿ ತನ್ನ ಸಂಸ್ಥಾನದಲ್ಲಿರಿಸಿಕೊಂಡರು. ಈ ರಜಾಕಾರರು 'ಇತ್ತೇಹಾದ' ಎಂಬ ಸಂಘಟನೆಯನ್ನು ಹೊಂದಿದ್ದರು. ಈ ಸಂಘಟನೆಯ ಗುರಿಗಳೆಂದರೆ

೧. ಹೈದರಾಬಾದ ಸಂಸ್ಥಾನದಲ್ಲಿದ್ದ ಮುಸಲ್ಮಾನರನ್ನು ಸಂಘಟಿಸಿ ನಿಜಾಂ ಅವರನ್ನು ಬೆಂಬಲಿಸುವುದು.

೨. ದೊಡ್ಡ ಪ್ರಮಾಣದಲ್ಲಿ ಹಿಂದೂಗಳನ್ನು ಮತಾಂತರಿಸಿ ಅವರ ಸಂಖ್ಯೆಯನ್ನು ಕಡಿಮೆಗೊಳಿಸುವುದು (ಪೊಲೀಸ್ ಪಾಟೀಲ್ ೨೦೦೨:೭೪).

ಈ ಗುರಿಗಳು ನಿಜಾಂ ಸರ್ಕಾರವನ್ನು ಸಂತೋಷಗೊಳಿಸಿದರೆ, ಬಹುಸಂಖ್ಯಾತರಾದ ಹಿಂದೂಗಳ ಪಾಲಿಗೆ ಮಾರಕವಾಗಿ ಕಂಡುಬಂದಿತು. ಕಾಸಿಂ ರಜ್ವಿಯು ರಜಾಕಾರರ ನಾಯಕತ್ವ ವಹಿಸಿಕೊಂಡನು. ಈತನ ನಾಯಕತ್ವದಲ್ಲಿ ಈ ಸಂಘಟನೆ ಸಂಪೂರ್ಣವಾಗಿ ಕೋಮುಶಕ್ತಿಯಾಗಿ ಪರಿವರ್ತನೆ ಹೊಂದಿತು. ಕಾಸೀಂ ರಜ್ವಿಯು ಹೈದರಾಬಾದ ಮುಸ್ಲಿಂ ಸಮುದಾಯ ಮತ್ತು ಸರ್ಕಾರದ ಮೇಲೆ ಎಷ್ಟು ಹಿಡಿತ ಸಾಧಿಸಿದ್ದನೆಂದರೆ ಸ್ವತಃ ನಿಜಾಂ ಅವರೇ ಇದರಿಂದ ಭಯ ಭೀತರಾಗಿದ್ದಾರೆ ಎಂದು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ (ಪೊಲೀಸ್ ಪಾಟೀಲ್ ೨೦೦೨:೭೬). ರಜಾಕಾರರು ಕೆಳವರ್ಗದ ಜನರಿಗೆ ಆಸೆ ತೋರಿಸಿ ಮುಸ್ಲಿಂ ಧರ್ಮಕ್ಕೆ ಮತಾಂತರಿಸುತ್ತಿದ್ದರು. ಹೀಗೆ ಮತಾಂತರಗೊಂಡ ಮುಸ್ಲಿಂಯೇತರರು, ಮತ್ತು ಮುಸ್ಲಿಂರ ಕಾರ್ಯಚಟುವಟಿಕೆಗಳಿಂದ ಜನಸಾಮಾನ್ಯರು, ತೊಂದರೆಗೆ ಒಳಗಾಗಿದ್ದರೆಂಬ ಅಂಶಗಳು ಕಂಡುಬರುತ್ತವೆ. ಇದಕ್ಕೆ ಸುರಪುರದ ಜನತೆಯು ಕೂಡಾ ಹೊರತಾಗಿರಲಿಲ್ಲ.

***        ***

ಸುರಪುರವು ಸಹಜವಾಗಿಯೇ ನಿಜಾಂ ಸರ್ಕಾರದ ಆಳ್ವಿಕೆಗೊಳಪಟ್ಟ ಪ್ರದೇಶವಾಗಿತ್ತು. ಈ ಪ್ರದೇಶವು ನಿಜಾಂ ಮತ್ತು ಮುಂಬೈ ಕರ್ನಾಟಕದ ನಡುವಿನ ಗಡಿ ಪ್ರದೇಶವಾಗಿದೆ. ಆದ್ದರಿಂದ ನಿಜಾಂ ಅವರ ಸರ್ಕಾರ ಈ ಪ್ರದೇಶದಲ್ಲಿ ರಜಾಕಾರರ ತಂಡವನ್ನು ನೇಮಿಸಿದ್ದರು. ಆದ್ದರಿಂದ ಸುರಪುರವು ರಜಾಕಾರರ ಕಾರ್ಯಚಟುವಟಿಕೆಗಳ ಕೇಂದ್ರಸ್ಥಾನವಾಗಿದ್ದರಿಂದ, ಈ ಪ್ರದೇಶದಲ್ಲಿ ೧೯೪೭ ರಲ್ಲಿ 'ಇತ್ತೇಹಾದ' ಸಂಘದ ಶಾಖೆಯನ್ನು ಸ್ಥಾಪಿಸಲಾಗಿತ್ತು. ಅನೇಕ ಜನ ಮುಸ್ಲಿಂ ಯುವಕರು ಮತ್ತು ಮುಸ್ಲಿಂ ಮುಖಂಡರು ಈ ಶಾಖೆಯ ಸದಸ್ಯರಾಗಿದ್ದರು (ಹೇಜೀಬ್ ೨೦೦೧:೭೧). ಸಂದರ್ಶನವೊಂದರಲ್ಲಿ ಮಾಹಿತಿ ನೀಡಿದ ಮಹಾದೇವಪ್ಪ ಹೂಗಾರರ ಪ್ರಕಾರ ಸುರಪುರದಲ್ಲಿ ಮಹ್ಮದ ಅಲಿಗುತ್ತೇದಾರ ಮತ್ತು ಅಬ್ದುಲ್ ಖಾದರ ಎಂಬುವವರು ಮುಸ್ಲಿಂರ ಪ್ರಮುಖ ಮುಖಂಡರಾಗಿದ್ದರು. ಸುರಪುರದ ಜನರು ಇವರಿಗೆ ಹೆದರುತ್ತಿದ್ದರು. ಅಬ್ದುಲ್ ಖಾದರ ಎಂಬುವವನು ಕಿರಾಣಿ ಅಂಗಡಿಯ ಮಾಲೀಕನಾಗಿದ್ದನು. ಹಿಂದೂಗಳಿಂದ ಹೆಚ್ಚು ಹಣ ಪಡೆದು ಕಳಪೆ ಮಟ್ಟದ ವಸ್ತುಗಳನ್ನು ಕೊಟ್ಟರೂ, ಹಿಂದೂಗಳು ಯಾವುದೇ ವಿರೋಧವನ್ನು ವ್ಯಕ್ತಪಡಿಸುತ್ತಿರಲಿಲ್ಲ ಎಂಬ ಮಹಾದೇವಪ್ಪ ಹೂಗಾರರ ಸಂದರ್ಶನದಲ್ಲಿ ವ್ಯಕ್ತವಾಗಿದೆ.(ಮಹಾದೇವಪ್ಪ ಹೂಗಾರ ೨೬.೦೧.೨೦೦೬).

ರಜಾಕಾರರು ಕೆಳವರ್ಗದ ಜನರನ್ನು ಮುಸ್ಲಿಂ ಧರ್ಮಕ್ಕೆ ಸೇರಿಸುತ್ತಿದ್ದರು. ರಜಾಕಾರರಿಗಿಂತ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿದವರಿಂದಲೇ ಹೆಚ್ಚಿನ ಕಿರುಕುಳ ಕಂಡುಬರುತ್ತಿತ್ತು. ಪ್ರತಿಯೊಂದು ಹಳ್ಳಿಗಳಲ್ಲಿ ರಜಾಕಾರರು ಹಾಗೂ ಅವರ ಸಹಾಯಕ್ಕಾಗಿ ಮುಸ್ಲಿಂ ಮುಖಂಡರು ಇರುತ್ತಿದ್ದರು. ಈ ವಿಷಯಕ್ಕೆ ಸಂಬಂಧಿಸಿದಂತೆ ಮುಸ್ಲಿಂರು ಹೈದರಾಬಾದಿನ ೨೪೦೦೦ ಹಳ್ಳಿಗಳ್ಳಲ್ಲಿ ಚದುರಿ ಹೋದರು ಎಂದು ವಿ.ಎಚ್.ದೇಸಾಯಿಯವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ(ದೇಸಾಯಿ ೨೦೦೦:೩೪೧).

ಸಂದರ್ಶನವೊಂದರಲ್ಲಿ ಮಾಹಿತಿ ನೀಡಿದ ಕಿಶನರಾವ್ ಮಳ್ಳಿಯವರ ಪ್ರಕಾರ, ಮುಸ್ಲಿಂಯೇತರರದೇ ಎಲ್ಲ ಕಡೆ ಕಾರುಬಾರು ಇತ್ತು. ಇವರು ನಿಜವಾದ ಮುಸ್ಲಿಂರಂತೆ ವರ್ತಿಸುತ್ತಿದ್ದರು. ಹಿಂದೂಗಳಿಗೆ ಅವಮಾನ, ಮಂದಿರಗಳ ನಾಶ, ಹಿಂದೂಗಳ ಆಸ್ತಿಲೂಟಿ ಮತ್ತು ಧಾರ್ಮಿಕ ಕಾರ್ಯಕ್ರಮಗಳ ಮೇಲಿನ ನಿಷೇಧ ಇವೆಲ್ಲವು ಸಾಮಾನ್ಯವಾಗಿದ್ದವು. ರಜಾಕಾರರು ಹಿಂದೂಗಳ ಮನೆಯಲ್ಲಿದ್ದ ಕುರಿ ಮತ್ತು ಕೋಳಿಗಳನ್ನು ಹೊತ್ತುಕೊಂಡು ಹೋಗುತ್ತಿದ್ದರು ಎಂದು ಹೇಳಿದ್ದಾರೆ (ಸಂದರ್ಶನ : ಕಿಶನರಾವ್ ಮಳ್ಳಿ, ೨೩.೦೧.೨೦೦೬). ರಜಾಕಾರರ ಈ ಎಲ್ಲ ಚಟುವಟಿಕೆಗಳಿಂದ ರೋಸಿ ಹೋದ ಜನರು ಮುಂಬೈ ಕರ್ನಾಟಕದ ಗಡಿಭಾಗದಲ್ಲಿ ಶಿಬಿರಗಳ ಸ್ಥಾಪನೆ ಮಾಡಿದರು. ರಾಜಾ ವೆಂಕಟಪ್ಪನಾಯಕರ ನಾಯಕತ್ವದಲ್ಲಿ 'ತಾಳಿಕೋಟೆ ಶಿಬಿರ' ಸ್ಥಾಪನೆಯಾಯಿತು(ಹೆಚ್ಚಿನ ಮಾಹಿತಿಗಾಗಿ ಗಡಿಶಿಬಿರಗಳ ಪಾತ್ರ ನೋಡಿ ಪು.೨5) ಈ ಸುದ್ದಿಯನ್ನು ತಿಳಿದುಕೊಂಡ ಅಬ್ದುಲ್ ಖಾದರ ಎಂಬ ಮುಸ್ಲಿಂ ಮುಖಂಡರು ಈ ಶಿಬಿರದಲ್ಲಿ ಭಾಗಿಯಾದ ಹೋರಾಟಗಾರರ ಕಾರ್ಯಚಟುವಟಿಕೆಗಳ ಮೇಲೆ ನಿಗಾ ವಹಿಸಿದರು. ತಾಳಿಕೋಟೆ ಶಿಬಿರವನ್ನು ಸ್ಥಾಪನೆ ಮಾಡುವುದರ ಮೂಲ ಉದ್ದೇಶ ರಜಾಕಾರರ ದಾಳಿಯನ್ನು ತಡೆಗಟ್ಟುವುದು ಮತ್ತು ನಿಜಾಂ ಸರ್ಕಾರದ ಪ್ರಭುತ್ವಕ್ಕೊಳಗಾದ ಪ್ರದೇಶಗಳನ್ನು ರಜಾಕಾರರಿಂದ ರಕ್ಷಿಸುವುದಾಗಿತ್ತು. ಶಿಬಿರದ ಹೋರಾಟಗಾರರು ರಜಾಕಾರರ ಪ್ರತಿಯೊಂದು ದಾಳಿಗಳ ವಿರುದ್ಧ ಪ್ರತಿಭಟನೆ ಕೈಗೊಂಡರು. ಇದಕ್ಕೆ ನಿದರ್ಶನವೆಂಬಂತೆ ಅನೇಕ ಸ್ಥಳಗಳಲ್ಲಿ ನಡೆದ ಹೋರಾಟಗಳನ್ನು ಹೋರಾಟಗಾರರಿಂದ ಸಂಗ್ರಹಿಸಿ ಅದನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ರಾಜಾ ವೆಂಕಟಪ್ಪನಾಯಕ, ಅಪ್ಪಾರಾವ್ ವಕೀಲ, ಮಹಾದೇವಪ್ಪ ಹೂಗಾರ, ತಿಮ್ಮಯ್ಯ ದರಬಾರಿ, ವೆಂಕನಗೌಡ ಪಾಟೀಲ, ವಿರೂಪಾಕ್ಷಪ್ಪಗೌಡ ರಾಜನಕೋಳೂರ, ಮಹಾಂತಪ್ಪಗೌಡ ಮತ್ತು ಉದ್ದನ್ನ ಸಂಗಪ್ಪ ಈ ಮೊದಲಾದವರೆಲ್ಲರು ರಜಾಕಾರರೊಂದಿಗೆ ಹೋರಾಡಿದ ಹೋರಾಟಗಾರರಾಗಿದ್ದಾರೆ. ಇವರಲ್ಲಿ ರಾಜಾ ವೆಂಕಟಪ್ಪ ನಾಯಕರು ರಜಾಕಾರರೊಂದಿಗೆ ಹೋರಾಡಲು ರೂಪರೇಷೆಗಳನ್ನು ಹಾಕಿಕೊಟ್ಟರೆ, ಇನ್ನು ಕೆಲವರು ಪ್ರತಿಯೊಂದು ಹಳ್ಳಿಗಳಿಗೆ ಹೋಗಿ ಅಲ್ಲಿ ರಜಾಕಾರರ ಕಾರ್ಯ ಚಟುವಟಿಕೆಗಳನ್ನು ತಿಳಿದುಕೊಂಡು ಮಾಹಿತಿ ಮುಟ್ಟಿಸುತ್ತಿದ್ದರು. ಈ ಎಲ್ಲ ಮಾಹಿತಿಯನ್ನು ಸಂಗ್ರಹಿಸಿ ರಜಾಕಾರರ ವಿರುದ್ಧ ಹೋರಾಟವನ್ನು ಹೋರಾಟಗಾರರು ಕೈಗೊಳ್ಳುತ್ತಿದ್ದರು. ರಜಾಕಾರರೊಡನೆ ಮುಖಾಮುಖಿಯಾದ ಘರ್ಷಣೆಗಳು ಈ ಭಾಗದಲ್ಲಿ ಕಂಡುಬಂದಿವೆ. ಈ ಘಟನೆಗಳ ವಿವರಗಳನ್ನು ಕೆಳಗೆ ನಿರೂಪಿಸಲಾಗಿದೆ.

**ಘಟನೆ ೧ :** ರಜಾಕಾರರೊಡನೆ ಉಗ್ರ ಹೋರಾಟ ಕೈಗೊಂಡವರಲ್ಲಿ ಸಿಂದಗಿ ಶಿಬಿರದ ನಾಯಕರಾದ ಸರ್ದಾರ ಶರಣಗೌಡರು ಒಬ್ಬರು. ಶರಣಗೌಡರು ಸುರಪುರ ತಾಲೂಕಿನ ಕೆಂಭಾವಿಯಲ್ಲಿ ರಜಾಕಾರರಿಂದ ಜನರಿಗೆ ಅನ್ಯಾಯವಾಗಿದೆ ಎಂಬ ಸುದ್ದಿ ತಿಳಿದ ಕೂಡಲೇ ಅನೇಕರೊಡಗೂಡಿ ಕೆಂಭಾವಿಗೆ ಬಂದರು.

ಇವರ ಜೊತೆ ಭಾರತದ ಪೋಲೀಸರು ಈ ಹೋರಾಟಗಾರರ ರಕ್ಷಣೆಗಾಗಿ ಹಿಂಬಾಲಿಸುತ್ತಿದ್ದರು. ಶರಣಗೌಡರು ಮಿಲಿಟರಿ ಆಫೀಸರರ ಜೊತೆಗೆ ಮಾತನಾಡಿ ಅವರನ್ನು ಒಪ್ಪಿಸಿ ಅವರಿಂದ ಒಂದು ಶಸ್ತ್ರಸಜ್ಜಿತ ಟ್ಯಾಂಕನ್ನು ತರಿಸಿದರು. ಮಲ್ಲಾ ಮತ್ತು ಕೆಂಭಾವಿಯಲ್ಲಿ ರಜಾಕಾರರೊಡನೆ ನಡೆದ ಘರ್ಷಣೆಯಲ್ಲಿ ರಜಾಕಾರರು ಓಡಿಹೋದರು. ನಂತರ ಅಗ್ನಿ ಎಂಬ ಗ್ರಾಮದಲ್ಲಿದ್ದ ಪೊಲೀಸ ಠಾಣೆಯ ಮೇಲೆ ಗುಂಡು ಹಾರಿಸಿದರು. ಇವರು ನಾರಾಯಣಪುರದಿಂದ ಕೊಡೇಕಲ್‌ದವರೆಗೆ ಬರುವ ಎಲ್ಲಾ ಕರೋಡಗಿರಿ ನಾಕಾಗಳನ್ನು ಸುಟ್ಟು ಹಾಕಿದರು. ಶರಣಗೌಡರು ಹಗರಟಗಿಗೆ ಬಂದಿದ್ದಾರೆಂದು ಸುದ್ದಿ ತಿಳಿದ ನಿಜಾಮ ಅವರ ಪೊಲೀಸರು 'ಶಿಕಾರ ಆಯಾ ಹೈ, ಡೂಂಡನೇಕೆ ಲಿಯೆ ಆಯೇ ಹೈ' ಎಂದು ಹೇಳಿದರು. ಇದರಿಂದ ತಿಳಿದು ಬರುವುದೇನೆಂದರೆ ಇವರ ಈ ರೀತಿಯ ಕಾರ್ಯಚಟುವಟಿಕೆಗಳು ರಜಾಕಾರರನ್ನು ಕಂಗೆಡಿಸಿದವು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸರ್ದಾರ ಶರಣಗೌಡರಿಂದ ಮೇಲಿನ ಈ ಎಲ್ಲ ಮಾಹಿತಿಯನ್ನು ಸಂಗ್ರಹಿಸಲಾಗಿದೆ (ಸರ್ದಾರ ಶರಣಗೌಡ, ೨೩.೦೧.೨೦೦೬).

**ಘಟನೆ ೨ :** ಎಣ್ಣಿವಡಗೇರಿಯು ಸುರಪುರ ತಾಲೂಕಿನ ಒಂದು ಗ್ರಾಮವಾಗಿದೆ. ಈ ಗ್ರಾಮವು ಕೂಡ ರಜಾಕಾರರ ದಬ್ಬಾಳಿಕೆಗೆ ಒಳಗಾದ ಪ್ರದೇಶವಾಗಿತ್ತು. ಎಣ್ಣಿವಡಗೇರಿಯಲ್ಲಿ ರಜಾಕಾರರು ಹಿಂದೂಗಳ ಮನೆಯಲ್ಲಿ ಆಶ್ರಯ ಪಡೆದಿದ್ದಾರೆಂಬ ಸುದ್ದಿ ತಿಳಿದುಕೊಂಡ ಹೋರಾಟಗಾರರು ಆ ಊರಿಗೆ ಪ್ರವೇಶ ಮಾಡಿದರು. ಇವರನ್ನು ನೋಡಿದ ರಜಾಕಾರರು ಇವರ ಮೇಲೆ ಗುಂಡಿನ ಮಳೆಗರೆದರು. ಹೋರಾಟಗಾರರು ಮತ್ತು ರಜಾಕಾರರ ನಡುವೆ ನಡೆದ ಗುಂಡಿನ ಚಕಮಕಿಯಲ್ಲಿ ರಜಾಕಾರರ ಕಡೆಯವರಲ್ಲಿ ಇಬ್ಬರು ಮರಣಹೊಂದಿದ್ದರಿಂದ ರಜಾಕಾರರು ಓಡಿ ಹೋದರು. ನಂತರ ಈ ಹೋರಾಟಗಾರರು ರಜಾಕಾರರಿಗೆ ಆಶ್ರಯ ನೀಡಿದ ಹಿಂದುಗಳ ಮನೆಗೆ ಹೋಗಿ ಅವರ ಮನೆಯಲ್ಲಿದ್ದ ಕುದುರೆ, ಒಂಟೆ ಮತ್ತು ಕುರಿಗಳನ್ನು ಹೊತ್ತುಕೊಂಡು ಹೋಗಿ ಸಂತೆಯಲ್ಲಿ ಮಾರಿ ಹಣ ಪಡೆದರು ಎಂದು ಹೋರಾಟದಲ್ಲಿ ಭಾಗಿಯಾದ ತಿಮ್ಮಯ್ಯ ದರಬಾರಿಯವರು ಹೇಳಿದ್ದಾರೆ (ತಿಮ್ಮಯ್ಯ ದರಬಾರಿ, ೦೫.೦೨.೨೦೦೬).

**ಘಟನೆ ೩ :** ಕುರಬನ ತಳ್ಳಳ್ಳಿ ಮತ್ತು ಹೂವಿನ ಹಳ್ಳಿಗಳು ಸುರಪುರ ತಾಲೂಕಿನ ಗ್ರಾಮಗಳಾಗಿವೆ. ಮಹಾದೇವಪ್ಪ ಹೂಗಾರರು ಕೆಲವು ಜನ ಹೋರಾಟಗಾರರೊಡಗೂಡಿ ರಜಾಕಾರರ ಜೊತೆ ಕುರುಬನ ತಳ್ಳಳ್ಳಿ-ಹೂವಿನ ಹಳ್ಳಿಗಳಲ್ಲಿ ಹೋರಾಡಿದರು. ಅಲ್ಲಿಂದ ಬೈಚಬಾಳ ತಲುಪಿದರು. ಅಲ್ಲೂ ರಜಾಕಾರರ ತಂಡವಿತ್ತು.ಕೆಲವು ಹಿಂದೂಗಳ ರಜಾಕಾರರ ಪರವಾಗಿ ಈ ಹೋರಾಟಗಳಲ್ಲಿ ಭಾಗಿಯಾಗಿ ತಮ್ಮ ಜೀವನವನ್ನು ಬಲಿಗೈದಿದಾರೆಂದು ಇವರು ಸಂದರ್ಶನದಲ್ಲಿ ತಿಳಿಸಿದ್ದಾರೆ (ಮಹಾದೇವಪ್ಪ ಹೂಗಾರ ೦೧.೦೨.೨೦೦೬).

**ಘಟನೆ ೪ :** ಸುರಪುರ ತಾಲೂಕಿನ ಗುಳಬಾಳ ಪ್ರದೇಶವು ಮುಂಬೈ ಸರ್ಕಾರದ ಗಡಿಗೆ ಸಮೀಪವಾದ ಪ್ರದೇಶವಾಗಿತ್ತು. ವೆಂಕನಗೌಡ ಪಾಟೀಲರು ಗುಳಬಾಳದಲ್ಲಿ ಮೊಟ್ಟಮೊದಲ ಬಾರಿಗೆ ಸ್ವಾತಂತ್ರ್ಯ

ದಿನದಂದು ಧ್ವಜವನ್ನು ಹಾರಿಸಿದರು. ನಂತರ ರಾಜನಕೋಳೂರ ಮತ್ತು ತೀರ್ಥಗಳಲ್ಲಿ ಹೆಂಡದಂಗಡಿಗಳಿಗೆ ಬೆಂಕಿ ಹಚ್ಚಿದರಲ್ಲದೇ, ಗೌಡ, ಕುಲ್ಕರ್ಣಿಯವರಲ್ಲಿರುವ ದಫ್ತರಗಳನ್ನು ಸುಟ್ಟು ಹಾಕಿದರು. ಕರೋಡಗಿರಿ ನಾಕಾದ ಮೇಲೆ ದಾಳಿ ಮಾಡಿದವರಲ್ಲದೆ, ಎಣ್ಣೆವಡಗೇರಿಯಲ್ಲಿ ರಜಾಕಾರರೊಡನೆ ನಡೆದ ಹೋರಾಟದಲ್ಲೂ ಭಾಗಿಯಾಗಿದ್ದರು (ವೆಂಕನಗೌಡ ಪಾಟೀಲ್ ೪.೦೨.೨೦೦೬).

**ಘಟನೆ ೫ :** ಸಂಗಪ್ಪ ಉದ್ದನ್ನರವರು ರಾಯನಗುಳ್ಳಾ, ಮಾರಲಬಾವಿ, ತೀರ್ಥ ಮತ್ತು ಹಗರಟಗಿಗಳಲ್ಲಿರುವ ಕರೋಡಗಿರಿ ನಾಕಾಗಳ ಮೇಲೆ ದಾಳಿ ಮಾಡಿದರು. ಕರೋಡಗಿರಿ ನಾಕಾ ಎಂದರೆ ತೆರಿಗೆ ಸಂಗ್ರಹಿಸುವ ಕಚೇರಿಯಾಗಿತ್ತು. ಜನರಿಂದ ವಸೂಲಿ ಮಾಡಿದ ಹಣವನ್ನು ಈ ನಾಕಾಗಳಲ್ಲಿ ಇಡಲಾಗುತ್ತಿತ್ತು. ಪ್ರತಿಯೊಂದು ಹಳ್ಳಿಗೂ ಕರೋಡಗಿರಿ ನಾಕಾಗಳು ಇದ್ದವು. ಹಗರಟಗಿಯಲ್ಲಿ ರಜಾಕಾರರ ಮತ್ತು ಹೋರಾಟಗಾರರ ನಡುವೆ ನಡೆದ ಹೋರಾಟದಲ್ಲಿ ರಜಾಕಾರರ ಕಡೆ ೩೦-೪೦ ಜನರಿದ್ದರು. ಈ ಹೋರಾಟದಲ್ಲಿ ಉದ್ದನ್ನ ಸಂಗಪ್ಪನವರು ರಜಾಕಾರರ ಮೇಲೆ ಕೈಬಾಂಬು ಎಸೆದು ಓಡಿ ಹೋಗಿ ಸಜ್ಜೆ ಬೆಳೆಯಲ್ಲಿ ಅಡಗಿಕೊಂಡರು. ಕೊಡೇಕಲ್ ಮಠದಲ್ಲಿದ್ದ ಹೊತ್ತಿಗೆಯನ್ನು ರಜಾಕಾರರು ತೆಗೆದುಕೊಂಡು ಹೋಗಿದ್ದರು. ೪೦ ದಿನಗಳಲ್ಲಿ ಹೈದರಾಬಾದ 'ಮಜರಾಯಿ'ಯಲ್ಲಿ ರಜಾಕಾರರ ಹತ್ತಿರವಿದ್ದ ಈ ಹೊತ್ತಿಗೆಯನ್ನು ಮರಳಿ ತಂದರು. ಒಂದು ಸಲ ಮುಸ್ಲಿಂ ವ್ಯಕ್ತಿಯ ಹತ್ತಿರ ೨೦೦೦ ರೂ ತೆಗೆದುಕೊಂಡಿದ್ದರು. ಆ ಹಣವನ್ನು ಆ ವ್ಯಕ್ತಿ ಮರಳಿ ಕೊಡುವಂತೆ ಕೇಳಿದಾಗ ಇದರಿಂದ ರೋಸಿ ಹೋಗಿದ್ದ ಇವರು ಆತನ ಮೇಲೆ ಕಲ್ಲನ್ನು ಎತ್ತಿ ಹಾಕಿದರೆಂದು ಸ್ವತಃ ಸಂಗಪ್ಪ ಉದ್ದನ್ನರವರೇ ಸಂದರ್ಶನದ ಸಮಯದಲ್ಲಿ ತಿಳಿಸಿದ್ದಾರೆ.

**ಘಟನೆ ೬ :** ಮೇಲಿನ ಎಲ್ಲ ಘಟನೆಗಳಿಗಿಂತ ರಾಜನಕೋಳೂರಿನಲ್ಲಿ ನಡೆದ ಈ ಘಟನೆ ವಿಮೋಚನಾ ಹೋರಾಟದಲ್ಲಿ ಪ್ರಮುಖ ಸ್ಥಾನ ಪಡೆದಿದೆ. ರಾಜನಕೋಳೂರ ಸುರಪುರ ತಾಲೂಕಿನ ಒಂದು ಗ್ರಾಮವಾಗಿದೆ. ಈ ಭಾಗದಲ್ಲಿ ರಜಾಕಾರರ ಪಾಲಿಗೆ ಸಿಂಹಸ್ವಪ್ನ ಎನಿಸಿಕೊಂಡಿದ್ದ ವ್ಯಕ್ತಿಯೆಂದರೆ ರಾಜನಕೋಳೂರಿನ ವಿರೂಪಾಕ್ಷಪ್ಪ ಗೌಡರಾಗಿದ್ದಾರೆ. ಇವರು ನಿಜಾಂ ಗಡಿಗಳ ಅಕ್ಕಪಕ್ಕದ ಗ್ರಾಮಗಳ ಮೇಲಾಗುತ್ತಿರುವ ರಜಾಕಾರರ ದಬ್ಬಾಳಿಕೆಯನ್ನು ಸಮರ್ಥವಾಗಿ ಎದುರಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ ಎನ್ನುವುದಕ್ಕೆ ಅನೇಕ ನಿದರ್ಶನಗಳಿವೆ. ವಿರೂಪಾಕ್ಷಪ್ಪಗೌಡರು ರಜಾಕಾರರೊಂದಿಗೆ ಕೈಗೊಂಡಿರುವ ಹೋರಾಟಗಳಲ್ಲಿ ಎಣ್ಣೆ ವಡಗೇರಿ ಘಟನೆ ಮತ್ತು ರಾಜನಕೋಳೂರಿನ ಘಟನೆ ಪ್ರಮುಖವಾಗಿವೆ. ರಾಜನಕೋಳೂರಿನ ಕರೋಡಗಿರಿ ನಾಕಾದ ಮೇಲೆ ಮುತ್ತಿಗೆ ಹಾಕಿ ಅಲ್ಲಿಯ ಕಾಗದ ಪತ್ರಗಳನ್ನು ಸುಟ್ಟು ಹಾಕಿದರು. ನಂತರ ಎಣ್ಣೆ ವಡಗೇರಾಕ್ಕೆ ಬಂದರು. ಅಲ್ಲಿ ಒಬ್ಬ ಮುಸ್ಲಿಂ ವ್ಯಕ್ತಿಯು ರಜಾಕಾರರಿಗೆ ರಹಸ್ಯವಾಗಿ ಈ ಹೋರಾಟಗಾರರ ಚಲನ-ವಲನ ಮತ್ತು ಇವರು ಕೈಗೊಳ್ಳುವ ಕಾರ್ಯ ಯೋಜನೆಗಳ ಬಗ್ಗೆ ಮಾಹಿತಿ ನೀಡುತ್ತಿದ್ದನು. ಆ ವಿಷಯ ಇವರಿಗೆ ಗೊತ್ತಾಗಿ ಅವನನ್ನು ಕೊಲೆ ಮಾಡಿದರು.

ರಜಾಕಾರರೊಂದಿಗೆ ನಡೆದ ಹೋರಾಟದಲ್ಲಿ ಮೂರ್ಕಾರ್ತಿ ಗುಡ್ಡದ ಸಮೀಪ ಆಗಿರುವ ಹೋರಾಟವು ಪ್ರಮುಖವಾಗಿದೆ. ವಿರೂಪಾಕ್ಷಪ್ಪ ಗೌಡರ ಉಗ್ರ ಹೋರಾಟದಿಂದ ನಿಜಾಂ ಅವರ ಸರ್ಕಾರ ತತ್ತರಿಸಿ ಭೀತಿಗೊಂಡಿತ್ತು. ಇದಕ್ಕಾಗಿ ವಿರೂಪಾಕ್ಷಪ್ಪಗೌಡರನ್ನು ಮುಗಿಸಲು ಒಂದು ಸಂಚನ್ನು ನಿಜಾಂ ಸರ್ಕಾರ ಹೂಡಿತು. ಒಬ್ಬ ವ್ಯಕ್ತಿಯು ವಿರುಪಾಕ್ಷಪ್ಪ ಗೌಡರಲ್ಲಿಗೆ ಬಂದು ಮೇವಿನ ಬಣವೆಗೆ ಬೆಂಕಿ ಹಚ್ಚಿದ್ದಾರೆಂದು ಹೇಳಿದನು. ಈ ಸುದ್ದಿಯನ್ನು ಕೇಳಿದ ವಿರೂಪಾಕ್ಷಪ್ಪ ಗೌಡರು ಮುಂಬೈ ಕರ್ನಾಟಕದ ೪ ಜನ ಪೋಲೀಸರು, ಬಲಗೈ ಬಂಟ ಮಹಾಂತಪ್ಪ ಮತ್ತು ಓರ್ವ ಹವಾಲ್ದಾರರ ಜೊತೆಗೂಡಿ ಆ ಸ್ಥಳಕ್ಕೆ ಬಂಧರು. ಇವರು ಬರುವುದನ್ನೆ ಎದುರು ನೋಡುತ್ತಿದ್ದ ರಜಾಕಾರರು, ಇವರ ಮೇಲೆ ಗುಂಡು ಹಾರಿಸಲಾರಂಭಿಸಿದರು. ಹೀಗೆ ರಜಾಕಾರರ ಮತ್ತು ವಿರೂಪಾಕ್ಷಪ್ಪಗೌಡರ ನಡುವೆ ಗುಂಡಿನ ದಾಳಿ ನಡೆಯಿತು. ರಜಾಕಾರರು ನಡೆಸಿದ ೨೫ ನಿಮಿಷಗಳ ಕಾಲ ಗುಂಡಿನ ಚಕಮಕಿಯಲ್ಲೇ ವಿರೂಪಾಕ್ಷಪ್ಪಗೌಡರು ಮತ್ತು ಅವರ ಜೊತೆಯಿದ್ದ ಸಹಚರರೆಲ್ಲರೂ ರಜಾಕಾರರ ಗುಂಪಿಗೆ ಬಲಿಯಾದರು. ರಜಾಕಾರರು ವಿರೂಪಾಕ್ಷಪ್ಪಗೌಡರ ಹೆಣವನ್ನು ಸುರಪುರಕ್ಕೆ ತಂದು ಮೆರವಣಿಗೆ ಮಾಡಿದರು. ರಜಾಕಾರರೊಡನೆ ನಡೆದ ಈ ಹೋರಾಟವು ಅತ್ಯಂತ ಪ್ರಮುಖವಾದ ಹೋರಾಟವಾಗಿ ಕಂಡುಬಂದಿದೆ. ಎಂದು ವೆಂಕನಗೌಡರು ತಮ್ಮ ಸಂದರ್ಶನದಲ್ಲಿ ಮತ್ತು ಮೂಡಬೂಳ ಭಾಸ್ಕರರಾವರು ತಮ್ಮ ಲೇಖನದಲ್ಲಿ ಈ ರೀತಿಯಾಗಿ ಹೇಳಿದ್ದಾರೆ (ಮೂಡಬೂಳರ ಲೇಖನ : ರಾಜನಕೋಳೂರಿನ ಮಹಾಬಲಿದಾನಿ ತರುಣ ವಿರೂಪಾಕ್ಷಪ್ಪಗೌಡ).

**ಘಟನೆ ೭ :** ಮೊದಲಿನ ೬ ಘಟನೆಗಳಲ್ಲಿ ಶಿಬಿರದ ಹೋರಾಟಗಾರರು ರಜಾಕಾರರ ಮೇಲೆ ದಾಳಿ ಮಾಡಿದರೆ ಘಟನೆ ೭ರಲ್ಲಿ ರಜಾಕಾರರ ಶಿಬಿರದ ಹೋರಾಟಗಾರರಲ್ಲದವರ ಮೇಲೆ ಹಿಂಸಾತ್ಮಕ ಕೃತ್ಯಗಳನ್ನು ಕೈಗೊಂಡಿರುವುದು ಕೆಳಗಿನ ಅಂಶಗಳಿಂದ ತಿಳಿದುಬಂದಿದೆ. ಮಳ್ಳಿ ಗ್ರಾಮ ಬಿಜಾಪುರ ಸರಹದ್ದಿಗೆ ಹೊಂದಿರುವುದರಿಂದ ಅಲ್ಲಿ ಮೊದಲು ನಿಜಾಂ ಅವರ ಸರ್ಕಾರ ಮಿಲಿಟರಿ ಇರಿಸಿತ್ತು. ಮುಂದೆ ಸೋಲುವ ಭಯದಿಂದ ೧೦ ಮೈಲು ಮರಳಿ ಹಿಂದಕ್ಕೆ ಹೋಯಿತು. ಕಾಂಗ್ರೆಸ್ ಕಾರ್ಯಕರ್ತರು ಮಳ್ಳಿಗೆ ಬಂದು ರಜಾಕಾರರು ನಡೆಸುವ ಹಿಂಸಾಚಾರವನ್ನು ಕುರಿತು ಜನರಿಗೆ ಧೈರ್ಯ ಹೇಳಿ ಹೋಗುತ್ತಿದ್ದರು. ೮ ಸೆಪ್ಟೆಂಬರ್ ೧೯೪೮ರ ಮುಂಚೆ ಮಳ್ಳಿ ಗ್ರಾಮಕ್ಕೆ ಕಾಂಗ್ರೆಸ್ ಕಾರ್ಯಕರ್ತರು ನುಗ್ಗಿ ರಜಾಕಾರರ ವಿರುದ್ಧ ಹೋರಾಟ ಕೈಗೊಂಡ ಪರಿಣಾಮ ಮಳ್ಳಿ ಗ್ರಾಮದಲ್ಲಿ ಗದ್ದಲ ಆರಂಭವಾಯಿತು. ನಂತರ ರಜಾಕಾರರು ಸುರಪುರದ ಮಹಮ್ಮದ ಆಲೀ ಗುತ್ತೇದಾರ ಇವರ ನೇತೃತ್ವದಲ್ಲಿ ೧೫೦ ಜನ ರಜಾಕಾರರು ಮತ್ತು ಪಠಾಣರು ಜೊತೆಗೂಡಿ ಮಳ್ಳಿ ಗ್ರಾಮದ ಮೇಲೆ ಮತ್ತು ಕಿಶನರಾವ್ ಮಳ್ಳಿಯವರ ಮನೆ ಮೇಲೆ ೮ ಸೆಪ್ಟೆಂಬರ್ ೧೯೪೮ರಂದು ದಾಳಿ ಮಾಡಿದರು. ರಜಾಕಾರರಿಂದ ಹೆಚ್ಚಿನ ಶೋಷಣೆಗೆ ಒಳಗಾದವರಲ್ಲಿ ಕಿಶನರಾವ್ ಮಳ್ಳಿಯವರು ಪ್ರಮುಖರು. ಇವರು ಭಾರತ ಸ್ವಾತಂತ್ರ್ಯ ಪಡೆದ ದಿನದಂದು ಧ್ವಜಾ ಮೆರವಣಿಗೆ ನಡೆಸುವುದರ ಮೂಲಕ ಮತ್ತು ಕರಪತ್ರಗಳ ಹಂಚಿಕೆಯ ಸಮಯದಲ್ಲೂ ಪೊಲೀಸರ

ಕೋಪಕ್ಕೂ ಗುರಿಯಾದರು. ಮೇಲಿನ ಎಲ್ಲ ಘಟನೆಗಳಿಗೆ ಕಿಶನರಾವ್ ಮಳ್ಳಿಯವರೇ ಕಾರಣವೆಂದು ತಿಳಿದು ಅವರ ಮನೆಯ ಮೇಲೆ ದಾಳಿ ಮಾಡಿದರು. ಕಿಶನರಾವ್ ಅವರ ತಂದೆ ಮಹಿಪತಿರಾವ್, ಚಿಕ್ಕಪ್ಪ ರಾಮರಾವ್, ಅಣ್ಣಂದಿರಾದ ಗುರುರಾವ್ ಮತ್ತು ನಾರಾಯಣರಾವ್ ಅವರನ್ನು ರಜಾಕಾರರು ಕೊಲೆ ಮಾಡಿದರು. ಇದೊಂದು ಅಮಾನವೀಯ ಕೃತ್ಯವಾಗಿದೆ. ಈ ಘಟನೆಯಲ್ಲಿ ಅವರ ಮನೆಯ ಕೆಲಸದಾಳುಗಳು ರಜಾಕಾರರ ಜೊತೆ ಸೇರಿಕೊಂಡು ಇಂತಹ ಕಾರ್ಯವೆಸಗಿದ್ದಾರೆ. ಈ ಘಟನೆಯು ಕೂಡಾ ರಜಾಕಾರರ ಹಿಂಸಾ ವೃತ್ತಿಯನ್ನು ತೋರಿಸಿಕೊಡುವ ನಿದರ್ಶನವಾಗಿ ಎಂದು ಕಿಶನರಾವ್ ಮಳ್ಳಿಯವರು ಸಂದರ್ಶನದಲ್ಲಿ ಈ ಮಾಹಿತಿಯನ್ನು ನೀಡಿದ್ದಾರೆ (ಸಂದರ್ಶನ : ಕಿಶನರಾವ್ ಮಳ್ಳಿ ೨೩.೦೧.೨೦೦೬). ಮೊದಲಿನ ೬ ಘಟನೆಗಳಲ್ಲಿ ಶಿಬಿರದ ಹೋರಾಟಗಾರರು ರಜಾಕಾರರ ಮೇಲೆ ದಾಳಿ ಮಾಡಿದರೆ ಘಟನೆ ೭ರಲ್ಲಿ ರಜಾಕಾರರು ಶಿಬಿರದ ಹೋರಾಟಗಾರರಲ್ಲದವರ ಮೇಲೆ ಹಿಂಸಾತ್ಮಕ ಕಾರ್ಯಾಚಟುವಟಿಕೆಗಳನ್ನು ಕೈಗೊಂಡಿರುವುದು ಕೆಳಗಿನ ಅಂಶಗಳಿಂದ ತಿಳಿದುಬರುತ್ತದೆ.

ಸುರಪುರದ ವಿಮೋಚನಾ ಹೋರಾಟದ ವ್ಯಾಪ್ತಿಯಲ್ಲಿ ರಜಾಕಾರರು ಮತ್ತು ವಿಮೋಚನಾ ಹೋರಾಟಗಾರರ ನಡುವೆ ನಡೆದ ಘಟನೆಗಳು ಪ್ರಮುಖವಾಗಿವ. ಆ ಎಲ್ಲ ಘಟನೆಗಳಲ್ಲಿ ಒಂದಕ್ಕಿಂತ ಒಂದು ಘಟನೆಗಳು ಭಿನ್ನವಾದ ಸ್ವರೂಪ ಪಡೆದಿವೆ. ಈ ಎಲ್ಲ ಘಟನೆಗಳಲ್ಲಿ ಕಂಡುಬರುವ ಸಾಮಾನ್ಯ ಅಂಶವೆಂದರೆ ರಜಾಕಾರರಿಗೆ ಸಹಾಯ ಮಾಡಿದವರ ಮೇಲೆ ಉಗ್ರ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಅವರ ಮನೆಯಲ್ಲಿದ್ದ ವಸ್ತುಗಳನ್ನು ಹೊತ್ತುಕೊಂಡು ಬಂದು ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ವಿಮೋಚನಾ ಹೋರಾಟಗಾರರ ಕಾರ್ಯಗಳಿಗೆ ಅಡ್ಡಿಪಡಿಸುತ್ತಿದ್ದ ವ್ಯಕ್ತಿಗಳನ್ನು ಕೊಲೆ ಮಾಡಿರುವುದು ಮತ್ತು ಕರೋಡಗಿರಿ ನಾಕಾಗಳಲ್ಲಿ ಜನರಿಗೆ ತೆರಿಗೆ ಸಂಗ್ರಹಿಸಿ ಇಟ್ಟಿರುವ ಹಣವನ್ನು ಲೂಟಿ ಮಾಡಿರುವುದು ಸಾಮಾನ್ಯವಾಗಿ ೧ ರಿಂದ ೫ರವರೆಗಿನ ಘಟನೆಗಳಲ್ಲಿ ಕಂಡುಬಂದರೆ ೬ ಮತ್ತು ೭ನೇ ಘಟನೆಗಳು ಎಲ್ಲಕ್ಕಿಂತ ಭಿನ್ನವಾಗಿವೆ.

ಘಟನೆ ೬ರಲ್ಲಿ ಮೇಲಿನ ೫ ಘಟನೆಗಳಲ್ಲಿ ಹೋರಾಟಗಾರರು ರಜಾಕಾರರೊಡನೆ ನಡೆಸಿದ ದಾಳಿಗಳಲ್ಲಿ ರಜಾಕಾರರು ಮರಣ ಹೊಂದಿರುವುದು ಕಂಡುಬರುತ್ತದೆ. ಆದರೆ ಘಟನೆ ೬ರಲ್ಲಿ ತಾಳಿಕೋಟೆ ಶಿಬಿರದ ಮೂಲಕ ಹೋರಾಟ ಕೈಗೊಂಡಿರುವ ಹೋರಾಟಗಾರರಲ್ಲಿ ಉಗ್ರ ಕಾರ್ಯಚಟುವಟಿಕೆಗಳ ಮೂಲಕ ರಜಾಕಾರರನ್ನು ದಂಗುಬಡಿಸಿದ ವಿರುಪಾಕ್ಷಪ್ಪಗೌಡರು ರಜಾಕಾರರ ಕುಟೀಲ ಸಂಚಿಗೆ ಬಲಿಯಾಗಿದವರಲ್ಲಿ ಮೊದಲಿಗರಾಗಿದ್ದಾರೆ. ಇದು ವಿಮೋಚನಾ ಹೋರಾಟದಲ್ಲಿಯೇ ಅತ್ಯಂತ ಐತಿಹಾಸಿಕ ಘಟನೆಯಾಗಿ ಕಂಡುಬಂದಿದೆ. ವಿರೂಪಾಕ್ಷಗೌಡರ ಜೊತೆ ಇನ್ನಿಬ್ಬರು ಹೋರಾಟಗಾರರು ಸೇರಿದಂತೆ ಇವರ ರಕ್ಷಣೆಗಾಗಿ ಇರಿಸಿದ್ದ ಮುಂಬೈ ಸರಕಾರದ ಪೊಲೀಸರು ಕೂಡಾ ರಜಾಕಾರರ ಗುಂಡೇಟಿಗೆ ಬಲಿಯಾಗಿರುವುದು ಸಂದರ್ಶನಗಳ ಮೂಲಕ ತಿಳಿದುಬಂದಿದೆ.

ಆದರೆ ಘಟನೆ ೭ರಲ್ಲಿ ವಿಮೋಚನಾ ಹೋರಾಟದಲ್ಲಿ ಭಾಗಿಯಾಗದೇ ಕೇವಲ ಭಾರತ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಧ್ವಜ ಮೆರವಣಿಗೆ ನಡೆಸುವುದರ ಮೂಲಕ ಮತ್ತು ಕರಪತ್ರಗಳನ್ನು ಹಂಚುವ ಮೂಲಕ ರಜಾಕಾರರ ಗಮನ ಸೆಳೆದಿದ್ದ ಕಿಶನರಾವ್ ಮಳ್ಳಿಯವರ ಕುಟುಂಬ ರಜಾಕಾರರ ನಡೆಸಿದ ದೌರ್ಜನ್ಯಕ್ಕೆ ಬಲಿಯಾದ ಮತ್ತು ಇತರ ಹೋರಾಟಗಾರರಿಗಿಂತ ಹೆಚ್ಚಿನ ನೋವನ್ನು ಮತ್ತು ಆರ್ಥಿಕ ಸಂಕಷ್ಟವನ್ನು ಅನುಭವಿಸಿದವರಲ್ಲಿ ಇವರೇ ಮೊದಲಿಗರಾಗಿದ್ದಾರೆ.

ಈ ಮೇಲಿನ ಎಲ್ಲಾ ರಜಾಕಾರರ ಕಾರ್ಯಚಟುವಟಿಕೆಗಳನ್ನು ಗಮನಿಸಿದಾಗ ರಜಾಕಾರರು ನಡೆಸಿದ ಕಾರ್ಯ ಪ್ರವೃತ್ತಿ ತಿಳಿದುಬರುತ್ತದೆ. ರಜಾಕಾರರು ನಡೆಸಿದ ದಬ್ಬಾಳಿಕೆಯಿಂದ ಜನರು ರೋಸಿ ಹೋಗಿದ್ದರು. ಹೀಗೆ ನಿಜಾಂ ಅವರ ಆಳ್ವಿಕೆಯಲ್ಲಿ ಅಸ್ತಿತ್ವಕ್ಕೆ ಬಂದಿದ್ದ ರಜಾಕಾರರು ಕೆಲವೇ ದಿನಗಳಲ್ಲಿ ಪ್ರಬಲರಾಗಿದ್ದರಿಂದ ಸ್ವತಃ ನಿಜಾಂ ಅವರು ಕೂಡ ರಜಾಕಾರರ ಕಾರ್ಯಚಟುವಟಿಕೆಗಳಿಂದ ಭಯಭೀತರಾಗಿದ್ದರು. ಪೋಲೀಸ್ ಕಾರ್ಯಾಚರಣೆಯಾಗುವವರೆಗೂ ರಜಾಕಾರರು ನಡೆಸಿದ ನಿರಂಕುಶ ಆಡಳಿತದಿಂದ ಜನಸಾಮಾನ್ಯರು ಕೂಡಾ ಹಿಂಸಾಚಾರಕ್ಕೆ ಒಳಗಾಗಿದ್ದರು. ಇತಿಹಾಸಕಾರ ವಿ.ಎಚ್ .ದೇಸಾಯಿ ಹೇಳುವಂತೆ "ಹೈದರಾಬಾದಿನ ದುರ್ದೈವವನ್ನು ಪ್ರಧಾನಿ ಮೀರ ಲಾಯಕ ಅಲಿ ನವಾಬ ಮೋಯಿನ ನಬಾಬ ಜಂಗ ಮತ್ತು ಖಾಸಿಂ ರಜ್ವಿ ಆಳುತ್ತಿದ್ದರು" ಎಂದು ಹೇಳಿರುವುದನ್ನು ರಾಮಣ್ಣಹಾವಳೆಯವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ (ಹವಳೆ ೧೯೯೬:೧೨). ಹೋರಾಟಗಾರರ ಹೋರಾಟದ ಫಲವಾಗಿ ೧೩ ಸೆಪ್ಟೆಂಬರ್ ೧೯೪೮ ರಂದು ಸರ್ದಾರ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ 'ಪೋಲೀಸ ಕಾರ್ಯಾಚರಣೆ' ಆರಂಭವಾಯಿತು. ೪ ದಿನಗಳವರೆಗೆ ನಡೆದ ಕಾರ್ಯಾಚರಣೆಯಿಂದ ೧೭ ಸೆಪ್ಟೆಂಬರ್ ೧೯೪೮ ರಂದು ಹೈದರಾಬಾದಿನ ನಿಜಾಂ, ರಜಾಕಾರರೊಂದಿಗೆ ಭಾರತದ ಸರ್ಕಾರಕ್ಕೆ ಶರಣಾದರು. ಇದರಿಂದ ರಜಾಕಾರರೆಲ್ಲರು ನಿಜಾಂ ಅವರ ಆಳ್ವಿಕೆಗೆ ಒಳಗಾಗಿದ್ದ ಪ್ರತಿಯೊಂದು ಹಳ್ಳಿಗಳಿಂದ ನಿರ್ಗಮಿಸಿದರು. ಹೋರಾಟಗಾರರೆಲ್ಲರು ಪ್ರತಿಯೊಂದು ಹಳ್ಳಿಗಳಿಗೆ ಭೇಟಿ ನೀಡುವುದರ ಜೊತೆಗೆ ಊರು ಬಿಟ್ಟು ಹೋಗಿರುವವರನ್ನು ಮರಳಿ ಊರಿಗೆ ಕರೆದುಕೊಂಡು ಬಂದರು.

ವಿಮೋಚನಾ ಹೋರಾಟದ ಹೋರಾಟಗಾರರಾದ ಅಪ್ಪುರಾವ್ ವಕೀಲರು ಹೈದರಾಬಾದ ಸಂಸ್ಥಾನ ಭಾರತದೊಂದಿಗೆ ವಿಲೀನವಾದ ನಂತರ ಹೈದರಾಬಾದಗೆ ತೆರಳಿ ವಕೀಲ ವೃತ್ತಿಯನ್ನು ಆರಂಭಿಸಿದರು. ಆಗ ಭಾರತ ಸರ್ಕಾರವು ರಜಾಕಾರರ ಮುಖಂಡನಾಗಿದ್ದ ಕಾಸೀಂ ರಜ್ವಿಯ ಮೇಲೆ ಕ್ರಮಕೈಗೊಳ್ಳಲು ಅಪ್ಪಾರಾವ್ ವಕೀಲರನ್ನು ವಿಶೇಷ ಅಧಿಕಾರಿಯನ್ನಾಗಿ ನೇಮಿಸಿದರು. ಅಪ್ಪಾರಾವ್ ವಕೀಲರು "ರಜಾಕಾರರ ಈ ಪರಿಯ ಹಾವಳಿಗೆ ಮೂಲ ಕಾರಣ ನಿಜಾಂ ಅವರ ಸ್ವಾರ್ಥವಾಗಿದೆ. ಇದರಲ್ಲಿ ಕಾಸೀಂ ರಜ್ವಿಯು ಸಹಾಯಕ ವ್ಯಕ್ತಿಯಾಗಿದ್ದಾನೆ. ಒಂದು ವೇಳೆ ನೀವು ಕ್ರಮ ಜರುಗಿಸುವುದಿದ್ದರೆ ಹೈದರಾಬಾದ ನಿಜಾಂ

ಅವರ ಮೇಲೆ ಕ್ರಮ ಜರುಗಿಸಿ ಕಾಸೀಂ ರಜ್ವಿಯ ಮೇಲಲ್ಲ" ಎಂದು ಅಪ್ಪರಾವ್ ವಕೀಲರು ಸರ್ಕಾರಕ್ಕೆ ವರದಿ ಕಳಿಸಿರುವುದು ಗಮನಾರ್ಹವಾಗಿದೆ.

*** ***

ಪೊಲೀಸ್ ಕಾರ್ಯಾಚರಣೆಯ ಹಿನ್ನೆಲೆಯಲ್ಲಿ ನಡೆದ ಅನೇಕ ಕಾರ್ಯಚಟುವಟಿಕೆಗಳು ಸುರಪುರದ ಮೇಲೂ ಪ್ರಭಾವ ಬೀರಿದವು. ಪ್ರಸ್ತುತ ಈ ಅಧ್ಯಾಯದಲ್ಲಿ ಹೋರಾಟಗಾರರನ್ನು ಸಂದರ್ಶಿಸುವುದರ ಮೂಲಕ ಮಾಹಿತಿಯನ್ನು ಕಲೆ ಹಾಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಸುರಪುರ ವಿಮೋಚನಾ ಹೋರಾಟದಲ್ಲಿ ಪೊಲೀಸ್ ಕಾರ್ಯಾಚರಣೆ ನಿರ್ವಹಿಸಿದ ಪಾತ್ರ ಪ್ರಮುಖವಾಗಿದೆ. ಈ ಪ್ರದೇಶದಲ್ಲಿ ಪ್ರತ್ಯೇಕವಾದ ಪೊಲೀಸ್ ಕಾರ್ಯಾಚರಣೆ ಜರುಗದೇ, ಬೇರೆ ಕಡೆಗಳಲ್ಲಿ ನಡೆದ ಪೊಲೀಸ್ ಕಾರ್ಯಾಚರಣೆಯ ಪ್ರಭಾವದಿಂದ ಈ ಭಾಗದಲ್ಲಿದ್ದ ನಿಜಾಂ ಅವರ ಪೊಲೀಸರು ಮತ್ತು ರಜಾಕಾರರು ಭಾರತದ ಸೈನ್ಯಕ್ಕೆ ಶರಣಾಗಿರುವುದು ಕಂಡುಬಂದಿದೆ. ೧೮ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ ಸಂಸ್ಥಾನ ಭಾರತದೊಂದಿಗೆ ವಿಲೀನವಾದ ಮೇಲೆ ಸುರಪುರ ಕೂಡ ರಜಾಕಾರ ನಿಜಾಂ ಸರ್ಕಾರದ ಆಳ್ವಿಕೆಯಿಂದ ಮುಕ್ತವಾಯಿತು.

ಹೈದರಾಬಾದ ಸಂಸ್ಥಾನದ ವಿಮೋಚನೆಗಾಗಿ ಗಡಿಶಿಬಿರಗಳ ಮೂಲಕ ಹೋರಾಟ ಕೈಗೊಂಡಿದ್ದ ಸುರಪುರದ ಹೋರಾಟಗಾರರು ಹೈದರಾಬಾದ ಸಂಸ್ಥಾನವು ಭಾರತದೊಂದಿಗೆ ವಿಲೀನಗೊಂಡಾಗ ತುಂಬಾ ಸಂತೋಷಪಟ್ಟರು. ಹೈದರಾಬಾದ ವಿಮೋಚನೆಯಾಗುವುದು ಇನ್ನು ಎರಡು ದಿನವಿತ್ತು. ತಾಳಿಕೋಟೆ ಶಿಬಿರದಲ್ಲಿದ್ದ ರಾಜಾ ವೆಂಕಟಪ್ಪನಾಯಕನ ಅಂಗರಕ್ಷಕರಾಗಿದ್ದ ತಿಮ್ಮಯ್ಯ ದರಬಾರಿಯವರು ಸುರಪುರವನ್ನು ಪ್ರವೇಶಿಸಿ ಅಲ್ಲಿಯ ಸಮಾಚಾರಗಳನ್ನು ತಿಳಿದುಕೊಂಡು ಬಂದು ಬ್ಯಾರಿಸ್ಟರ ರಾಜಾ ವೆಂಕಟಪ್ಪ ನಾಯಕರಿಗೆ ತಿಳಿಸಿದರು. ನಂತರ ಹೈದರಾಬಾದ ಸಂಸ್ಥಾನ ಭಾರತದೊಂದಿಗೆ ವಿಲೀನವಾದ ಮೇಲೆ ರಾಜಾ ವೆಂಕಟಪ್ಪ ನಾಯಕರ ನೇತೃತ್ವದಲ್ಲಿ ಎಲ್ಲ ಹೋರಾಟಗಾರರು ಸುರಪುರವನ್ನು ೨೪ ಸೆಪ್ಟೆಂಬರ್ ೧೯೪೮ರಂದು ಪ್ರವೇಶ ಮಾಡಿದರು. ಜನರು ಇವರೆಲ್ಲರನ್ನು ಆದರದಿಂದ ಅತ್ಯಂತ ಸಂಭ್ರಮದಿಂದ ಬರಮಾಡಿಕೊಂಡರು (ಸಂದರ್ಶನ; ಸೀತಾರಾಮನಾಯಕ ೨೮.೦೧.೨೦೦೬).

ಅಷ್ಟೊತ್ತಿಗೆ ಸುರಪುರದಲ್ಲಿ ನಿಜಾಂ ಅವರ ಖಾಸಗೀ ಸೈನ್ಯದ ರಜಾಕಾರರು ಮತ್ತು ಸುರಪುರದ ಮುಸ್ಲಿಂ ನಾಯಕ ಅಬ್ದುಲ್ ಖಾದರ ಎಂಬುವರು ಅಲ್ಲಿಂದ ಬೇರೆ ಕಡೆಗೆ ನಿರ್ಗಮಿಸಿದ್ದರು. ಈ ಸಂದರ್ಭದಲ್ಲಿ ಮುಸ್ಲಿಂ ಬಾಂಧವರಿಗೆ ಏನು ಆಗದಂತೆ ಹೋರಾಟಗಾರರು ಅವರನ್ನು ರಕ್ಷಣೆ ಮಾಡಲು ಮುಸ್ಲಿಂ ಓಣಿಯಲ್ಲಿ ಕಾವಲು ಕಾಯುತ್ತಿದ್ದರೆಂದು ತಿಮ್ಮಯ್ಯ ದರಬಾರಿಯವರು ಹೇಳಿದ್ದಾರೆ (ಸಂದರ್ಶನ ತಿಮ್ಮಯ್ಯ ದರಬಾರಿ ೦೫.೦೨.೨೦೦೬). ಪೊಲೀಸ್ ಕಾರ್ಯಾಚರಣೆಯಾದ ಆರಂಭದ ಸಂದರ್ಭದಲ್ಲಿ ರಜಾಕಾರರಿಂದ ಅನ್ಯಾಯಕ್ಕೆ ಒಳಗಾದ ಜನ ಸಮುದಾಯಗಳು ದ್ವೇಷದಿಂದ ಮುಸ್ಲಿಂರ ಮೇಲೆ ದಾಳಿ

ನಡೆಸಿದರು. ಕೆಲವು ಜನ ಮುಸ್ಲಿಂರು ಮಾಡಿದ ತಪ್ಪಿಗಾಗಿ ಇಡೀ ಮುಸ್ಲಿಂ ಸಮುದಾಯವೇ ಜನರ ದಾಳಿಗೆ ಒಳಗಾಗಬೇಕಾಯಿತು. ಪ್ರತೀಕಾರದ ಸಂದರ್ಭದಲ್ಲಿ ಹಿಂದೂ ಜನರು ಮುಸ್ಲಿಂರಿಗೆ ರಕ್ಷಣೆ ನೀಡಿರುವುದು, ಮುಸ್ಲಿಂರು ರಜಾಕಾರ ದಬ್ಬಾಳಿಕೆಯಿಂದ ಹಿಂದೂಗಳನ್ನು ರಕ್ಷಿಸಿರುವ ನಿದರ್ಶನಗಳು ಕೂಡ ಈ ಭಾಗದಲ್ಲಿ ಕಂಡುಬಂದಿದೆ ಎಂದು ನುಗಡೋಣಿಯವರು ಬರೆದಿರುವುದು ಗಮನಾರ್ಹವಾಗಿದೆ (ನುಗಡೋಣಿ ೨೦೦೩: ೬೨-೬೩).

ಹೀಗೆ ಪೊಲೀಸ್ ಕಾರ್ಯಾಚರಣೆಯು ಈ ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದೆ. ಈ ಕಾರ್ಯಾಚರಣೆಯಲ್ಲಿ ಭಾರತದ ಸೈನ್ಯ, ಸಾಮಾನ್ಯ ಜನರು ಮತ್ತು ಗಡಿ ಶಿಬಿರಗಳ ಮೂಲಕ ಹೋರಾಟ ನಡೆಸಿದ ಹೋರಾಟಗಾರರು ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸುವುದರ ಮೂಲಕ ಹೈದರಾಬಾದ ಸಂಸ್ಥಾನವನ್ನು ಭಾರತದೊಂದಿಗೆ ವಿಲೀನ ಮಾಡಿದ್ದಾರೆ. ಈ ಎಲ್ಲರ ಹೋರಾಟಗಳ ಫಲವಾಗಿ ಸುರಪುರ ಕೂಡಾ ವಿಮೋಚನೆಯಾಯಿತು. ವಿಮೋಚನಾ ಹೋರಾಟಗಾರರು ಪೊಲೀಸ್ ಕಾರ್ಯಾಚರಣೆಯಾದ ನಂತರ ಊರುಗಳನ್ನು ತೊರೆದು ಹೋಗಿರುವ ಜನರನ್ನು ಮರಳಿ ಊರಿಗೆ ಕರೆತರುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಬಹುತೇಕವಾಗಿ ಈ ಕಾರ್ಯಕ್ರಮವು ಯಶಸ್ವಿಯಾಯಿತು.

**ಟಿಪ್ಪಣಿಗಳು**

೧. ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ ಅವರು ಸುರಪುರ ಸಂಸ್ಥಾನದ ಮನೆತನದವರು. ಇವರು ಲಂಡನ್ನಿನಲ್ಲಿ ಬಾರ ಆ್ಯಟ್ ಲಾ ಪದವಿಯನ್ನು ಪಡೆದು ಹೈದರಾಬಾದ ನಿಜಾಂ ಅವರ ಶ್ರೇಷ್ಠ ನ್ಯಾಯಾಲಯದಲ್ಲಿ ವಕೀಲ ವೃತ್ತಿ ಮಾಡುತ್ತಿದ್ದರು. ನಿಜಾಂ ಅವರಿಂದ ರಜಾಕಾರ ಪಡೆಯ ನಾಯಕರಾದ ಕಾಸೀಂ ರಜ್ವಿ ನಿಜಾಂ ರಾಜ್ಯದ ಪ್ರಜೆಗಳ ಮೇಲೆ ದಬ್ಬಾಳಿಕೆ ನೀತಿಯನ್ನು ಅನುಸರಿಸಿದಾಗ ಅದರಿಂದ ಬೇಸರಗೊಂಡ ರಾಜಾ ವೆಂಕಟಪ್ಪನಾಯಕರು ತಮ್ಮ ವಕೀಲ ವೃತ್ತಿಯನ್ನು ಬಿಟ್ಟು ಹೈದರಾಬಾದ ವಿಮೋಚನಾ ಚಳುವಳಿಯ ನೇತೃತ್ವವನ್ನು ವಹಿಸಿದರು. ಜನರ ರಕ್ಷಣೆಗಾಗಿ ತಾಳಿಕೋಟೆಯಲ್ಲಿ 'ಶಿಬಿರವನ್ನು' ಪ್ರಾರಂಭಿಸಿದರು. ಈ ಶಿಬಿರದ ವ್ಯಾಪ್ತಿಯಲ್ಲಿ ಇನ್ನು ಮೂರು ಶಿಬಿರಗಳಿದ್ದವು. ಈ ಎಲ್ಲ ಶಿಬಿರಗಳಿಗೂ ರಾಜಾ ವೆಂಕಟಪ್ಪ ನಾಯಕರೇ ಶಿಬಿರಾಧಿಪತಿಗಳಾಗಿದ್ದರು. ಇವರು ಈ ಶಿಬಿರಗಳ ಶಿಬಿರಾರ್ಥಿಗಳಿಗೆ ನಿಜಾಂ ಸರ್ಕಾರದ ವಿರುದ್ಧ ರಜಾಕಾರರ ವಿರುದ್ಧ ಹೋರಾಡಲು ರೂಪರೇಷೆಗಳನ್ನು ಹಾಕಿಕೊಡುತ್ತಿದ್ದರು. ಹೀಗೆ ರಜಾಕಾರರ ವಿರುದ್ಧ ಹೋರಾಟ ಕೈಗೊಂಡ ಫಲವಾಗಿ ಪೊಲೀಸ್ ಕಾರ್ಯಾಚರಣೆ ಸರ್ದಾರ ಪಟೇಲರ ನೇತೃತ್ವದಲ್ಲಿ ಆರಂಭವಾಯಿತು. ಈ ಪೊಲೀಸ್ ಕಾರ್ಯಾಚರಣೆಗೆ ತಾಳಿಕೋಟೆ ಶಿಬಿರದ ಶಿಬಿರಾರ್ಥಿಗಳು ಸಹಾಯ ನೀಡಿದರು. ಈ ಕಾರ್ಯಾಚರಣೆ ಯಶಸ್ವಿಯಾಯಿತು. ಸುರಪುರ ಹೋರಾಟಗಾರರೆಲ್ಲರು ರಾಜಾ ವೆಂಕಟಪ್ಪನಾಯಕರ ನಾಯಕತ್ವದಲ್ಲಿ ೨೪ ಸೆಪ್ಟೆಂಬರ್ ೧೯೪೮ರಂದು ಸುರಪುರವನ್ನು ಪ್ರವೇಶಿಸಿದರು. ಹೀಗೆ ಸುರಪುರ ವಿಮೋಚನಾ ಹೋರಾಟದಲ್ಲಿ ರಾಜಾ ವೆಂಕಟಪ್ಪನಾಯಕರ ಪಾತ್ರ ಪ್ರಮುಖವಾಗಿದೆ (ತಿಮ್ಮಯ್ಯ ದರಬಾರಿ ೦೫.೦೭.೨೦೦೬).

೨. ರಜಾಕಾರರು ಎಂದರೆ 'ಸ್ವಯಂ ಸೇವಕರು' ಎಂದರ್ಥ. ಹೈದರಾಬಾದ ಸಂಸ್ಥಾನದಲ್ಲಿ ೧೯೧೧ರಲ್ಲಿ ಮೀರ ಉಸ್ಮಾನ ಅಲಿಖಾನರು ೭ನೇ ನಿಜಾಂರಾಗಿ ಅಧಿಕಾರಕ್ಕೆ ಬಂದರು. ಇವರ ಆಳ್ವಿಕೆಯಲ್ಲಿ ರಜಾಕಾರರು ಅಸ್ತಿತ್ವಕ್ಕೆ ಬಂದರು. ಇವರನ್ನು ಇಸ್ಲಾಂ ಧರ್ಮವನ್ನು ಸಂರಕ್ಷಿಸುವ ಸ್ವಯಂ ಸೇವಕರು ಎಂದು ಜನರು ತಿಳಿದುಕೊಂಡಿದ್ದರು. ಕಾಸಿಂರಜ್ವಿಯು ರಜಾಕಾರ ಎಂಬ ಒಂದು ಪಡೆಯನ್ನು ಹುಟ್ಟುಹಾಕಿದರು. ಮೊದಲಿನಿಂದಲೂ ಹೈದರಾಬಾದ ಸಂಸ್ಥಾನದಲ್ಲಿ ರಜಾಕಾರರ ಕಾರ್ಯಚಟುವಟಿಕೆಗಳು ಆರಂಭವಾಗಿದ್ದವು. ೧೯೪೭ರ ನಂತರ ಇವರ ಕಾರ್ಯಚಟುವಟಿಕೆಗಳು ಹಿಂಸಾತ್ಮಕವಾಗಿದ್ದವು. ಮುಗ್ಧ ಜನರ ಮೇಲೆ ನಡೆಸಿದ ಇವರ ದಬ್ಬಾಳಿಕೆಯು ಅತಿರೇಕಕ್ಕೆ ಹೋಗಿತ್ತು. ರಜಾಕಾರರಿಗೆ ಹೈದರಾಬಾದಿನ ನಿಜಾಂರು ಬೆಂಬಲ ನೀಡಿದ್ದರ ಫಲವಾಗಿ ಸಂಸ್ಥಾನದಲ್ಲಿ ನಿಜಾಂರು ಪ್ರಬಲರಾದರು. ನಿಜಾಂ ಮೀರ ಉಸ್ಮಾನ ಅಲೀಖಾನನೇ ರಜಾಕಾರರಿಗೆ ಹೆದರುವ ಪರಿಸ್ಥಿತಿ ಬಂದಿತು. ಕೊನೆಗೆ ರಜಾಕಾರರ ಹಿಂಸಾವೃತ್ತಿ ಬಹಳವಾದಾಗ ಜನರು ಇವರನ್ನು ಎದುರಿಸಲು ಶಿಬಿರಗಳನ್ನು ಸ್ಥಾಪನೆ ಮಾಡುವುದರ ಮೂಲಕ ಹೋರಾಟ ಕೈಗೊಂಡರು. ೧೯೪೮ರ ಸೆಪ್ಟೆಂಬರ್ ೧೩ರಿಂದ ೧೭ರವರೆಗೆ ನಡೆದ ಪೊಲೀಸ್ ಕಾರ್ಯಾಚರಣೆಯಿಂದ ರಜಾಕಾರರು ಭಾರತದ ಸೈನ್ಯಕ್ಕೆ ಶರಣಾದರು (ಪೊಲೀಸ್ ಪಾಟೀಲ ೨೦೦೨:೭೪).

೩. 'ಶಿಬಿರ'ಗಳನ್ನು ರಾಜ್ಯದ ಗಡಿಗಳಲ್ಲಿ ಸ್ಥಾಪನೆ ಮಾಡುತ್ತಿರುವುದರಿಂದ ಗಡಿಶಿಬಿರಗಳೆಂದು ಹೆಸರಾಗಿವೆ. ರಜಾಕಾರರು ನಡೆಸುವ ದಬ್ಬಾಳಿಕೆಯಿಂದ ರೋಸಿ ಹೋದ ಜನರು ರಜಾಕಾರರನ್ನು ಎದುರಿಸಲು ಸಶಸ್ತ್ರ ಹೋರಾಟವನ್ನು ಶಿಬಿರಗಳ ಮೂಲಕ ಕೈಗೊಂಡರು. ಶಿಬಿರಗಳ ಮೂಲಕ ಕೈಗೊಂಡ ಹೋರಾಟವು ನಿಜಾಂ ಸಂಸ್ಥಾನದ ವಿಮೋಚನಾ ಹೋರಾಟದ ಅಂತಿಮ ಮಜಲಾಗಿ ಪರಿಣಿಸಿತು. ಸುರುಪುರ ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದಂತೆ ನಾಲ್ಕು ಶಿಬಿರಗಳು ಸ್ಥಾಪನೆಯಾಗಿವೆ. ಅವುಗಳೆಂದರೆ ತಾಳಿಕೋಟೆ ಶಿಬಿರ, ನಾಗರಬೆಟ್ಟ ಶಿಬಿರ, ಸಾಲವಾಡಗಿ ಶಿಬಿರ, ಬಂಟನೂರ ಶಿಬಿರ ಈ ಎಲ್ಲ ಶಿಬಿರಗಳ ಮುಖ್ಯಕೇಂದ್ರ ತಾಳಿಕೋಟೆ ಶಿಬಿರವಾಗಿತ್ತು. ಈ ಶಿಬಿರದ ಶಿಬಿರಾಧಿಪತಿಗಳು ಬ್ಯಾರಿಸ್ಟರ ರಾಜಾ ವೆಂಕಟಪ್ಪನಾಯಕರಾಗಿದ್ದರು (ವೆಂಕನಗೌಡ ೦೪.೦೨.೨೦೦೬).

೬. ಪ್ರಸಿದ್ಧ ಉಪನ್ಯಾಸಕಾರ ಬಂಕಿಮಚಂದ್ರ ಚಟರ್ಜಿಯವರು ೧೮೮೨ರಲ್ಲಿ 'ಆನಂದ ಮಠ' ಕಾದಂಬರಿಯನ್ನು ರಚಿಸಿದರು. ಈ ಕಾದಂಬರಿಯಲ್ಲಿ 'ವಂದೇ ಮಾತರಂ' ಗೀತೆಯಿದೆ (ಲೋಖಂಡೆ ೨೦೦೪:೨೨೪). ವೇದ ಪುರಾಣಗಳಲ್ಲಿ, ಗೀತೆ ಉಪನಿಷತ್ತುಗಳಲ್ಲಿ ಬಂಕಿಮರಿಗೆ ಕಂಡಿದ್ದು ಒಂದೇ ದೇವರು ಮಾತೃಭೂಮಿ, ಅವೆಲ್ಲದರಲ್ಲಿ ಅವರು ಗುರುತಿಸಿದುದು ಒಂದೇ ಧರ್ಮ ಮಾತೃಭಕ್ತಿ. ಈ ಎಲ್ಲ ಭಾವನೆಗಳ ಮೂರ್ತರೂಪವೇ 'ವಂದೇ ಮಾತರಂ' ಗೀತೆಯಲ್ಲಿ ಅಡಗಿಕೊಂಡ ತತ್ವಕ್ಕೆ ಅನುಗುಣವಾಗಿ ನಾವು ಪೂಜಿಸುವ ಸಕಲ ದೇವತೆಗಳ ಸಮುಚ್ಚಯವೇ ಮಾತೃಭೂಮಿ ಎಂಬುದು ಈ ಗೀತೆಯಲ್ಲಿ ಅಡಕವಾಗಿರುವ ಅಂಶಗಳಾಗಿವೆ. (ರಾಮಸ್ವಾಮಿ ೧೯೯೭:೨೨೦).

೧೮೯೬ರಲ್ಲಿ ಪ್ರಥಮ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಅಧಿವೇಶನದಲ್ಲಿ ರವೀಂಧ್ರನಾಥ ಟ್ಯಾಗೋರರು ಈ ಗೀತೆಯನ್ನು ಹಾಡಿದರು. ೧೯೦೫ರ ಬಂಗಾಲದ ವಿಭಜನೆಯಲ್ಲಿ ಈ ಗೀತೆಯು ಜನರಲ್ಲಿ ರಾಷ್ಟ್ರೀಯ

ಜಾಗೃತಿಯನ್ನುಂಟು ಮಾಡಿತು. ೧೯೩೧ರಲ್ಲಿ ಮಹಾತ್ಮಾ ಗಾಂಧೀಜಿಯವರು 'ಹರಿಜನ' ಪತ್ರಿಕೆಯಲ್ಲಿ "ಈ ಗೀತೆಯು ನನ್ನನ್ನು ವಶೀಭೂತನನ್ನಾಗಿ ಮಾಡಿಬಿಟ್ಟಿದೆ" ಎಂದು ಬರೆದಿದ್ದಾರೆ. ೧೯೪೮ ಅಗಸ್ಟ್ ೧೫ರಂದು ಜವಾಹರಲಾಲ್ ನೆಹರು ಅವರು 'ಈ ಗೀತೆಯು ಸ್ವಾತಂತ್ರ್ಯ ಪಡೆಯುವುದರ ಸಂಘರ್ಷ ಸೂಚಕ ಹಾಗೂ ಈ ಗೀತೆಯ ಸ್ಥಾನವನ್ನು ಮತ್ತಾವ ಗೀತೆಯು ಆಕ್ರಮಿಸದು ಎಂದು ಹೇಳಿದ್ದಾರೆ (ಲೋಖಂಡೆ ೨೦೦೪: ೨೨೪).

ತ್ಯಾಗ, ಬಲಿದಾನಗಳನ್ನು ಪ್ರಚೋದಿಸುವ, ಉತ್ಕಟ ಭಾವನೆಯನ್ನು ರಾಷ್ಟ್ರಭಕ್ತಿಯೆಂದು ಕರೆಯುತ್ತಾರೆ. ದೇಶಭಕ್ತರು, ಕ್ರಾಂತಿಕಾರಿಗಳು ಮತ್ತು ಸ್ವಾತಂತ್ರ್ಯ ಹೋರಾಟಗಾರರು 'ವಂದೇ ಮಾತರಂ' ರಾಷ್ಟ್ರಗೀತೆಯಿಂದ ಸ್ಫೂರ್ತಿ ಪಡೆದು ಹೈದರಾಬಾದ ವಿಮೋಚನೆಯಲ್ಲಿ ಭಾಗವಹಿಸಿದ್ದಾರೆ. ಈ ಗೀತೆಯು ಹೈದರಾಬಾದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕರಿಗೆ ಪ್ರೇರಣೆದಾಯಕವಾಗಿತ್ತು (ಹೇಜೀಬ್ ೨೦೦೧:೧೬).

ವಂದೇ ಮಾತರಂ ಗೀತೆಯನ್ನು ಸತ್ಯಾಗ್ರಹಿಗಳು ಹಾಡುತ್ತಾ ಮೆರೆವಣಿಗೆ ಹೊರಡುತ್ತಿದ್ದರು. ಅವರು ಹಾಡುತ್ತಿದ್ದ ವಂದೇ ಮಾತರಂ ಹಾಡು ಈ ಕೆಳಗಿನಂತಿದೆ.

ಛೀನ್ ಸಕ್ತಿ ಹೈ ನಹಿಂ
ಸರ್ಕಾರ ವಂದೇ ಮಾತರಂ
ಹಮ್ ಗರಿಬೋಂಕಾ ಗಲೇ ಕಾ
ಹಾರ ವಂದೇ ಮಾತರಂ ||
ಹಾಥ ಮೇ ಬೇಡಿ ಗಲೇ ಮೇ
ಬೊಂಕ್ ದೇ ಸೂಲಿ ಚಡಾ
ಪರ್ ನ ಛೊಡೆಂಗೆ ಕಬೀ ಹಮ್
ಮಂತ್ರ ವಂದೇ ಮಾತರಂ ||
ಮಂತ್ರ ವಂದೇ ಮಾತರಂ ಹೈ
ತಂತ್ರ ವಂದೇ ಮಾತರಂ
ಹಮ್ ಗರೀ ಬೊಂಕಾ ಗಲೇ ಕಾ
ಹಾರ ವಂದೇ ಮಾತರಂ ||
ಛೀನ್ ಸಕ್ತಿ ಹೈ ನಹೀಂ
ಸರ್ಕಾರ ವಂದೇ ಮಾತರಂ
ಹಮ್ ಗರಿಬೋಂಕಾ ಗಲೇ ಕಾ
ಹಾರ್ ವಂದೇ ಮಾತರಂ ||
ಈ ಹಾಡಿನ ಕನ್ನಡ ರೂಪ
ಸರ್ಕಾರ ಕಸಿಯಲು ಸಾಧ್ಯಶವಾಗದು

ಇದೋ ವಂದೇ ಮಾತರಂ
ಬಡವರೆಲ್ಲರ ಕೊರಳ ಹಾರವು
ನಮ್ಮ ವಂದೇ ಮಾತರಂ ||
ಕೈಗೆ ಬೇಡಿ ಹಾಕಿ ಚೂರಿಯ
ಕತ್ತಿಗೆ, ನೇಣುಕಂಬಕ್ಕೆ ತೂಗಲಿ
ಆದರೂ ನಾವೆಂದಿಗೂ
ನಿಲ್ಲಿಸೆವು ವಂದೇ ಮಾತರಂ ||
ಮಂತ್ರ ವಂದೇ ಮಾತರಂ
ತಂತ್ರ ವಂದೇ ಮಾತರಂ
ಬಡವರೆಲ್ಲರ ಕೊರಳ ಹಾರವು
ನಮ್ಮ ವಂದೇ ಮಾತರಂ ||
ಸರ್ಕಾರ ಕಸಿಯಲು ಸಾಧ್ಯವಾಗದು
ನಮ್ಮ ವಂದೇ ಮಾತರಂ
ಮಂತ್ರ ವಂದೇ ಮಾತರಂ
ತಂತ್ರ ವಂದೇ ಮಾತರಂ (ಪಾಟೀಲ್ ೧೯೯೯:೨೬೨-೨೬೩)

ವಂದೇ ಮಾತರಂ ಚಳುವಳಿಗೆ ತಿಲಕ್, ಹರ್ಡೇಕರ ಮಂಜಪ್ಪ ಪಂಡಿತ ತಾರಾನಾಥರು 'ನ್ಯೂಯೋನಾಷನಾಲಿಸಂ', ಸತ್ಯಾಗ್ರಹ ಸಿದ್ಧಾಂತ ಮುಂತಾದ ಸೈದ್ಧಾಂತಿಕ ಕಾರ್ಯ ಸೂಚಿಗಳು ಸ್ಫೂರ್ತಿಯಾಗಿದ್ದವು. ವಂದೇ ಮಾತರಂ ಚಳುವಳಿಯು ಸ್ಟೇಟ್ ಕಾಂಗ್ರೇಸ್ ರಾಜಕೀಯ ಆಂದೋಲನದಿಂದ ಪ್ರೇರಣೆಗೊಂಡಿತು. ಗೋವಿಂದ ಸರಾಫರು ಈ ಚಳುವಳಿಯ ಜನಕರಾಗಿದ್ದರು. ಗೋವಿಂದ ಸರಾಫರು ನಿಜಾಂ ಸರ್ಕಾರದ ಪ್ರಧಾನ ಮಂತ್ರಿಯಾದ ಅಕಬರದ ಹೈದರಿಯವರಿಗೆ ಕೆಲವು ಸಲಹೆಗಳನ್ನು ಸೂಚಿಸಿದರು ಅವುಗಳೆಂದರೆ

೧. ವಂದೇ ಮಾತರಂ ಗೀತೆಯ ಮೇಲಿನ ನಿರ್ಬಂಧ ತೆಗೆದುಹಾಕಬೇಕು.

೨. ವಿಶ್ವವಿದ್ಯಾಲಯದ ಪ್ರಾರ್ಥನಾಗೃಹಗಳಲ್ಲಿ ವಂದೇ ಮಾತರಂ ಹಾಡಲು ಹಾಕಿರುವ ನಿರ್ಬಂಧವನ್ನು ನಿಷೇಧಿಸುವುದು.

೩. ಸಾಮಾಜಿಕ ಕಾರ್ಯಕ್ರಮಗಳಲ್ಲಿ ವಂದೇ ಮಾತರಂ ಗೀತೆ ಹಾಡಬೇಕು.

೪. ವಿದ್ಯಾರ್ಥಿಗಳ ಬೇರೆ ಬೇಡಿಕೆಗಳಿಗೂ ಸಹಾನುಭೂತಿಯಿಂದ ವಿಚಾರಿಸಬೇಕು.

ಸ್ವಾತಂತ್ರ್ಯ ಹೋರಾಟದ ಸಂಕೇತವಾದ ವಂದೇ ಮಾತರಂ ಚಳುವಳಿಯು ಕೆಲವೇ ದಿನಗಳಲ್ಲಿ ಇಡೀ ಹೈದರಾಬಾದ ಸಂಸ್ಥಾನದಾದ್ಯಂತ ಪಸರಿಸಿತು. ಪ್ರತಿಯೊಬ್ಬರ ಬಾಯಲ್ಲೂ 'ವಂದೇ ಮಾತರಂ' ಗೀತೆಯು ಜಪವಾಗಿ ಪರಿಣಮಿಸಿತು. ಈ ಚಳುವಳಿಯ ಕಾಡ್ಗಿಚ್ಚು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿಗೂ

ಹರಡಲು ಬಹಳ ಸಮಯಬೇಕಾಗಲಿಲ್ಲ. ಗುಲಬರ್ಗಾದ ಕಾಂಗ್ರೆಸ್ ಮುಖಂಡರಾದ ಜಗನ್ನಾಥ ಚಂಡ್ರಿಕಿ ಮತ್ತು ಇತರರು ಸುರಪುರಕ್ಕೆ ಮೇಲಿಂದ ಮೇಲೆ ಬಂದು ಹೋಗುತ್ತಿದ್ದರು. ಸುರಪುರದಲ್ಲಿ ಅನೇಕ ಸಭೆ ಸಮಾರಂಭಗಳನ್ನು ಏರ್ಪಡಿಸಿ ಜನರಲ್ಲಿ ರಾಷ್ಟ್ರಾಭಿಮಾನದ ಬಗ್ಗೆ ಗೌರವ ಮೂಡುವಂತೆ ಉಪನ್ಯಾಸಗಳನ್ನು ಹೇಳುತ್ತಿದ್ದರು. ಇಂತಹ ಸಭೆ ಸಮಾರಂಭಗಳನ್ನು ನಡೆಸುವ ಮೊದಲು 'ವಂದೇ ಮಾತರಂ' ಗೀತೆಯನ್ನು ಹೇಳುತ್ತಿದ್ದರು.

ಹೀಗೆ ಹೈದರಾಬಾದ ಸಂಸ್ಥಾನದ ವಿರುದ್ಧ ನಡೆದ ಹೋರಾಟದಲ್ಲಿ 'ವಂದೇ ಮಾತರಂ' ಪ್ರಮುಖ ಸ್ಥಾನ ಪಡೆದಿದೆ. ಈ ಚಳುವಳಿಯ ನಾಯಕತ್ವವನ್ನು ಗುಲಬರ್ಗಾ ಜಿಲ್ಲೆಯ ಹೋರಾಟಗಾರರು ವಹಿಸಿದ್ದರು. ನೂತನ ವಿದ್ಯಾಲಯದಿಂದ ವಿ.ಪಿ.ದೇವುಳಗಾಂವಕರ, ಕೇಶವರಾವ್, ದಿಗಂಬರರಾವ್ ಕಲ್ಮಣಕರ, ಕುಸುಮಾಕರ ದೇಸಾಯಿ ಮುಂತಾದವರು ಈ ಚಳುವಳಿಯ ನಾಯಕತ್ವ ವಹಿಸಿ ಸೆರೆಮನೆ ಸೇರಿದರು. ನೂತನ ವಿದ್ಯಾಲಯದಲ್ಲಿ 'ತಾಬದ ಖಾಲಿಕೇ' ಎಂಬ ಪ್ರಾರ್ಥನ ಗೀತೆಯ ಬದಲಾಗಿ ಅಲ್ಲಿಯ ಶಿಕ್ಷಕರು, ವಿದ್ಯಾರ್ಥಿಗಳು 'ಹೇ ಪ್ರಭು ಅನಂದದಾತಾ ಜ್ಞಾನ ಹಮ ಕೋ ದೀಜಿಯೇ' ಎಂಬ ಪ್ರಾರ್ಥನೆ ಹಾಡುತ್ತಿದ್ದರು.

೭. ಉಸ್ಮಾನಿಯಾ ವಿಶ್ವವಿದ್ಯಾಲಯವು ೧೯೩೬ರಲ್ಲಿ ನಿಜಾಂ ಸರ್ಕಾರ ಶಿಕ್ಷಣ ಸಂಸ್ಥೆ, ವಸತಿಗೃಹ ಸಾರ್ವಜನಿಕ ಸ್ಥಳಗಳಲ್ಲಿ ವಂದೇ ಮಾತರಂ ಹಾಡುವುದನ್ನು ನಿಷೇಧಿಸಿತು. ಉಸ್ಮಾನಿಯ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಮುಷ್ಕರ ಆರಂಭಿಸಿದರು. ೧೪ ನವೆಂಬರ್ ೧೯೩೮ ರಲ್ಲಿ ಔರಂಗಾಬಾದನ ಇಂಟರ್ ಮಿಡಿಯೆಟ್ ಕಾಲೇಜಿನ ವಿದ್ಯಾರ್ಥಿಗಳು ಸಾಮೂಹಿಕ ಮಾತೃವಂದನಾ ಪ್ರಾರ್ಥನೆ ಮಾಡಿದರು. ಶ್ರೀ ಗೋವಿಂದರಾವ್ ಸರಾಫ ಗುರುಗಳ ನೇತೃತ್ವದಲ್ಲಿ ವಿದ್ಯಾರ್ಥಿಗಳು 'ವಂದೇ ಮಾತರಂ' ಗೀತೆಯನ್ನು ಹಾಡಿದ್ದರಿಂದ ಕಾಲೇಜಿನಿಂದ ಇವರನ್ನು ಹೊರ ಹಾಕಿದರು. ಹೈದರಾಬಾದ ಸಂಸ್ಥಾನದ ಪ್ರಾಂತ್ಯದ ಗುಲಬರ್ಗಾ, ನಾಂದೇಡ, ವಾರಂಗಲ, ಬೀದರ ಮತ್ತು ಮಹಬೂಬನಗರ ಮುಂತಾದ ಪ್ರಾಂತ್ಯಗಳ ಕಾಲೇಜುಗಳಲ್ಲಿ ಚಳುವಳಿ ಉಗ್ರ ಸ್ವರೂಪದಿಂದ ಕೂಡಿತ್ತು. ಈ ಪರಿಸ್ಥಿತಿಯನ್ನು ಅರಿತ ಉಸ್ಮಾನಿಯಾ ವಿಶ್ವವಿದ್ಯಾಲಯದ ಅಧಿಕಾರಿಗಳು ಒಂದು ಸುತ್ತೋಲೆಯನ್ನು ಹೊರಡಿಸಿದರು. ಅದರ ಒಕ್ಕಣೆಯೆಂದರೆ "ವಿಶ್ವವಿದ್ಯಾಲಯವು ಒಂದು ಶಿಕ್ಷಣ ಸಂಸ್ಥೆಯಾಗಿರುವುದರಿಂದ ವಿದ್ಯಾರ್ಥಿಗಳು ರಾಜಕೀಯ ಮತ್ತು ವಿವಾದಾಸ್ಪದವಾದ ಹಾಡುಗಳನ್ನು ವಿಶ್ವವಿದ್ಯಾಲಯದ ಆವರಣದಲ್ಲಿ ಹಾಡತಕ್ಕದ್ದಲ್ಲ ಎಂದು ಬರೆಯಲಾಗಿತ್ತು. ಈ ರೀತಿ ಹೊರಹಾಕಲ್ಪಟ್ಟ ವಿದ್ಯಾರ್ಥಿಗಳಿಗೆ ಭಾರತದ ಯಾವುದೇ ವಿಶ್ವವಿದ್ಯಾಲಯದಲ್ಲಿ ಪ್ರವೇಶ ನೀಡಬಾರದೆಂದು ಆದೇಶ ನೀಡಿದರು. ಇಂತಹ ಸಮಯದಲ್ಲಿ ನಾಗಪುರ ವಿಶ್ವವಿದ್ಯಾಲಯದ ಕುಲಪತಿ ಕದಮರು ವಿದ್ಯಾರ್ಥಿಗಳಿಗೆ ತಮ್ಮ ವಿಶ್ವವಿದ್ಯಾಲಯದಲ್ಲಿ ಪ್ರವೇಶ ನೀಡಿದರು (ಬಾಲಚಂದ್ರ ೨೦೦೬:೩೮).

೮. ನಿಜಾಂ ಕರ್ನಾಟಕ ಪರಿಷತ್‌ನ ಅಧಿವೇಶನಗಳ ವಿವರಗಳು ಹೀಗಿವೆ.

೧. ಪಿ.ಕೇಶವರಾಯರು ರಾಯಚೂರಿನ ಪ್ರಸಿದ್ಧ ವಕೀಲರಾಗಿದ್ದರು. ಇವರ ಅಧ್ಯಕ್ಷತೆಯಲ್ಲಿ ಹೈದರಾಬಾದನಲ್ಲಿ ೨೨-೨-೧೯೩೭ ರಂದು ನಿಜಾಂ ಕರ್ನಾಟಕದ ಪ್ರಥಮ ಅಧಿವೇಶನ ನಡೆಯಿತು.

೨. ರಾಜ್ಯ ಕಾಂಗ್ರೆಸ್ಸಿನ ಕಾರ್ಯಕಾರಿ ಮಂಡಳಿಯ ಸದಸ್ಯರೂ ಆಗಿದ್ದು ಜನಾರ್ಧನರಾವ್ ದೇಸಾಯಿಯವರ ಅಧ್ಯಕ್ಷತೆಯಲ್ಲಿ ಬೀದರನಲ್ಲಿ ೨೫, ೨೬, ೨೭ ಜನವರಿ ೧೯೪೦ರಲ್ಲಿ ೭ನೇ ಅಧಿವೇಶನ ನಡೆಯಿತು. 'ಪರಿಷತ್ ನ ಗುರಿ ರಾಜಕೀಯ ಸ್ವಾತಂತ್ರ್ಯ' ಎಂಬುದನ್ನು ಒತ್ತಿ ಹೇಳಿದರು (ಮಹಾಬಲೇಶ್ವರಪ್ಪ ೧೯೯೨: ೫೮). ಈ ಸಮ್ಮೇಳನದಲ್ಲಿ ಬೀದರಿನ ಉಸ್ಮಾನಗಂಜ ಪ್ರದೇಶದಲ್ಲಿ ಅನೇಕ ವ್ಯಾಪಾರಿ ಮಳಿಗೆಗಳಿಗೆ ಬೆಂಕಿ ಹಚ್ಚಿ ಬೂದಿ ಮಾಡಿದ್ದರು. ಆದ್ದರಿಂದ ಗಾಂಧೀಜಿಯವರು ಈ ಘಟನೆಯನ್ನು 'ಲಂಕಾದಹನ' ಎಂದು ವಿಷಾದ ವ್ಯಕ್ತಪಡಿಸಿದರು (ಬಾಲಚಂದ್ರ ೨೦೦೬:೩೫).

೩. ಮೂರನೇ ಸಮ್ಮೇಳನ ಗುಲಬರ್ಗಾ ಜಿಲ್ಲೆಯ ಸುರಪುರದಲ್ಲಿ ೧೯೪೨ರಲ್ಲಿ ಮಾರ್ಚ್‌ದಲ್ಲಿ ನಡೆಯಿತು. ಇದರ ಅಧ್ಯಕ್ಷತೆಯನ್ನು ಅಣ್ಣಾರಾವ ಗಣಮುಖಿಯವರು ವಹಿಸಿಕೊಂಡಿದ್ದರು. ಈ ಅಧಿವೇಶನಕ್ಕೆ ಸುರಪುರದ ನಾಯಕರು ಮೊದಲು ಸಮ್ಮೇಳನಕ್ಕೆ ಸಹಕಾರ ನೀಡುವುದಾಗಿ ತಿಳಿಸಿದರು. ನಂತರ ಅರಮನೆಯ ಮುಂಭಾಗದ ಮೈದಾನದಲ್ಲಿ ಸಭಾಂಗಣ ನಿರ್ಮಿಸುವುದಕ್ಕು ಒಪ್ಪಲಿಲ್ಲ. ಏಕೆಂದರೆ ಆ ಸಮಯದಲ್ಲಿ ನಾಯಕರ ಮೇಲೆ ನಿಜಾಂ ಸರ್ಕಾರದ ರಾಜಕೀಯ ಒತ್ತಡ ಬಲವಾಗಿತ್ತು. ನಂತರ ನಾನಪ್ಪ ದೇಸಾಯಿಯವರ ನೇತೃತ್ವದಲ್ಲಿ ಸುರಪುರ ಆನಂದ ವಿದ್ಯಾಲಯದ ಆವರಣದಲ್ಲಿ ಈ ಅಧಿವೇಶನ ಏರ್ಪಡಿಸಲಾಯಿತು.

ಈ ಅಧಿವೇಶನ ಜಿಲ್ಲೆಯ ಯುವಕ ಹೋರಾಟಗಾರರ ಗಮನ ಸೆಳೆದು ಮೊದಲ ಬಾರಿಗೆ ಈ ಪ್ರಾಂತ್ಯದ ಹೋರಾಟಗಾರರು ಒಂದೇ ವೇದಿಕೆಯಲ್ಲಿ ಸೇರಲು ಸಹಾಯಕವಾಯಿತು. ಈ ಅಧಿವೇಶನವನ್ನು ವಿಫಲಗೊಳಿಸಲು ರಾಜಾಸಾಬ ಎಂಬುವವನ ನಾಯಕತ್ವದಲ್ಲಿ ಮುಸ್ಲಿಂ ಗುಂಡಾಗಳು ಒಡ್ಡಿದ ಕೋಮು ಆತಂಕಗಳು ಸಫಲವಾಗಲಿಲ್ಲ.

ಭಾರತದಾದ್ಯಂತ ಹರಡುತ್ತಿದ್ದ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಹಿನ್ನೆಲೆಯಲ್ಲಿ ರಾಷ್ಟ್ರೀಯತೆ ಭಾವನೆ ಜಾಗೃತವಾಗುತ್ತಿದ್ದ ಕಾಲದಲ್ಲಿ ನಡೆದ ಈ ಅಧಿವೇಶನವೂ ನಿಜಕ್ಕೂ ಪ್ರಾತಿನಿಧಿಕವಾಗಿತ್ತು. ಇಂತಹ ಉತ್ಸಾಹದ ವಾತಾವರಣದಲ್ಲಿ ಪರಿಷತ್ತು ಕನ್ನಡ ಶಾಲೆಗಳನ್ನು ತೆರೆಯಬೇಕು. ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಲು ಸಹಾಯಕವಾಗುವ ಸಂವಿಧಾನಾತ್ಮಕ ಸುಧಾರಣೆಯನ್ನು ಜಾರಿಗೊಳಿಸಲು ನಿಜಾಂನನ್ನು ಒತ್ತಾಯಿಸಲಾಯಿತು. ಹಿಂದೂ ಸಂಸ್ಕೃತಿ ಮತ್ತು ಪರಂಪರೆಗಳ ರಕ್ಷಣೆಗಾಗಿ ರಜಾಕಾರರ ದಬ್ಬಾಳಿಕೆಯನ್ನು ಹತ್ತಿಕ್ಕುವಂತೆ ಪರಿಷತ್ತಿನ ಅಧ್ಯಕ್ಷರು ಹಿಂದೂಗಳಿಗೆ ಕರೆ ನೀಡಿದರು. ಸುರಪುರದಲ್ಲಿ ನಡೆದ ಈ ಅಧಿವೇಶನದ ಕಾರ್ಯಕಲಾಪಗಳಲ್ಲಿ ೧೧೦೦ ಪ್ರತಿನಿಧಿಗಳು ಪಾಲ್ಗೊಂಡಿದ್ದರು (ಮಹಾಬಲೇಶ್ವರಪ್ಪ ೧೯೯೭:೫೯). ಈ ಅಧಿವೇಶನ ನಡೆದ ವರ್ಷದ ಬಗ್ಗೆ ಪುಸ್ತಕಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಮಹಾಬಲೇಶ್ವರ ೯-೩-೦೬ ಹೈದರಾಬಾದ ಕರ್ನಾಟಕ ವಿಶೇಷ ಪುರವಣಿಯಲ್ಲಿ ಈ ಅಧಿವೇಶನ ನಡೆದದ್ದು ೧೯೪೨ ಎಂದು ಪ್ರತಿಪಾದಿಸಿದರೆ ಇನ್ನುಳಿದ ಗ್ರಂಥಗಳಲ್ಲಿ, ೧೯೪೫ ಎಂದು ತಿಳಿದುಬರುತ್ತದೆ. ಹೋರಾಟಗಾರರಿಂದ ಈ ವರ್ಷದ ಬಗ್ಗೆ ಕೇಳಿದರೆ ಅವರಿಗೆ ಅಧಿವೇಶನ ನಡೆದ

ವರ್ಷದ ಬಗ್ಗೆ ನೆನಪೆಯಿಲ್ಲವೆಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ವರ್ಷದ ಬಗ್ಗೆಯಿರುವ ಗೊಂದಲವಾಗಿ ಇದೆ.

೪. ನಾಲ್ಕನೇ ಸಮ್ಮೇಳನ ೧೯೪೪ರಲ್ಲಿ ರಾಯಚೂರಿನಲ್ಲಿ ಕಕ್ಕೇರಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ವೇಳೆಗಾಗಲೇ ರಜಾಕಾರರ ಹಾವಳಿಯ ಜನರನ್ನು ಭೀತಿಯ ವಾತಾವರಣದಲ್ಲಿ ಇಟ್ಟಿತ್ತು.

೫. ಐದನೇ ಅಧಿವೇಶನವು ೧೯೪೭ರಲ್ಲಿ ಯಾದಗಿರಿಯಲ್ಲಿ ನಡೆಯಿತು.

ಪ್ರಸ್ತುತ ಅಧ್ಯಾಯದಲ್ಲಿ ವಿಮೋಚನಾ ಹೋರಾಟದ ವಿವಿಧ ನೆಲೆಗಳನ್ನು ಅಭ್ಯಾಸ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಮೂರು ಅಂಶಗಳನ್ನು ಪ್ರಮುಖವಾಗಿ ಅಭ್ಯಸಿಸಲಾಗಿದೆ. ಈ ಮೂರು ಅಂಶಗಳು ಪ್ರಧಾನವಾಗಿ ಸುರಪುರದ ವ್ಯಾಪ್ತಿಗೆ ಸಂಬಂಧಪಟ್ಟವುಗಳಾಗಿವೆ. ಹೀಗೆ ಈ ಮೂರು ಅಂಶಗಳು ವಿಮೋಚನಾ ಹೋರಾಟದಲ್ಲಿ ಯಾವ ರೀತಿಯಾಗಿ ಕಾರ್ಯನಿರ್ವಹಿಸಿವೆ ಎಂಬುದನ್ನು ಈ ಮೂಲಕ ಚರ್ಚಿಸಲಾಗಿದೆ. ಪತ್ರಿಕೆಗಳ ಪಾತ್ರ, ಗಡಿಶಿಬಿರಗಳ ಪಾತ್ರ ಮತ್ತು ಕನ್ನಡ ಸಾಹಿತ್ಯ ಸಂಘಗಳ ಪಾತ್ರ ಎಂಬ ಅಂಶಗಳನ್ನು ದೊರೆತಿರುವ ಮಾಹಿತಿಗಳ ಮೂಲಕ ಕಲೆ ಹಾಕಲಾಗಿದೆ.

## ೪.೧. ಪತ್ರಿಕೆಗಳ ಪಾತ್ರ

ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದಂತೆ ಹೋರಾಟದಲ್ಲಿ ಸುರಪುರ ಭಾಗದ ಪತ್ರಿಕೆಗಳು ಕಾರ್ಯನಿರ್ವಹಿಸಿದ ರೀತಿ ಪ್ರಮುಖವಾಗಿದೆ. ಸುರಪುರದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳು ಮತ್ತು ಸುರಪುರದ ಹೊರಗೆ ಪ್ರಕಟವಾಗುತ್ತಿದ್ದ ಪತ್ರಿಕೆಗಳು ಈ ಭಾಗದ ಜನರ ಮೇಲೆ ಬೀರಿದ ಪ್ರಭಾವ ಅಪಾರವಾಗಿದೆ. ಹೊರಗೆ ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ 'ಇಮರೋಜ್',[೧] 'ದಿ ಡೆಮೊಕ್ರಾಟ್',[೨] 'ಶಿಯಾಸತ್', 'ದಿ ಹಿಂದು' ಪತ್ರಿಕೆಗಳು ಪ್ರಮುಖವಾಗಿವೆ. ಅವುಗಳಲ್ಲಿ ಕನ್ನಡ ಪತ್ರಿಕೆಯಾದ ಸಂಯುಕ್ತ ಕರ್ನಾಟಕವು ಜನರ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದೆ. ಸುರಪುರದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ ಕನ್ನಡ ಭಾಷೆಯ ಎರಡು ಪತ್ರಿಕೆಗಳು, ಇಂಗ್ಲೀಷ್ ಭಾಷೆಯ ಒಂದು ಪತ್ರಿಕೆಯು ಪ್ರಮುಖವಾಗಿವೆ. ಅವುಗಳೆಂದರೆ 'ನೈಜಾಂ ನ್ಯಾಯ ತೀರ್ಪು', 'ಅರುಣ ಪತ್ರಿಕೆ' ಮತ್ತು 'ಸುರಪುರ ಸಮಾಚಾರ' ಪತ್ರಿಕೆಗಳಾಗಿವೆ.

ಪತ್ರಿಕೆಗಳು ಒಂದು ನಾಡಿನ, ಒಂದು ರಾಜ್ಯದ ಬೆಳವಣಿಗೆಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತವೆ. ಸಮಾಜದಲ್ಲಿ ನಡೆಯುತ್ತಿರುವ ಆಗುಹೋಗುಗಳ ಬಗ್ಗೆ ಸ್ಪಷ್ಟ ಚಿತ್ರಣವನ್ನು ಪತ್ರಿಕೆಗಳು ಕೊಡುತ್ತವೆ. ಅನ್ಯಾಯದ ವಿರುದ್ಧ ಹೋರಾಡುವ, ನ್ಯಾಯವನ್ನು ಪ್ರೋತ್ಸಾಹಿಸುವ ಕಲೆ ಪತ್ರಿಕೆಗಿದೆ. ಜನರಲ್ಲಿ ಜಾಗೃತಿಯನ್ನುಂಟು ಮಾಡಿ ಶೋಷಣೆ ವಿರುದ್ಧ ಪ್ರತಿಭಟಿಸಲು ಸಹಕಾರ ನೀಡುತ್ತದೆ. ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯದ ವಿರುದ್ಧ ದಂಗೆಯೆದ್ದ ಜನರು ತಮ್ಮ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ವ್ಯಕ್ತಪಡಿಸಲು ಪತ್ರಿಕೆಯೆಂಬ ಅಸ್ತ್ರವನ್ನು ಬಳಸಿದ್ದನ್ನು ನಾವು ಗಮನಿಸಬಹುದು.

ಹೈದರಾಬಾದ ಸಂಸ್ಥಾನದಲ್ಲಿ ನಿಜಾಂ ಅವರ ನಿರಂಕುಶ ಆಡಳಿತದ ವಿರುದ್ಧ ನಡೆದ ಹೋರಾಟದಲ್ಲಿ ವಿವಿಧ ಆಯಾಮಗಳು ನಿರ್ವಹಿಸಿದ ಪಾತ್ರ ಪ್ರಮುಖವಾಗಿದೆ. ಹೈದರಾಬಾದ ಸಂಸ್ಥಾನದಲ್ಲಿ ಆಡಳಿತ ಭಾಷೆ ಉರ್ದು ಆಗಿದ್ದರಿಂದ ಈ ಪ್ರಾಂತ್ಯದ ಜನರು ಉರ್ದು ಭಾಷೆಯ ಪ್ರಭುತ್ವಕ್ಕೊಳಗಾದರು. ಇದರಿಂದ ಪ್ರಾಂತೀಯ ಭಾಷೆಗಳಾದ ಮರಾಠಿ, ತೆಲುಗು, ಕನ್ನಡ ಭಾಷೆಗಳಿಗೆ ಭಾರಿ ಪೆಟ್ಟು ಬಿದ್ದಿತು. ಆರಂಭದಲ್ಲಿ ಪತ್ರಿಕೆಯಂತಹ ಮಾಧ್ಯಮಗಳು ಉರ್ದು ಭಾಷೆಯನ್ನು ಹೊರತುಪಡಿಸಿ ಬೇರೆ ಯಾವ ಭಾಷೆಯಲ್ಲಿಯು ಹೊರಬರಲಿಲ್ಲ.

ಪ್ರಸ್ತುತ ಅಧ್ಯಾಯಕ್ಕೆ ಸಂಬಂಧಿಸಿದಂತೆ ಸೂರ್ಯನಾಥ ಕಾಮತ್ ಮತ್ತು ದೇವರ ಕೊಂಡಾರೆಡ್ಡಿಯವರ 'ಇತಿಹಾಸ ದರ್ಶನ' ಸಂ-೮(೧೯೯೩), ಬಿ.ಸಿ.ಮಹಾಬಲೇಶ್ವರಪ್ಪನವರ 'ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು' (೧೯೯೭), ಎಂ.ಬಿ.ಪಾಟೀಲ್‌ರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭), ಅಮರೇಶ ನುಗಡೋಣಿಯವರ 'ರಾಯಚೂರ ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನೆ'(೨೦೦೦),ಬಸವರಾಜ ಪೋಲೀಸ್ ಪಾಟೀಲ್‌ರ 'ಬಿಡುಗಡೆ'(೨೦೦೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ' (೨೦೦೩), ನಾಗಪ್ಪ ತ್ರಿವೇದಿಯರ 'ವಜ್ರದೀಪ್ತಿ' (೨೦೦೪), ಚಂದ್ರಶೇಖರ ಲೋಖಂಡೆಯವರ 'ಹೈದರಾಬಾದ ಮುಕ್ತಿ ಸಂಗ್ರಾಮ ಕಾ ಇತಿಹಾಸ'(೨೦೦೪), ಟಿ.ಎಂ.ಭಾಸ್ಕರರ 'ಕಲಬುರ್ಗಿ ಜಿಲ್ಲಾ ದರ್ಶನ'(೨೦೦೫), ಮುಂತಾದ ಗ್ರಂಥಗಳನ್ನು ಅವಲೋಕನ ಮಾಡಲಾಗಿದೆ. ಇವುಗಳಲ್ಲದೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ನಿಬಂಧಗಳಾದ ಸುಭಾಸಚಂದ್ರ ದೊಡ್ಮನಿಯವರ 'ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨) ಎಂಬ ಎಂ.ಫಿಲ್.ನಿಬಂಧವನ್ನು ಅಧ್ಯಯನ ಮಾಡಿ 'ಅರುಣ' ಎಂಬ ಕೈಬರಹದ ಪತ್ರಿಕೆಯನ್ನು ಕೂಡಾ ಅವಲೋಕನ ಮಾಡುವುದರ ಮೂಲಕ ಕೆಲವು ಮುಖ್ಯ ಅಂಶಗಳನ್ನು ಮಾತ್ರ ಅಧ್ಯಯನದಲ್ಲಿ ಅಳವಡಿಸಲಾಗಿದೆ.

*****

ಹೈದರಾಬಾದಿನ ನಿಜಾಂ ಅವರು ತಮ್ಮ ಪರವಾಗಿ/ಸರ್ಕಾರದ ಪರವಾಗಿ ಬರೆಯುತ್ತಿದ್ದ ಪತ್ರಿಕೆಗಳಿಗೆ ಸಂಭಾವನೆ ಕೊಡುತ್ತಿದ್ದರು. ನಿಜಾಂ ಅವರ ಆಡಳಿತ ರೀತಿಯನ್ನು ಹೊಗಳುತ್ತಿದ್ದ ಪತ್ರಿಕೆಗಳ ಸಂಪಾದಕರಿಗೆ ನಿಜಾಂ ಆಸ್ಥಾನದಲ್ಲಿ ಭವ್ಯವಾದ ಸ್ವಾಗತ ನೀಡುತ್ತಿದ್ದರು. ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಜನತಾ ಆಂದೋಲನದ ಪರವಾಗಿ ಬರೆಯುತ್ತಿದ್ದ ಪತ್ರಿಕೆಗಳಿಗೆ ಕೋಮುವಾದಿಗಳೆಂದು ಕರೆದು ಆ ಪತ್ರಿಕೆಗಳ ಮೇಲೆ ನಿಜಾಂ ಅವರು ನಿಷೇಧ ಹೇರುತ್ತಿದ್ದರು ಎಂದು ಮಹಾಬಲೇಶ್ವರಪ್ಪ ಅಭಿಪ್ರಾಯಪಟ್ಟಿದ್ದಾರೆ (ಮಹಾಬಲೇಶ್ವರಪ್ಪ ೧೯೯೭:೭೧). ಈ ರೀತಿಯ ನಿಜಾಂ ಅವರ ದಮನಕಾರಿ ನೀತಿಯಿಂದಾಗಿ ಪತ್ರಿಕೆಗಳ ಸಂಖ್ಯೆ ಇಳಿಮುಖವಾಗಿದ್ದವು. ಪತ್ರಿಕೆಗಳ ಮುದ್ರಣಕ್ಕೆ ಬೇಕಾಗುವ ಕಾಗದವನ್ನಾಗಲಿ/ಮುದ್ರಣ

ಕಾರ್ಯಕ್ಕಾಗಲೀ ಅನುಮತಿ ಕೊಡುವಾಗ ಗೃಹಸಚಿವಾಲಯವು ತಾರತಮ್ಯ ನೀತಿಯನ್ನು ಅನುಸರಿಸುತ್ತಿತ್ತು. ಕನ್ನಡದ ಪತ್ರಿಕೆಗಳನ್ನು ಮೊದಲು ಪ್ರಕಟಿಸುತ್ತಿರದ ಕಾರಣ ಹೈದರಾಬಾದ ಸಂಸ್ಥಾನದ ಹೊರಗಿನಿಂದ ತರಿಸಿಕೊಳ್ಳುತ್ತಿದ್ದರು. ಪತ್ರಿಕೆಗಳನ್ನು ನಿಜಾಂ ಸರ್ಕಾರವು ಪರಿಶೀಲಿಸುತ್ತಿತ್ತು. ಸಾರ್ವಜನಿಕ ಅಭಿಪ್ರಾಯಗಳನ್ನು ಪ್ರಕಟಿಸುವುದಕ್ಕೆ ನಿಜಾಂ ಅವರ ಆಳ್ವಿಕೆಯಲ್ಲಿ ಅವಕಾಶವೇ ಇರಲಿಲ್ಲ. ಮುಂಬೈ ಪ್ರಾಂತ್ಯದಿಂದ ಪ್ರಕಟವಾಗುತ್ತಿದ್ದ Free Press Journal ಮತ್ತು ಮದ್ರಾಸ್ ಪ್ರಾಂತ್ಯದಿಂದ ಪ್ರಕಟವಾಗುತ್ತಿದ್ದ The Indian Express ಎಂಬ ಎರಡು ಇಂಗ್ಲೀಷ್ ಪತ್ರಿಕೆಗಳನ್ನು ನಿಜಾಂ ಸರ್ಕಾರ ನಿಷೇಧಿಸಿತು. ಈ ಪತ್ರಿಕೆಗಳ ಗುಂಪಿಗೆ 'ಸಂಯುಕ್ತ ಕರ್ನಾಟಕ' ಎಂಬ ಕನ್ನಡ ಪತ್ರಿಕೆಯು ಸೇರಿತ್ತು (ಪೊಲೀಸ್ ಪಾಟೀಲ ೨೦೦೨:೭೯). ಹೈದರಾಬಾದ ಸಂಸ್ಥಾನದ ವಿರುದ್ಧ ಕ್ರಾಂತಿಕಾರಿ ಲೇಖನಗಳನ್ನು ಬರೆದು ನಿಜಾಂ ಅವರ ಕೋಪಕ್ಕೆ ಗುರಿಯಾದ ಪತ್ರಿಕೆಗಳಲ್ಲಿ ಶೋಯಬುಲ್ಲಾಖಾನರ 'ಇಮರೋಜ್' ಪತ್ರಿಕೆ, ವಿ.ಎಚ್. ದೇಸಾಯಿಯವರ 'ದಿ ಡೆಮಾಕ್ರಾಟ' ಪತ್ರಿಕೆ ಪ್ರಮುಖವಾಗಿವೆ. ಕನ್ನಡದಲ್ಲಿ 'ಸಂಯುಕ್ತ ಕರ್ನಾಟಕ' ಈ ಮೂರು ಪತ್ರಿಕೆಗಳು ಈ ವಿಮೋಚನಾ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸುವುದರ ಜೊತೆಗೆ ಬೇರೆ ಪತ್ರಿಕೆಗಳು ಪ್ರಕಟವಾಗಲು ಪ್ರೇರಣೆ ನೀಡಿವೆ.

**ಸಂಯುಕ್ತ ಕರ್ನಾಟಕ**

ಸಂಯುಕ್ತ ಕರ್ನಾಟಕ ಈ ಪತ್ರಿಕೆ ಹುಬ್ಬಳ್ಳಿಯಲ್ಲಿ ಪ್ರಕಟವಾಗುತ್ತಿದ್ದರೂ, ಇದರ ಪ್ರಭಾವ ಸುರಪುರದ ಮೇಲೆ ಬಹಳಷ್ಟಿತ್ತು. ಭಾರತ ೧೯೪೭ ಆಗಸ್ಟ ೧೫ ರಂದು ಸ್ವಾತಂತ್ರ್ಯ ಪಡೆದರೂ, ಹೈದರಾಬಾದ ಸಂಸ್ಥಾನ ಸ್ವಾತಂತ್ರ್ಯವಾಗದೇ ಇರುವುದರಿಂದ ಈ ಪ್ರಾಂತ್ಯದ ಜನರು ಒಂದು ವರ್ಷಕ್ಕೂ ಹೆಚ್ಚು ಕಾಲ ಸ್ವಾತಂತ್ರ್ಯಕ್ಕಾಗಿ ಕಾಯಬೇಕಾಯಿತು. ಸ್ವತಂತ್ರ ಭಾರತ ಮತ್ತು ಏಕತ್ರ ಕರ್ನಾಟಕಗಳನ್ನು ತನ್ನ ಧ್ಯೇಯವಾಗಿಟ್ಟುಕೊಂಡು 'ಸಂಯುಕ್ತ ಕರ್ನಾಟಕ' ಪತ್ರಿಕೆಯು ಹೈದರಾಬಾದ ವಿಮೋಚನಾ ಹೋರಾಟಕ್ಕೆ ತನ್ನದೇ ಆದ ರೀತಿಯಲ್ಲಿ ವಿಶಿಷ್ಟವಾದ ಕಾಣಿಕೆ ನೀಡಿದೆ.

"ಹೈದರಾಬಾದ ಹಿಂದೂಸ್ಥಾನದಲ್ಲಿ ಸೇರಬೇಕು, ಇಲ್ಲದಿದ್ದರೆ ಸತ್ಯಾಗ್ರಹ' ಎಂದು ಕಾಂಗ್ರೆಸ್ಸಿನ ಪ್ರಥಮ ಅಧಿವೇಶನದಲ್ಲಿ ರಮಾನಂದ ತೀರ್ಥರ ಭಾಷಣವನ್ನು 'ಸಂಯುಕ್ತ ಕರ್ನಾಟಕ' ಪ್ರಕಟಿಸಿತು (ಪೊಲೀಸ್ ಪಾಟೀಲ ೨೦೦೨ :೨೫೫-೨೫೬). ಹೈದರಾಬಾದ ವಿಮೋಚನಾ ಹೋರಾಟದಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆ ನಿರ್ವಹಿಸಿದ ಕಾರ್ಯ ಅಪಾರ. ಈ ಪತ್ರಿಕೆಯು ನಿಜಾಂ ಸರ್ಕಾರಕ್ಕೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ಪ್ರಕಟಿಸುವುದರ ಮೂಲಕ ಜನರನ್ನು ಜಾಗೃತಗೊಳಿಸಿತು. ನಿಜಾಂ ಅವರ ವಿರುದ್ಧ ಉಗ್ರ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಜನರ ಮೆಚ್ಚುಗೆಗೆ ಪಾತ್ರವಾದ ಕನ್ನಡದ ಪತ್ರಿಕೆಗಳಲ್ಲಿಯೇ 'ಸಂಯುಕ್ತ ಕರ್ನಾಟಕ' ಪತ್ರಿಕೆ ಮೊದಲದಾಗಿದೆ. ಸಂಯುಕ್ತ ಕರ್ನಾಟಕವು ನಿಜಾಂ ಅವರ ಪ್ರತಿಯೊಂದು

ಆಡಳಿತದ ವಿವರವನ್ನು ಅದಕ್ಕೆ ಪೂರಕವಾಗಿ ಕೈಗೊಂಡ ಹೋರಾಟಗಾರರ ಕಾರ್ಯಚಟುವಟಿಕೆಗಳನ್ನು ಈ ಪತ್ರಿಕೆಯಲ್ಲಿ ಪ್ರಕಟಿಸುತ್ತಿತ್ತು.

ಹೈದರಾಬಾದಿನ ವಿಮೋಚನಾ ಹೋರಾಟದಲ್ಲಿ ಗುಲಬರ್ಗಾ ಪ್ರಾಂತ್ಯದ ಪತ್ರಿಕೆಗಳು ತಕ್ಕಮಟ್ಟಿಗೆ ಕಾರ್ಯನಿರ್ವಹಿಸಿವೆ. ಪ್ರಕಟಿತವಾದ ಪತ್ರಿಕೆಗಳನ್ನು ಗಮನಿಸಿದರೆ ವಿವಿಧ ರೀತಿಯ ಧೋರಣೆಗಳನ್ನು ಪ್ರತಿಪಾದಿಸುವ ಪತ್ರಿಕೆಗಳು ಹೊರಬಂದಿವೆ. ಕೆಲವು ಪತ್ರಿಕೆಗಳು ಭಾಷಾ ಪರವಾಗಿ, ಕೆಲವು ಧಾರ್ಮಿಕ ವಿಚಾರಗಳನ್ನು ಹೊಂದಿದ್ದರೆ ಇನ್ನು ಕೆಲವು ಸಾಮಾಜಿಕ ಸಮಸ್ಯೆಗಳಿಗೆ, ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ವಿವಿಧ ವಿಚಾರಗಳನ್ನು ಪ್ರತಿಪಾದಿಸಿದವು (ಭಾಸ್ಕರ್ ೨೦೦೫:೩೧).

ಗುಲಬರ್ಗಾ ಜಿಲ್ಲೆಯಲ್ಲಿ ಮೊಟ್ಟ ಮೊದಲ ಬಾರಿಗೆ ಮರಾಠಿ ಭಾಷೆಯಲ್ಲಿ ಪತ್ರಿಕೆಗಳು ಪ್ರಕಟವಾದವು. ೧೮೯೩ರಲ್ಲಿ "ಗುಲಬರ್ಗಾ ಸಮಾಚಾರ" ಈ ಜಿಲ್ಲೆಯ ಪ್ರಥಮ ಪತ್ರಿಕೆಯಾಗಿದೆ. ೧೯೦೧ರಲ್ಲಿ 'ಬೈರಖಾಹ್ ದಖಿನ್' ಈ ಎರಡು ಮರಾಠಿ ಪತ್ರಿಕೆಗಳು ಈ ಜಿಲ್ಲೆಯ ಪತ್ರಿಕಾ ರಂಗಕ್ಕೆ ನಾಂದಿ ಹಾಡಿದವು. ಇವುಗಳ ಮುಖ್ಯ ಧೋರಣೆ ಮರಾಠಿ ಭಾಷೆಯನ್ನು ಕನ್ನಡಿಗರ ಮೇಲೆ ಹೇರುವುದಾಗಿತ್ತು ಎಂದು ಭಾಸ್ಕರ ಅವರು ತಿಳಿಸಿದ್ದಾರೆ (ಭಾಸ್ಕರ್ ೨೦೦೫:೩೩). ಇದೇ ರೀತಿಯ ಧೋರಣೆಗಳನ್ನಿಟ್ಟುಕೊಂಡು ಉರ್ದು ಪತ್ರಿಕೆಗಳು ಪ್ರಕಟವಾದವು. ಉಸ್ಮಾನ ಸಹಾರಾಯಿಯವರ ಸಂಪಾದಕತ್ವದಲ್ಲಿ 'ಹಮದರ್ದ' ಮತ್ತು ಖಾಜಿಹಿಸಾಮುದ್ದಿನ ಸಂಪಾದಕತ್ವದಲ್ಲಿ 'ಗುಲಬರ್ಗಾ' ಎಂಬ ಈ ಎರಡು ಉರ್ದು ಪತ್ರಿಕೆಗಳು ಆರಂಭವಾದವು. ಉರ್ದು ಭಾಷೆಗಳ ಪ್ರಭಾವದಿಂದ ಹೊರಬರಲು ಕನ್ನಡ ಭಾಷೆ ಬಹಳ ವರ್ಷ ಕಾಯಬೇಕಾಯಿತು (ಭಾಸ್ಕರ್ ೨೦೦೫:೩೩).

ಈ ಮೇಲಿನ ಎರಡು ಭಾಷೆಯ ಪತ್ರಿಕೆಗಳ ಉದ್ದೇಶವನ್ನು ಗಮನಿಸಿದಾಗ ನಿಜಾಂ ಅವರ ಆಳ್ವಿಕೆಗೆ ಒಳಪಟ್ಟ ಪ್ರಾಂತ್ಯದಲ್ಲಿಯೇ ಪ್ರಕಟವಾದ ಈ ಪತ್ರಿಕೆಗಳಿಗೆ ಕನ್ನಡ ಭಾಷೆಯ ಮೇಲೆ ಯಾಕೆ ವಿರೋಧವಿತ್ತು? ಇಂತಹ ಸಮಯದಲ್ಲಿ ಕನ್ನಡಿಗರು ಯಾಕೆ ಪ್ರತಿರೋಧ ವ್ಯಕ್ತಪಡಿಸಲಿಲ್ಲ? ಎಂಬ ಪ್ರಶ್ನೆ ಉದ್ಭವಿಸುವದು ಸಹಜ. ಇದಕ್ಕೆ ಸಂಬಂಧಿಸಿದಂತೆ ನಿಜಾಂ ಸಂಸ್ಥಾನದ ವ್ಯಾಪ್ತಿಗೆ ಒಳಪಟ್ಟ ಪ್ರಾಂತ್ಯಗಳೆಂದರೆ ಮರಾಠವಾಡ ಎಂಬ ಮರಾಠಿ ಭಾಷೆ ಪ್ರಾಂತ್ಯ, ತೆಲಂಗಾಣ ಎಂಬ ತೆಲುಗು ಭಾಷೆಯ ಪ್ರಾಂತ್ಯಗಳು ಹಾಗೂ ಕನ್ನಡ ಭಾಷಿಕ ೩ ಪ್ರಾಂತ್ಯಗಳಿದ್ದವು. ಮರಾಠಿ ಭಾಷೆ ಮತ್ತು ತೆಲುಗು ಭಾಷೆ ಮಾತನಾಡುವ ಜನರು ಬಹುಸಂಖ್ಯಾತರಾಗಿದ್ದರು. ಕನ್ನಡ ಭಾಷೆ ಮಾತನ್ನಾಡುವ ಜನ ಅಲ್ಪಸಂಖ್ಯಾತರಾಗಿದ್ದರಿಂದ ಅನೇಕ ಬಾರಿ ಇವರನ್ನು ನಿಂದಿಸಿದುಂಟು. ನಿಜಾಂ ಅವರು ಉರ್ದುಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಮಾಡಿದ್ದರಿಂದ ಕನ್ನಡ ಭಾಷೆಯ ಮೇಲೆ ಅನೇಕ ರೀತಿಯ ನಿರ್ಬಂಧ ಹೇರಿದ್ದರಿಂದ ಕನ್ನಡ ಭಾಷೆ ಅಸ್ತಿತ್ವವನ್ನು ಕಳೆದುಕೊಳ್ಳುವ ಭೀತಿ ಕನ್ನಡಿಗರಲ್ಲಿತ್ತು.

ಭಾಷೆಯ ಮೇಲಿನ ದಬ್ಬಾಳಿಕೆ, ಒತ್ತಾಯಗಳ ವಿರುದ್ಧ ಜಾಗೃತಿ ಮೂಡಿಸುವ ಉದ್ದೇಶದಿಂದ ಕನ್ನಡ ಪತ್ರಿಕೆಗಳು ಹುಟ್ಟಿಕೊಂಡವು. ಕನ್ನಡದ ವಾತಾವರಣವೇ ಇರದ ಸಮಯದಲ್ಲಿ ಈ ಪ್ರಾಂತ್ಯದಲ್ಲಿ ಕನ್ನಡ ಪತ್ರಿಕೆಗಳು ಹುಟ್ಟಿರುವುದು ಅಚ್ಚರಿಯ ವಿಷಯವಾಗಿದೆ. ಏಕೆಂದರೆ ಇಲ್ಲಿ ವಾಸಿಸುವ ಜನರು ಮರಾಠಿ ಮತ್ತು ಉರ್ದು ಭಾಷೆಯನ್ನು ಕಲಿತು ನಿಜಾಂ ಆಡಳಿತದಲ್ಲಿ ಅನೇಕ ಉದ್ಯೋಗಾವಕಾಶಗಳನ್ನು ಹೊಂದಿದ್ದರು. ಕನ್ನಡ ಮಾತನಾಡಿದರೆ ಅವರ ಗೌರವ ಕಡಿಮೆಯಾಗುತ್ತದೆ ಎಂದು ತಿಳಿದುಕೊಳ್ಳುತ್ತಿದ್ದರು. ಇವುಗಳ ಮಧ್ಯದಲ್ಲಿ ಕನ್ನಡ ಭಾಷೆಯ ಪತ್ರಿಕೆಗಳನ್ನು ಪ್ರಕಟಿಸಿದ ಕೀರ್ತಿ ಈ ಭಾಗದ ಜನರಿಗೆ ಸಲ್ಲುತ್ತದೆ.

ಕಲಬುರ್ಗಿಯ ಜಿಲ್ಲೆಯ ಕನ್ನಡ ಪತ್ರಿಕೆಗಳ ಇತಿಹಾಸ ಸುರಪುರ ತಾಲೂಕಿನಿಂದ ಆರಂಭವಾಗುತ್ತದೆ (ಭಾಸ್ಕರ್ ೨೦೦೫:೩೩). ಈ ಭಾಗದ ಜನರ ವಾಚಾನಾಭಿರುಚಿಯನ್ನು ಮೂಡಿಸುವಲ್ಲಿ ಮಣೂರ ಜಯಾತೀರ್ಥಾಚಾರ್ಯರ[೩] ಕೊಡುಗೆಯು ಮಹತ್ವದ್ದಾಗಿದೆ. ಇವರು ಬೇರೆ ಊರಿನಿಂದ ವಾರಪತ್ರಿಕೆ ಮತ್ತು ದಿನ ಪತ್ರಿಕೆಗಳನ್ನು ತರಿಸಿ ಮನೆ ಮನೆಗಳಿಗೂ ತೆರಳಿ ಪತ್ರಿಕೆಗಳನ್ನು ಹಂಚಿ ಜನರ ವಾಚನಾಭಿರುಚಿಯನ್ನು ಹೆಚ್ಚಿಸಿದರು. ನಾನಪ್ಪ ದೇಸಾಯಿಯವರ[೪] ನೇತೃತ್ವದಲ್ಲಿ ಸುರಪುರದಲ್ಲಿ 'ಶಾರದಾ ವಾಚನಾಲಯ'ವು[೫] ಬಹಳಷ್ಟು ಅಭಿವೃದ್ಧಿ ಹೊಂದಿತು. ಅಂದಿನ ನಿಜಾಂ ಅವರ ದಬ್ಬಾಳಿಕೆಯ ವಿರುದ್ಧ 'ಕರ್ಮವೀರ', 'ಕರ್ನಾಟಕ ವೈಭವ', 'ಕನ್ನಡಿಗ' ಮೊದಲಾದ ಪತ್ರಿಕೆಗಳಿಗೆ ಲೇಖನಗಳನ್ನು ಶೇಷಶಾಸ್ತ್ರಿ ಹೆಬ್ಬಾಳರು ಬರೆಯುತ್ತಿದ್ದರು. ಅವುಗಳನ್ನು ಜಯತೀರ್ಥಚಾರ್ಯ ಮಣೂರ ಮತ್ತು ವೆಂಕೋಬರಾವ್ ಮುಜುಮದಾರರು ಬೇರೆ ಬೇರೆ ಹೆಸರುಗಳಿಂದ ಕಳುಹಿಸುತ್ತಿದ್ದರು. ಶಾರದಾ ವಾಚನಾಲಯದಿಂದ ಪ್ರತಿ ತಿಂಗಳು ಕೈಬರಹದ 'ಅಭ್ಯುದಯ' ಎಂಬ ಕೈಬರಹದ ಪತ್ರಿಕೆಯು ಪ್ರಕಟವಾಗುತ್ತಿತ್ತು. ಈ ಪತ್ರಿಕೆಯ ಬಗ್ಗೆ ವಿವರವಾದ ಮಾಹಿತಿಗಳು ಲಭ್ಯವಿಲ್ಲ (ಹೈದರಾಬಾದ ಕರ್ನಾಟಕ ವಿಶೇಷ ಪುರವಣಿ, ೯.೩.೨೦೦೬ : ೭).

### ೧. 'ನೈಜಾಂ ನ್ಯಾಯ ತೀರ್ಪು' ಪತ್ರಿಕೆ

ಕನ್ನಡ ಪತ್ರಿಕೆಗಳ ಕ್ಷೇತ್ರದಲ್ಲಿ ಮಹತ್ತರವಾದ ಸಾಧನೆಯನ್ನು ಮಾಡಿದವರೆಂದರೆ ಗುರಯ್ಯ ಸುಗೂರಮಠರು.[೬] ಗುರಯ್ಯನವರು ಸಂಸ್ಕೃತ, ಉರ್ದು, ಕನ್ನಡ, ಮರಾಠಿ ಭಾಷೆಗಳಲ್ಲಿ ನೈಪುಣ್ಯತೆಯನ್ನು ಹೊಂದಿದ್ದರು. ಸರ್ಕಾರಿ ನೌಕರಿ ಸೇರಿದ ನಂತರ ಇವರು 'ನೈಜಾಂ ನ್ಯಾಯ ತೀರ್ಪು' ಎಂಬ ಕನ್ನಡ ಮಾಸ ಪತ್ರಿಕೆಯನ್ನು ಹೊರ ತಂದರು. ೧೯೨೫ ರಿಂದ ೧೯೪೦ರವರೆಗೆ ಸುಮಾರು ೧೫ ವರ್ಷಗಳವರೆಗೆ ಈ ಪತ್ರಿಕೆಯನ್ನು ನಡೆಸಿದರು (ತ್ರಿವೇದಿ ೨೦೦೪: ೧೨೮). ಈ ಸಮಯದಲ್ಲಿ ಕರ್ನಾಟಕದಲ್ಲಿ ಕನ್ನಡ ಮುದ್ರಣಾಲಯ ಕೇವಲ ಬೆಂಗಳೂರಿನಲ್ಲಿ ಮಾತ್ರವಿತ್ತು. ಗುರಯ್ಯ ಸುಗೂರ ಮಠರವರು ಬೆಂಗಳೂರಿಗೆ

ಹೋಗಿ ಮುದ್ರಣ ಮಾಡಿಕೊಂಡು ತಂದು ಈ ಪತ್ರಿಕೆಯನ್ನು ಹಳ್ಳಿ ಹಳ್ಳಿಗೆ ಕಳುಹಿಸಿಕೊಡುತ್ತಿದ್ದರು. ಪತ್ರಿಕೆಯ ಹೆಸರೇ ಈ ಪತ್ರಿಕೆಯ ಉದ್ದೇಶವನ್ನು ತಿಳಿಸುತ್ತದೆ. ನಂತರ ಗುರಯ್ಯ ಸುಗೂರಮಠರವರು 'ನ್ಯಾಯಪ್ರಭ' ಎಂಬ ಇನ್ನೊಂದು ಮಾಸಿಕ ಪತ್ರಿಕೆಯನ್ನು ತಮ್ಮ ಸಹೋದರನ ಹೆಸರಿನ ಸಂಪಾದಕತ್ವದಲ್ಲಿ ಪ್ರಕಟಿಸುತ್ತಿದ್ದರು (ಭಾಸ್ಕರ ೨೦೦೫ : ೧೩೦). ನಿಜಾಂ ಸರ್ಕಾರ ನೀಡಿದ ನ್ಯಾಯಾಲಯದ ತೀರ್ಪುಗಳನ್ನು ಕುರಿತು ಈ ಎರಡು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ನಿಜಾಂ ಸರ್ಕಾರದ ನ್ಯಾಯ ವ್ಯವಸ್ಥೆ, ಆಡಳಿತ ನೀತಿ, ನ್ಯಾಯ ತೀರ್ಪು ಈ ಅಂಶಗಳನ್ನು ಪತ್ರಿಕೆಗಳ ಮೂಲಕ ಜನರ ಗಮನಕ್ಕೆ ತರುವಲ್ಲಿ ಮಹತ್ತರ ಕಾರ್ಯವನ್ನು ಈ ಪತ್ರಿಕೆಗಳು ನಿರ್ವಹಿಸಿವೆ. ಹೈದರಾಬಾದ ಕರ್ನಾಟಕ ಪ್ರಾಂತ್ಯದಲ್ಲಿ ಕನ್ನಡ ಭಾಷೆಗೆ ಮೆರಗುಕೊಟ್ಟು ಕನ್ನಡ ಭಾಷೆ ಆ ಕಾಲದಲ್ಲಿ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುವಂತೆ ಪ್ರಭಾವ ಬೀರಿದೆ. ಪ್ರಪ್ರಥಮವಾಗಿ ಸುರಪುರದ ಮಟ್ಟಿಗೆ ಕನ್ನಡ ಭಾಷೆಯಲ್ಲಿಯೇ ಪತ್ರಿಕೆಯನ್ನು ಪ್ರಕಟಿಸಿದ ಕೀರ್ತಿ ಗುರಯ್ಯ ಸುಗೂರಮಠರವರಿಗೆ ಸಲ್ಲುತ್ತದೆ.

### ೨. ಅರುಣ ಪತ್ರಿಕೆ

೧೯೪೩ರಲ್ಲಿ ಸುರಪುರ ತಾಲೂಕಿನ ಒಂದು ಭಾಗವಾದ ರಂಗಂಪೇಟೆಯಲ್ಲಿ ಕನ್ನಡಾಭಿಮಾನಿಗಳು ಮತ್ತು ಸಾಹಿತ್ಯ ಆಸಕ್ತರೂ ಕೂಡಿ ಕನ್ನಡ ಸಾಹಿತ್ಯ ಸಂಘವನ್ನು ಸ್ಥಾಪಿಸಿದರು. ಸಗರ ಕೃಷ್ಣಮಾಚಾರ್ಯ, ಬೋಡಾ ರಾಮಣ್ಣ, ಶ್ರೀನಿವಾಸಚಾರ್ಯ ಕೊಳ್ಳೂರು, ರುದ್ರಸ್ವಾಮಿ ಮತ್ತು ಬುದ್ಧಿವಂತ ಶೆಟ್ಟಿ ಮುಂತಾದ ಮಹನೀಯರು ಈ ಸಂಘವನ್ನು ಸ್ಥಾಪನೆ ಮಾಡಿದರು. ಉರ್ದುಮಯವಾಗಿದ್ದಂತಹ ಸಂದರ್ಭದಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಯ ರಕ್ಷಣೆಗಾಗಿ ಸಂಘಗಳನ್ನು ಕಟ್ಟಿದರು. ಈ ಸಮಯದಲ್ಲಿ 'ಅರುಣ' ಎಂಬ ಅಂಕಿತದ ತ್ರೈಮಾಸಿಕ ಕೈ ಬರಹದ ಪತ್ರಿಕೆ ಆರಂಭವಾಯಿತು. ಮಣೂರ ಜಯತೀರ್ಥಾಚಾರ್ಯರು ಮತ್ತು ರುದ್ರಸ್ವಾಮಿಯವರು ಈ ಪತ್ರಿಕೆಯ ಸಂಪಾದಕರಾಗಿದ್ದರು. ಸ್ಥಳೀಯ ಲೇಖಕರು ಹಾಗೂ ಕವಿಗಳಿಂದ ಉತ್ತಮ ಲೇಖನ ಮತ್ತು ಕವನಗಳನ್ನೂ ಸುಂದರ ಬರಹ ಹಾಗೂ ಚಿತ್ರಗಳಿಂದ ಅಲಂಕರಿಸಿ ಪ್ರಕಟಿಸುತ್ತಿದ್ದರು. ಈ ಪತ್ರಿಕೆ ೪ ವರ್ಷಗಳ ಕಾಲ ಮುಂದುವರೆಯಿತು. ಕನ್ನಡ ಭಾಷೆಯ ಪ್ರಸಾರಕ್ಕೆ, ಪ್ರಚಾರಕ್ಕೆ ಪ್ರಕಟವಾದ 'ಅರುಣಪತ್ರಿಕೆ' ಕನ್ನಡವು ಕನ್ನಡಿಗರ ಭಾಷೆಯನ್ನಾಗಿ ಮಾಡಿತು.

ಈ ಪತ್ರಿಕೆಯಲ್ಲಿ ಕೇವಲ ಕವನ, ಲೇಖನಗಳಲ್ಲದೆ, ನಿಜಾಂ ಆಡಳಿತದಲ್ಲಿ ಕನ್ನಡ ಭಾಷೆ ಯಾವ ಸ್ಥಾನದಲ್ಲಿತ್ತು, ನಿಜಾಂ ಸರ್ಕಾರದ ನಿರಂಕುಶಾಧಿಕಾರದ ವಿರುದ್ಧ ಉಗ್ರಲೇಖನಗಳನ್ನು ಬರೆಯುವುದರ ಮೂಲಕ ಜನರನ್ನು ಜಾಗೃತಗೊಳಿಸಲಾಯಿತು. ಈ ಪತ್ರಿಕೆಗಳು ಇಂದಿಗೂ ರಂಗಪೇಟೆಯ ಬುದ್ಧಿವಂತ ಶೆಟ್ಟಿ ಎಂಬುವರ ಮನೆಯಲ್ಲಿ ನೋಡಲು ಸಿಗುತ್ತವೆ. ಕನ್ನಡ ಸಾಹಿತ್ಯ ಸಂಘದ ಸ್ಥಾಪನೆಯ ಜೊತೆ, ಪತ್ರಿಕೆಗಳನ್ನು ಆರಂಭಿಸಿರುವುದು ಹೆಮ್ಮೆಯ ವಿಷಯವಾಗಿದೆ.

### ೩. 'ಸುರಪುರ ಸಮಾಚಾರ' ಪತ್ರಿಕೆ

ಕಾಂಗ್ರೆಸ್ ಸಂಘಟಕರಾದ ತಿರುಮಲರಾವ್ ದೇಸಾಯಿಯವರು ಸುರಪುರದ ತಾಲೂಕಾ ಆಫೀಸಿನಲ್ಲಿ ದ್ವಿತೀಯ ದರ್ಜೆಯ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತಿದ್ದರು. ಕಾಂಗ್ರೆಸ್ಸಿನ ಕಾರ್ಯಕರ್ತರಾಗಿದ್ದ ಗುಲಬರ್ಗಾದ ವಿ.ಪಿ.ದೇವುಳಗಾಂವಕರು ತಿರುಮಲರಾವ ದೇಸಾಯಿಯವರಿಗೆ ಹೈದರಾಬಾದ ಕರ್ನಾಟಕ ವಿಮೋಚನೆಗೆ ಸಂಬಂಧಿಸಿದಂತೆ ಕಾರ್ಯಚಟುವಟಿಕೆಗಳನ್ನು ಹೇಳಿಕೊಡುತ್ತಿದ್ದರು. ಇದರಿಂದ ತಿರುಮಲರಾವ ದೇಸಾಯಿಯವರು ನಿಜಾಂ ಸರ್ಕಾರದ ದುರಾಡಳಿತ, ರಜಾಕಾರರ ದಬ್ಬಾಳಿಕೆ, ಅನ್ಯಾಯವನ್ನು ಕುರಿತು ಸಾಮಾನ್ಯ ಜನರಿಗೆ ತಿಳುವಳಿಕೆಯನ್ನು ನೀಡಲು ಪತ್ರಿಕೆಯೆಂಬ ಪ್ರಬಲವಾದ ಅಸ್ತ್ರವನ್ನು ಬಳಸಿದರು. ಇವರು 'ಸುರಪುರ ಸಮಾಚಾರ' ಎಂಬ ಇಂಗ್ಲೀಷ್ ಪತ್ರಿಕೆಯನ್ನು ತಾಳಿಕೋಟೆಯಿಂದ ಮುದ್ರಿಸಿಕೊಂಡು ಬಂದು ಎಲ್ಲ ಹಳ್ಳಿಹಳ್ಳಿಗೂ ಹಂಚುತ್ತಿದ್ದರು (ಕುಷ್ಟಗಿ ೨೦೦೩:೧೭೫). ಈ ಪತ್ರಿಕೆಯಲ್ಲಿ 'ನಿಜಾಂ ಸರ್ಕಾರವು ಭಾರತದಲ್ಲಿ ವಿಲೀನವಾಗುವ ತನಕ ಚಳುವಳಿ ನಡೆಸಬೇಕು. ವಿಲೀನಕ್ಕಾಗಿ ಒತ್ತಾಯ ಮಾಡಬೇಕು. ಸರ್ಕಾರಿ ನೌಕರರು, ಶಾನುಭೋಗರು ರಾಜೀನಾಮೆ ನೀಡಬೇಕು. ಕರಗಳ ನಿರಾಕರಣೆ, ಸೇಂದಿ ಮರಗಳ ನಾಶ ಮಾಡುವುದು' ಎಂಬ ಈ ಅಂಶಗಳನ್ನು ಪತ್ರಿಕೆಯ ಮುಖ ಪುಟದಲ್ಲಿ ಮುದ್ರಿಸುತ್ತಿದ್ದರು (ಈಶ್ವರಯ್ಯ ೨೦೦೪:೧೭೫).

ಹೀಗೆ ಸುರಪುರದಲ್ಲಿ ಪ್ರಕಟವಾದ ಪತ್ರಿಕೆಗಳು ಈ ಭಾಗದ ಜನರನ್ನು ನಿಜಾಂ ಅವರ ನಿರಂಕುಶ ಆಡಳಿತ ವಿರುದ್ಧ ಎಚ್ಚೆತ್ತುಕೊಳ್ಳುವಂತೆ ಮಾಡಿದವು. ಈ ಪತ್ರಿಕೆಗಳಲ್ಲದೆ ಈ ಭಾಗದ ಜನರು ನಿಜಾಂ ಸರ್ಕಾರದ ಖಾಸಗೀ ಸೈನ್ಯವಾದ ರಜಾಕಾರರೊಡನೆ ಹೋರಾಟ ಕೈಗೊಂಡಿರುವ ಸಮಯದಲ್ಲಿ ಈ ಭಾಗದಲ್ಲಿ ಪತ್ರಿಕೆಗಳನ್ನು ಪ್ರಕಟಿಸುತ್ತಿರಲಿಲ್ಲ. ಆದ್ದರಿಂದ ಜನರು ಬೇರೆ ಬೇರೆ ಪ್ರದೇಶಗಳಿಂದ ಪತ್ರಿಕೆಗಳನ್ನು ತರಿಸಿಕೊಳ್ಳುತ್ತಿದ್ದರು. ಆ ಪತ್ರಿಕೆಗಳೆಂದರೆ 'ನಸ್ಟಿ' ಎಂಬ ಉರ್ದು ಪತ್ರಿಕೆ, ಹುಬ್ಬಳ್ಳಿಯಿಂದ 'ಸಂಯುಕ್ತ ಕರ್ನಾಟಕ', 'ತಾಯ್ನಾಡು' ಎಂಬ ಕನ್ನಡ ಪತ್ರಿಕೆ, 'ಹೈದರಾಬಾದ ಕರ್ನಾಟಕ', 'ಶಿಯಾಸತ್', 'ಇಮರೋಜ್', 'ದ ಹಿಂದು' ಪತ್ರಿಕೆಗಳು ಬರುತ್ತಿದ್ದವು (ಸಂದರ್ಶನ : ಮಹಾದೇವಪ್ಪಹೂಗಾರ ೨೬.೦೧.೨೦೦೬). ಈ ಪತ್ರಿಕೆಗಳು ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರವಹಿಸಿವೆ.

## ೪.೨. ಗಡಿಶಿಬಿರಗಳ ಪಾತ್ರ

ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಗಡಿಶಿಬಿರಗಳು ಸುರಪುರದ ವ್ಯಾಪ್ತಿಯಲ್ಲಿ ಬೀರಿರುವ ಪ್ರಭಾವವನ್ನು ಅಭ್ಯಾಸ ಮಾಡಲು ಪ್ರಯತ್ನಿಸಲಾಗಿದೆ. ಗಡಿ ಎಂದರೆ ಸೀಮೆ, ಎರಡು ಪ್ರದೇಶಗಳ ನಡುವೆ ಗುರ್ತಿಸಲ್ಪಡುವ ಜಾಗವಾಗಿದೆ. ಇಲ್ಲಿ ನಿಜಾಂ ಅವರ ಸೈನಿಕರು ಮತ್ತು ಅರೆಸೈನಿಕರು, ಹೋರಾಟಗಾರರು ಕೈಗೊಳ್ಳುವ ಕಾರ್ಯಚಟುವಟಿಕೆಗಳ ಕುರಿತಂತೆ ನಿಜಾಂ ಅವರಿಗೆ ಮಾಹಿತಿ ನೀಡುತ್ತಿದ್ದರು.

ನಿಜಾಂ ಅವರು ಅತ್ತ ಪಾಕಿಸ್ತಾನಕ್ಕೂ ಸೇರದೆ, ಇತ್ತ ಭಾರತಕ್ಕೂ ಸೇರದೆ ಸ್ವತಂತ್ರವಾಗಿರಬೇಕೆಂಬ ಮನೋಭಿಲಾಷೆ ಉಳ್ಳವರಾಗಿದ್ದರು. ಈ ಪ್ರದೇಶದ ವ್ಯಾಪ್ತಿಗೆ ಒಳಪಟ್ಟಂತಹ ಜನ ಹೈದರಾಬಾದ ಸಂಸ್ಥಾನವನ್ನು ಭಾರತದೊಂದಿಗೆ ವಿಲೀನಗೊಳಿಸಬೇಕೆನ್ನುವ ಮಹತ್ವಾಕಾಂಕ್ಷೆಯನ್ನು ಇಟ್ಟುಕೊಂಡಿದ್ದರು. ತನ್ನ ಆಧೀನದಲ್ಲಿರುವ ಜನರು ಎಲ್ಲಿ ತನ್ನ ವಿರುದ್ಧ ತಿರುಗಿಬೀಳುವರೋ ಎಂಬ ಭಯದಿಂದ ನಿಜಾಂ ಅವರು ತಮ್ಮ ಸೈನ್ಯವನ್ನು ಹೆಚ್ಚಾಗಿ ಗಡಿಯಲ್ಲಿ ನೇಮಿಸಿದ್ದರು. ಇದನ್ನರಿತ ಈ ಭಾಗದ ಹೋರಾಟಗಾರರು ಇಲ್ಲಿಯೇ ಇದ್ದು ಹೋರಾಟ ಮಾಡುವುದು ಅಸಾಧ್ಯವೆಂದು ತಿಳಿದು ಮುಂಬೈ ಕರ್ನಾಟಕದ ಗಡಿಪ್ರದೇಶಗಳಲ್ಲಿ ಶಿಬಿರಗಳನ್ನು ಸ್ಥಾಪನೆ ಮಾಡಿದರು. ಹೆಚ್ಚಾಗಿ ಶಿಬಿರಗಳನ್ನು ನಿಜಾಂ ರಾಜ್ಯದ ಗಡಿಗೆ ಅಂಟಿಕೊಂಡಿರುವ ಪ್ರದೇಶಗಳನ್ನು ತಮ್ಮ ಕೇಂದ್ರಗಳನ್ನಾಗಿ ಮಾಡಿಕೊಂಡು ನಿಜಾಂ ಸರ್ಕಾರದ ವಿರುದ್ಧ ಕಾರ್ಯಾಚರಣೆ ಮುಂದುವರಿಸಿದರು.

ಈ ವಿಷಯಕ್ಕೆ ಸಂಬಂಧಿಸಿದಂತೆ ಸೂರ್ಯನಾಥ ಕಾಮತರ 'ಸ್ವಾತಂತ್ರ್ಯ ಹೋರಾಟದ ಸ್ಮೃತಿಗಳು' ೨ ಮತ್ತು ೩(೧೯೭೭, ೧೯೮೦), ಬಿ.ಕೃಷ್ಣಮಾಚಾರ್ಯರ 'ಸ್ವಾತಂತ್ರ್ಯ ಹೋರಾಟಗಾರ ಶ್ರೀಕಾಂಗ್ರೆಸ್ ಬಸಣ್ಣನವರು'(೧೯೯೨) ಎಂ.ಬಿ.ಪಾಟೀಲರ 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್'(೧೯೯೭), ಬಿ.ಸಿ.ಮಹಾಬಲೇಶ್ವರಪ್ಪರವರ 'ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿ'(೧೯೯೭), ಎಚ್.ಎಸ್.ಪಾಟೀಲರ 'ವಿಮೋಚನೆ'(೧೯೯), ಅಮರೇಶ ನುಗಡೋಣಿಯವರ 'ರಾಯಚೂರ ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನ ಚಳುವಳಿ'(೨೦೦೦), ಬಸವರಾಜ ಪೋಲೀಸ್ ಪಾಟೀಲರ 'ಬಿಡುಗಡೆ'(೨೦೦೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ'(೨೦೦೩), ಟಿ.ಎಂ.ಭಾಸ್ಕರ 'ಕಲಬುರ್ಗಿ ಜಿಲ್ಲಾ ದರ್ಶನ'(೨೦೦೫), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ'(೨೦೦೭) ಈ ಮುಂತಾದ ಗ್ರಂಥಗಳನ್ನು ಅವಲೋಕನ ಮಾಡಲಾಗಿದೆ.

ಈ ಮೇಲಿನ ಪ್ರಕಟಿತ ಗ್ರಂಥಗಳಲ್ಲದೆ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧವಾದ ಉಷಾ ದೇಸಾಯಿಯವರ 'ಫ್ರೀಡಂ ಮೂವ್‌ಮೆಂಟ್ ಇನ್ ರಾಯಚೂರ್ ಡಿಸ್ಟ್ರಿಕ್ಟ್'(೧೯೯೪), ವೆಂಕಟರಾವ ಪಲಾತಿ ಅವರ 'ರೋಲ್ ಇನ್ ಫ್ರೀಡಂ ಫೈಟರ್ಸ ಇನ್ ಬೀದರ ಡಿಸ್ಟ್ರಿಕ್ಟ್' (೨೦೦೨), ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ನಿಬಂಧಗಳಾದ ಸುಭಾಸಚಂದ್ರ ದೊಡ್ಡನಿಯವರ 'ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ'(೨೦೦೨), ಶರಣಪ್ಪ ಉಮಚಗಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು'(೨೦೦೪) ಎಂಬ ನಿಬಂಧಗಳನ್ನು ಅಧ್ಯಯನದ ಜೊತೆ ಹೋರಾಟಗಾರರನ್ನು ಸಂದರ್ಶನ ಮಾಡುವ ಮೂಲಕ ವಿವರವಾದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

****

ನಿಜಾಂ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ನಿಜಾಂ ಅವರು ರಜಾಕಾರರ ಪಡೆಯನ್ನು ರಚಿಸಿದ್ದರು. ಇದರ ಬಗ್ಗೆ ಈಗಾಗಲೇ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ರಜಾಕಾರರ ದಬ್ಬಾಳಿಕೆಯನ್ನು ಪ್ರತಿಭಟಿಸುವ ಸಲುವಾಗಿ ಜನರು ಸಶಸ್ತ್ರ ಹೋರಾಟವನ್ನು ಕೈಗೊಂಡರು. ಗಡಿ ಶಿಬಿರಗಳ ಮೂಲಕ ಕೈಗೊಂಡ ಹೋರಾಟವು ನಿಜಾಂ ಸಂಸ್ಥಾನದ ವಿಮೋಚನಾ ಹೋರಾಟದ ಅಂತಿಮ ಮಜಲಾಗಿ ಪರಿಣಿಮಿಸಿತು. ಈ ಗಡಿಶಿಬಿರಗಳು ಮೂಲಕ ಹೋರಾಟಗಾರರು ನಿಜಾಂ ಅವರ ಸರ್ಕಾರದ ಗಮನಕ್ಕೆ ಬಾರದಂತೆ ಗುಪ್ತವಾಗಿ ಅನೇಕ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದರು.

ಹೈದರಾಬಾದ ಸಂಸ್ಥಾನದಾದ್ಯಂತ ೧೦೦ಕ್ಕೂ ಹೆಚ್ಚಿನ ಶಿಬಿರಗಳು ಸ್ಥಾಪನೆಯಾಗಿ ವಿಮೋಚನಾ ಹೋರಾಟದಲ್ಲಿ ಕಾರ್ಯನಿರ್ವಹಿಸಿವೆ. ಇವುಗಳಲ್ಲಿ ೩೦ ಶಿಬಿರಗಳನ್ನು ಹೈದರಾಬಾದ ಕರ್ನಾಟಕದ ಗಡಿ ಪ್ರದೇಶಗಳಲ್ಲಿ ಸ್ಥಾಪನೆ ಮಾಡಿದ್ದಾರೆ. ಅವುಗಳೆಂದರೆ ಸಿಂದಗಿ, ದುದನಿ, ಕೇಸರಜವಳಗಾ, ಗಜೇಂದ್ರಗಡ, ಮಂತ್ರಾಲಯ, ಕಂಪ್ಲಿ, ತಾಳಿಕೋಟೆ, ಕಕ್ಕಲಮೇಲಿ ಮತ್ತು ಇಟಗಿ ಹೀಗೆ ಮುಖ್ಯ ಶಿಬಿರಗಳ ಜೊತೆಗೆ ಉಪಶಿಬಿರಗಳು ಇದ್ದವು (ಮಹಾಬಲೇಶ್ವರಪ್ಪ ೧೯೯೭:೯೩). ಈ ಶಿಬಿರಗಳ ಹೋರಾಟಗಾರರು ಸಶಸ್ತ್ರರಾಗಿದ್ದರಲ್ಲದೆ, ಆಯುಧ ಹಾಗೂ ಚಿಕ್ಕ ಬಾಂಬುಗಳನ್ನು ತಯಾರಿಸುವ ತರಬೇತಿ ಹೊಂದಿದ್ದರು.

ಹೈದರಾಬಾದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಕಛೇರಿಯನ್ನು ಗರುಡ ಸದಾಶಿವರಾಯರು ಗದಗಿನಲ್ಲಿ ಸ್ಥಾಪಿಸಿದರು. ಜನಾರ್ಧನರಾವ್ ದೇಸಾಯಿಯವರು ಇದರ ಅಧ್ಯಕ್ಷರಾಗಿ ಗಡಿ ಚಳುವಳಿಯನ್ನು ನಿರ್ದೇಶಿಸುತ್ತಿದ್ದರು. ಇದೊಂದು ಸಮಾಚಾರ ಸಂಗ್ರಹಿಸುವ ಹಾಗೂ ಪ್ರಸಾರ ಮಾಡುವ ಕೇಂದ್ರವಾಗಿ ಕೆಲಸ ಮಾಡಿತು. ವಿವಿಧ ಗಡಿಶಿಬಿರಗಳಿಗೆ ಈ ಕಛೇರಿ ಮದ್ದುಗುಂಡು ಮತ್ತು ಶಸ್ತ್ರಾಸ್ತ್ರಗಳನ್ನು ಒದಗಿಸುತ್ತಿತ್ತು. ಗುಲಬರ್ಗಾ ಜಿಲ್ಲೆಯ ಉಸ್ತುವಾರಿ ಅಧಿಕಾರಿಯಾಗಿ ಕೊಲ್ಲೂರು ಮಲ್ಲಪ್ಪನವರನ್ನು ನೇಮಿಸಲಾಗಿತ್ತು. ಧೃಢಕಾಯರಾದ ಹಾಗೂ ಧೈರ್ಯಶಾಲಿಯಾದ ಕಾರ್ಯಕರ್ತರನ್ನು ಮಿಲಿಟರಿ ತರಬೇತಿಗಾಗಿ ಡೆಹರಾಡೂನ, ಪೂನಾ, ಸತಾರಾ, ವಾರಂಗಲ್ ಮತ್ತು ಬಿಜವಾಡ ಕೇಂದ್ರಗಳಿಗೆ ಕಳಿಸಿಕೊಡುತ್ತಿದ್ದರು (ಮಹಾಬಲೇಶ್ವರಪ್ಪ ೧೯೯೭:೯೦-೯೧). ಹೈದರಾಬಾದ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ಪ್ರತಿಯೊಂದು ಶಿಬಿರವು ಪ್ರಧಾನ ಕಛೇರಿ ಗದಗ, ಶಾಖಾ ಕಛೇರಿ ಬಿಜಾಪುರ-ಸೊಲ್ಲಾಪುರಗಳಿಂದ ಬಂದ ನಿರ್ದೇಶನಕ್ಕನುಗುಣವಾಗಿ ಕೆಲಸ ಮಾಡಬೇಕಾಗಿತ್ತು. ಈ ಗಡಿಶಿಬಿರಗಳ ನಿರ್ವಹಣೆಯ ಜವಾಬ್ದಾರಿಯನ್ನು ಜನಾರ್ಧನರಾವ್ ದೇಸಾಯಿ, ಕೊಲ್ಲೂರು, ಮಲ್ಲಪ್ಪ ಮತ್ತು ಜಿ.ಕೆ.ಪ್ರಾಣೇಶಾಚಾರ್ಯರು ಹೊಂದಿದ್ದರು (ಮಹಾಬಲೇಶ್ವರಪ್ಪ ೧೯೯೭:೯೫).

ಈ ಗಡಿಶಿಬಿರಗಳ ಮುಖ್ಯ ಕೆಲಸವೇನೆಂದರೆ

೧. ನಿಜಾಂ ಸರ್ಕಾರದ ಎಲ್ಲ ಬಗೆಯ ಆಡಳಿತದ ಕಾಯ್ದೆಗಳನ್ನು ಮುರಿಯುವುದು.

೨. ಸರ್ಕಾರದ ಕಾಗದ ಪತ್ರಗಳು ಅಂದರೆ ಗೌಡ, ಕುಲಕರ್ಣಿಯರ ದಪ್ತರಗಳನ್ನು ಸುಟ್ಟು ಹಾಕುವುದು.

೩. ಗಡಿಯಲ್ಲಿರುವ ಎಲ್ಲಾ ಸೇಂದಿ ಅಂಗಡಿಗಳನ್ನು ಮತ್ತು ಸೇಂದಿ ಗಿಡಗಳನ್ನು ನಾಶಮಾಡುವುದು

೪. ಲೇವಿ ಎತ್ತುವುದನ್ನು ಹಾಗೂ ವಸೂಲಿ ಮಾಡುವುದನ್ನು ನಿಲ್ಲಿಸುವುದು.

೫. ಕರೋಡಗಿರಿ ನಾಕಾಗಳನ್ನು ನಾಶಗೊಳಿಸಿ ಎಲ್ಲಾ ದಾಖಲೆಗಳನ್ನು ಸುಟ್ಟುಹಾಕುವುದು.

೬. ಜನರಿಗೆ ಹೈದರಾಬಾದ ವಿಮೋಚನೆಯ ಹೋರಾಟದ ಬಗ್ಗೆ ತಿಳುವಳಿಕೆ ಕೊಟ್ಟು ಅವರನ್ನು ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು.

೭. ನಿಜಾಂ ಸರ್ಕಾರದಲ್ಲಿ ಕೆಲಸ ಮಾಡುತ್ತಿರುವ ಹಿಂದೂಗಳನ್ನು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಮನ ಒಲಿಸುವುದು.

೮. ಗ್ರಾಮಗಳ ರಕ್ಷಣೆ ಮಾಡುವುದು.

೯. ರಜಾಕಾರರಿಂದ ಆಗುವ ಅನಾಹುತಗಳನ್ನು ತಡೆಯುವುದು ಶಿಬಿರಗಳ ಮುಖ್ಯ ಉದ್ದೇಶ (ಬಾಲಚಂದ್ರ ೨೦೦೬:೮೩-೮೪).

ಸುತ್ತಮುತ್ತ ಗ್ರಾಮಗಳನ್ನು, ಗ್ರಾಮದ ಜನರನ್ನು ರಜಾಕಾರರ ದಬ್ಬಾಳಿಕೆಯಿಂದ ರಕ್ಷಿಸುವುದಾಗಿತ್ತು. ಈ ಪ್ರಾಂತ್ಯವನ್ನು ನಿಜಾಂ ಅವರ ಆಳ್ವಿಕೆಯಿಂದ ಮುಕ್ತಗೊಳಿಸಿ ಭಾರತದೊಂದಿಗೆ ವಿಲೀನಗೊಳಿಸುವ ಗುರಿ ಹೊಂದಿತ್ತು. ಈ ಎಲ್ಲ ಶಿಬಿರಗಳ ಮೂಲ ಉದ್ದೇಶಗಳು ಒಂದೇಯಾಗಿದ್ದರೂ, ಪರಿಸ್ಥಿತಿಗೆ ಅನುಗುಣವಾಗಿ ಕಾರ್ಯಕ್ರಮಗಳಲ್ಲಿ ಶಿಬಿರಾಧಿಪತಿಗಳು ಬದಲಾವಣೆ ಮಾಡಿಕೊಳ್ಳುತ್ತಿದ್ದರು. ಪ್ರತಿಯೊಂದು ಶಿಬಿರಗಳಲ್ಲಿ ೨೫-೩೦ ಕಾರ್ಯಕರ್ತರು ಅಥವಾ ಸ್ವಯಂ ಸೇವಕರು ಇರುತ್ತಿದ್ದರು. ಗಡಿ ಶಿಬಿರಗಳಲ್ಲಿ ೩ ತೆರನಾದ ವಿಭಾಗಗಳಿರುತ್ತಿದ್ದವು (ಮಹಾಬಲೇಶ್ವರಪ್ಪ ೧೯೯೭:೮೩-೮೪). ಅವುಗಳೆಂದರೆ

ಸಶಸ್ತ್ರ ವಿಭಾಗ,[೭] ಗುಪ್ತಚಾರ ವಿಭಾಗ[೮] ಮತ್ತು ನಿಶಸ್ತ್ರ ವಿಭಾಗ[೯]. ಗಡಿ ಶಿಬಿರಗಳು ಅಕ್ಟೋಬರ್ ೧೯೪೭ರಲ್ಲಿ ಅಸ್ತಿತ್ವಕ್ಕೆ ಬಂದರೂ, ಸಹ ೧೯೪೮ ಜನವರಿಯಿಂದ ಪೋಲೀಸ್ ಕಾರ್ಯಾಚರಣೆಯವರೆಗೂ ಹೈದರಾಬಾದ ಸಂಸ್ಥಾನದ ವಿಲೀನ ಚಳುವಳಿಗಾಗಿ ಉಗ್ರಹೋರಾಟಗಳನ್ನು ವಹಿಸಿಕೊಂಡವು. ನಿಜಾಂ ಅವರ ಸಾರ್ವಭೌಮತ್ವವನ್ನು ಧಿಕ್ಕರಿಸಿ ಹೈದರಾಬಾದನ್ನು ವಿಲೀನಕ್ಕಾಗಿ ಕೈಗೊಂಡ ಚಳುವಳಿ ಸಂಪೂರ್ಣವಾಗಿ ಕ್ರಾಂತಿಕಾರಕವಾಗಿತ್ತು. ನಿಜಾಂ ಅವರ ಒಡೆದು ಆಳುವ ನೀತಿ, ಮಹ್ಮದ್‌ಅಲಿ ಜಿನ್ನಾ ಮತ್ತು ನಿಜಾಂ ಅವರ ನಡುವಿನ ಸಂಬಂಧ, ರಜಾಕಾರರ ಹಾವಳಿಯಿಂದ ಬೇಸತ್ತು ಹೋದ ಜನರು ಶಸ್ತ್ರಾಸ್ತ್ರಗಳ ಮೂಲಕ ಹೋರಾಟಕ್ಕಿಳಿದರು. ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದಂತೆ ಸಿಂದಗಿ ಶಿಬಿರ, ದುಧನಿ ಶಿಬಿರ, ವಾಗ್ಧರಗಿ ಶಿಬಿರ, ಕೇಸರಜವಳಗಾ ಶಿಬಿರ, ಗೌಡಗಾಂವ ಶಿಬಿರ ಮತ್ತು ತಾಳಿಕೋಟೆ ಶಿಬಿರ ಪ್ರಮುಖ

ಶಿಬಿರಗಳಾಗಿದ್ದವು (ಮಹಾಬಲೇಶ್ವರಪ್ಪ ೧೯೯೭: ೯೪). ಸಿಂದಗಿ ಶಿಬಿರವು ಗುಲಬರ್ಗಾದ ಪ್ರಮುಖ ಶಿಬಿರವಾಗಿತ್ತು. ಶಿಬಿರಗಳ ಹಾಗೂ ಅವುಗಳ ಮುಖ್ಯಸ್ಥರ ವಿವರಗಳು ಹೀಗಿವೆ.

| | | |
|---|---|---|
| ೧. ಸಿಂದಗಿ ಶಿಬಿರ | : | ಸರ್ದಾರ ಶರಣಗೌಡ ಇನಾಂದಾರ |
| ೨. ದುಧನಿ ಶಿಬಿರ | : | ಗುರು ಭೀಮರಾವ್ ಪಾಟೀಲ |
| ೩. ಗೌಡಗಾಂವ ಹಾಗೂ ಮಾದನ ಹಿಪ್ಪರಗಿ ಶಿಬಿರ | : | ಧರ್ಮವೀರ ನೆಲೋಗಿ, ಸಾಯಿಬಣ್ಣ |
| ೪. ಕೇಸರ ಜವಳಗಾ ಶಿಬಿರ | : | ದಿಗಂಬರರಾವ್ ಕಲ್ಮಣಕರ್ |
| ೫. ವಾಗಧಾರಿ ಶಿಬಿರ | : | ಅಣ್ಣಾರಾವ ವೀರಭದ್ರ ಪಾಟೀಲ್ |
| ೬. ತಾಳಿಕೋಟೆ ಶಿಬಿರ | : | ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ |

ಮಹಾದೇವಪ್ಪ ಹೂಗಾರ ಅವರೊಂದಿಗೆ ನಡೆಸಿದ ಸಂದರ್ಶನದಲ್ಲಿ ಅನೇಕ ವಿಷಯಗಳು ದೊರೆತಿವೆ. ಅವರ ಪ್ರಕಾರ, ಪ್ರತಿಯೊಂದು ಶಿಬಿರಗಳಲ್ಲಿ ಒಬ್ಬ ಶಿಬಿರಾಧಿಪತಿ, ದಳವಾಯಿ, ಕೋಶಾಧಿಪತಿ ಹಾಗೂ ಆಹಾರ ವ್ಯವಸ್ಥೆ ಮಾಡುವ ಕಾರ್ಯಕರ್ತರಿದ್ದರು. ಈ ಶಿಬಿರದ ಕಾರ್ಯಕರ್ತರಿಗೆ ಶಸ್ತ್ರಾಸ್ತ್ರಗಳ ತರಬೇತಿ ನೀಡಲು ಆಜಾದ ಹಿಂದ್ ಸೈನ್ಯದಲ್ಲಿದ್ದವರು ಬಂದಿದ್ದರು. ಶಿಬಿರಾಧಿಪತಿಗಳ ನಾಯಕತ್ವದಲ್ಲಿ ಅನೇಕ ಕಾರ್ಯಕರ್ತರು ಕೆಲಸ ಮಾಡಿದ್ದಾರೆ. ಈ ಶಿಬಿರದ ಕಾರ್ಯಕರ್ತರು ರಜಾಕಾರರ ಹಾವಳಿಯಿಂದ ಗ್ರಾಮಗಳನ್ನು ಸ್ವತಂತ್ರಗೊಳಿಸಿ ಗ್ರಾಮಗಳ ಆಡಳಿತವನ್ನು ತಾವೇ ವಹಿಸಿಕೊಂಡಿದ್ದಾರೆ. ನಿಜಾಂ ಅವರ ಪಡೆ ಮತ್ತು ಸ್ವಾತಂತ್ರ್ಯ ಯೋಧರ ನಡುವೆ ನಡೆದ ಈ ಸಶಸ್ತ್ರ ಹೋರಾಟವನ್ನು ಗಮನಿಸಿದಾಗ ಜನರು ತಮ್ಮ ಧಾರ್ಮಿಕ ಹಕ್ಕುಗಳಾಗಿ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಬೇಕಾಯಿತು (ಸಂದರ್ಶನ : ಮಹಾದೇವಪ್ಪ, ೨೬.೦೧.೨೦೦೬).

ರಾಜಾ ವೆಂಕಟಪ್ಪನಾಯಕ ಮತ್ತು ಅಪ್ಪಾರಾವ್ ವಕೀಲರ ಜೊತೆ ಈ ಶಿಬಿರದಲ್ಲಿ ತಿಮ್ಮಯ್ಯ ದರಬಾರಿ, ಹಣಮಂತರಾಯ ದರಬಾರಿ, ವೆಂಕನಗೌಡ ರಾಜನಕೋಳೂರು, ಚಂದ್ರಗುಪ್ತ ಗುರೂಜಿ, ಡಾ.ಜಿ.ಸುಬ್ಬಯ್ಯ, ಮಹಾದೇವಪ್ಪ ಹೂಗಾರ ಮತ್ತು ವಿರೂಪಾಕ್ಷಪ್ಪ ಗೌಡರು, ಸಂಗಪ್ಪ ಉದ್ದನ್ನ ಮತ್ತು ಅಚ್ಚಪ್ಪಗೌಡರು ಈ ಶಿಬಿರಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಇವರಲ್ಲದೆ ಈ ಶಿಬಿರದಲ್ಲಿ ಕೆಲವು ಮುಸ್ಲಿಂ ವ್ಯಕ್ತಿಗಳು ಇದ್ದರೆಂದು ಸಂದರ್ಶನಗಳ ಮೂಲಕ ತಿಳಿದುಬಂದಿದೆ. ಆದರೆ ಆ ಮುಸ್ಲಿಂ ವ್ಯಕ್ತಿಗಳ ಹೆಸರು ಎಲ್ಲೂ ಉಲ್ಲೇಖವಾಗಿಲ್ಲ. ಯಾರಿಗೆ ಯಾವ ಕೆಲಸಗಳನ್ನು ಕೊಡಬೇಕು, ಯಾರು ಯಾವ ಕೆಲಸಕ್ಕೆ ಯೋಗ್ಯರೆಂಬುದನ್ನು ಅರಿತುಕೊಂಡು ಶಿಬಿರಾಧಿಪತಿಗಳು ಅವರವರ ಯೋಗ್ಯತೆಗೆ ತಕ್ಕಂತೆ ಕೆಲಸ ಕೊಡುತ್ತಿದ್ದರು. ಚಂದ್ರಗುಪ್ತ ಗುರೂಜಿಯವರು ಬಿಜವಾಡದಿಂದ, ಅಪ್ಪಾರಾವ್ ವಕೀಲರು ದಿಲ್ಲಿಯಿಂದ

ಶಸ್ತ್ರಾಸ್ತ್ರಗಳ ಮತ್ತು ಬಂದೂಕು ಚಲಾಯಿಸುವ ತರಬೇತಿ ಪಡೆದುಕೊಂಡು ಬಂದಿದ್ದರು. ಈ ಶಿಬಿರದ ಕಾರ್ಯಕರ್ತರಿಗೆ ಶಸ್ತ್ರಾಸ್ತ್ರಗಳ ತರಬೇತಿಯನ್ನು ಅಪ್ಪಾರಾವ್ ವಕೀಲ ಮತ್ತು ಚಂದ್ರಗುಪ್ತ ಗುರೂಜಿಯವರು ಕೊಡುತ್ತಿದ್ದರು. ಇವರಲ್ಲಿದ್ದ ಶಸ್ತ್ರಾಸ್ತ್ರಗಳ ಸಂಖ್ಯೆ ತುಂಬಾ ಕಡಿಮೆ. ಕೈಬಾಂಬುಗಳಿಗಾಗಿ ಮದ್ದನ್ನು ಬಿಜಾಪುರದಿಂದ ತರಿಸಿಕೊಳ್ಳುತ್ತಿದ್ದರು. ಕೈಬಾಂಬುಗಳನ್ನು ವೆಂಕನಗೌಡರು ಮತ್ತು ವಿರುಪಾಕ್ಷಗೌಡರು ಸ್ವತಃ ಕೈಯಿಂದ ತಯಾರಿಸುತ್ತಿದ್ದರು (ಸಂದರ್ಶನ: ವೆಂಕನಗೌಡ ಮಾಲಿಪಾಟೀಲ, ೪.೦೨.೨೦೦೬).

ಈ ಶಿಬಿರವು ಶಸ್ತ್ರ ಸನ್ನದ್ಧವಾದ ೧೧ ಜನರ ೭ ತಂಡಗಳನ್ನು ಹೊಂದಿತ್ತು. ಈ ಶಿಬಿರವು ರಜಾಕಾರರಿಂದ ಹಲ್ಲೆಗೊಳಗಾದ ಜನರಿಗೆ ಆಶ್ರಯ ನೀಡುತ್ತಿತ್ತು. ರಜಾಕಾರರು ಹಳ್ಳಿಗಳ ಮೇಲೆ ದಾಳಿ ಮಾಡಿ ಜನರಿಂದ ವಸ್ತುಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಶಿಬಿರದ ಕಾರ್ಯಕರ್ತರು ಶಿಬಿರಾಧಿಪತಿಯ ಆಜ್ಞೆಯ ಮೇರೆಗೆ ರಜಾಕಾರರೊಡನೆ ಹೋರಾಡಿ ಅವರಿಂದ ವಸ್ತುಗಳನ್ನು ವಶಪಡಿಸಿಕೊಂಡು ಮರಳಿ ಜನರಿಗೆ ಕೊಡುತ್ತಿದ್ದರು. ಶಿಬಿರದ ೭ದಳಗಳಲ್ಲಿ ಒಂದು ದಳ ಹೈದರಾಬಾದ ನಿಜಾಂ ಅವರ ಪಡೆಯಿಂದ ಹತನಾದ ರಾಷ್ಟ್ರೀಯವಾದಿ ಕ್ರಾಂತಿಕಾರಿ ಶೋಯೆಬುಲ್ಲಾಖಾನರ ಸ್ಮಾರಕದಳವು ಇತ್ತು. ಈ ದಳದ ಮುಖಂಡರು ಬಸಪ್ಪ ಪಾಣಿಯವರಾಗಿದ್ದರು. ಈ ಶಿಬಿರಗಳಲ್ಲಿ ೩ ರೀತಿಯಾಗಿ ಕಾರ್ಯನಿರ್ವಹಿಸುವ ಕಾರ್ಯಕರ್ತರಿದ್ದರು. ಅವರೆಂದರೆ, ಸುದ್ದಿ ಸಮಾಚಾರಗಳನ್ನು ಸಂಗ್ರಹಿಸುವವರು, ಹೋರಾಟ ನಡೆಸುವ ಜನ ಮತ್ತು ಅಡುಗೆ ಕೆಲಸ ಮಾಡುವ ಜನರಿದ್ದರು. ಈ ಪ್ರಕಾರದ ಕಾರ್ಯಕ್ರಮಗಳನ್ನು ಶಿಬಿರಾಧಿಪತಿಗಳು ಶಿಬಿರಾರ್ಥಿಗಳಿಗೆ ವಹಿಸಿದ್ದರು (ಸಂದರ್ಶನ: ಸಂಗಪ್ಪ ಉದ್ದನ್ನ, ೨೬.೦೨.೨೦೦೬).

ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಸುರಪುರದ ವ್ಯಾಪ್ತಿಯಲ್ಲಿ ಬರುವ ೪ ಶಿಬಿರಗಳನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಶಿಬಿರಗಳು ಸುರಪುರ ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿವೆ. ಈ ಎಲ್ಲ ಶಿಬಿರಗಳಿಗಿಂತ ತಾಳಿಕೋಟೆ ಶಿಬಿರವು ಪ್ರಮುಖವಾಗಿವೆ. ಇದರ ಅಧೀನದಲ್ಲಿ ಉಳಿದ ೩ ಶಿಬಿರಗಳು ಕಾರ್ಯನಿರ್ವಹಿಸುತ್ತಿದ್ದವು. ಅವುಗಳೆಂದರೆ ನಾಗರಬೆಟ್ಟ ಶಿಬಿರ, ಸಾಲವಾಡಗಿ ಶಿಬಿರ ಮತ್ತು ಬಂಟನೂರ ಶಿಬಿರ.

ಈ ನಾಲ್ಕು ಶಿಬಿರಗಳು ಮುಂಬೈ ಸರ್ಕಾರದ ಅಧಿನದಲ್ಲಿದ್ದ ಪ್ರದೇಶಗಳಾಗಿವೆ. ಇಂದಿನ ಬಿಜಾಪುರ ಜಿಲ್ಲೆಯಲ್ಲಿ ಈ ನಾಲ್ಕು ಪ್ರದೇಶಗಳು ಕಂಡುಬರುತ್ತವೆ. ಈ ಎಲ್ಲ ಶಿಬಿರಗಳನ್ನು ಈ ಭಾಗದಲ್ಲಿ ಸ್ಥಾಪಿಸಿದ ಉದ್ದೇಶವೆನೆಂದರೆ ಈ ಪ್ರದೇಶಗಳು ಆಂಗ್ಲರ ವಶದಲ್ಲಿದ್ದು ಸ್ವತಂತ್ರ ಭಾರತದ ಪ್ರದೇಶಗಳಾಗಿದ್ದವು. ಈ ಪ್ರದೇಶಗಳಲ್ಲಿ ರಜಾಕಾರರ ಮತ್ತು ನಿಜಾಂ ಅವರ ಸೈನ್ಯದ ಅಂಜಿಕೆಯಿರಲಿಲ್ಲ. ಈ ಪ್ರದೇಶಗಳನ್ನು ಭಾರತೀಯ ಸೈನಿಕರು ರಕ್ಷಣೆ ಮಾಡುತ್ತಿದ್ದರು. ಆದ್ದರಿಂದ ನಿಜಾಂ ಅವರ ವಿರುದ್ಧ ಹೋರಾಟ ಕೈಗೊಳ್ಳಲು ಈ ಪ್ರದೇಶಗಳು ಸೂಕ್ತವಾಗಿದ್ದರಿಂದ ಈ ಪ್ರದೇಶಗಳಲ್ಲಿ ಶಿಬಿರಗಳನ್ನು ಸ್ಥಾಪನೆ

ಮಾಡಿದರು. ಬೇರೆ ಬೇರೆ ಶಿಬಿರಗಳಲ್ಲಿ ಭಾಗವಹಿಸಿದವರ ಪಟ್ಟಿ ಈ ರೀತಿ ಇದೆ. ಕೆಲವರು ಒಂದಕ್ಕಿಂತ ಹೆಚ್ಚು ಶಿಬಿರಗಳಲ್ಲಿ ಕೆಲಸ ಮಾಡುತ್ತಿದ್ದದ್ದನ್ನು ನಾವು ಗಮನಿಸಬಹುದು.

೧. **ತಾಳಿಕೋಟೆ ಶಿಬಿರ** : ಶಿಬಿರಾಧಿಪತಿಗಳು ಬ್ಯಾರಿಸ್ಟರ ರಾಜಾ ವೆಂಕಟಪ್ಪನಾಯಕರು, ಅಪ್ಪಾರಾವ ವಕೀಲ, ತಿಮ್ಮಯ್ಯ ದರಬಾರಿ, ಹಣಮಂತರಾಯ ದರಬಾರಿ, ಪರುತರೆಡ್ಡಿ ರೊಟ್ನಡಗಿ, ನಾಗೇಂದ್ರಪ್ಪ,. ನಿಂಗಣ್ಣ, ವೆಂಕನಗೌಡ, ಮಹಾದೇವಪ್ಪ ಹೂಗಾರ, ಡಾ.ಜಿ.ಸುಬ್ಬಯ್ಯ ಮುಂತಾದವರು.

೨. **ನಾಗರಬೆಟ್ಟ ಶಿಬಿರ** : ಶಿಬಿರಾಧಿಪತಿಗಳು ರಾಜಾ ವೆಂಕಟಪ್ಪನಾಯಕರಾಗಿದ್ದರು. ವೆಂಕನಗೌಡ, ಸಂಗಪ್ಪ ಉದ್ದನ್ನ, ಬಸವಂತ್ರಾಯಗೌಡ ಮುಂತಾದವರು.

೩. **ಬಂಟನೂರ ಶಿಬಿರ** : ಶಿಬಿರಾಧಿಪತಿಗಳು ರಾಜನಕೋಳೂರಿನ ವಿರುಪಾಕ್ಷಪ್ಪಗೌಡರಾಗಿದ್ದಾರೆ. ಇವರ ಮರಣದ ನಂತರ ರಾಜಾ ವೆಂಕಟಪ್ಪ ನಾಯಕರು ಈ ಶಿಬಿರದ ಶಿಬಿರಾಧಿಪತಿಗಳಾದರು. ಅಚ್ಚಪ್ಪಗೌಡ, ನಿಂಗಣ್ಣ ರೊಟ್ನಡಗಿ, ಮಹಾಂತಪ್ಪಗೌಡ, ಬಸವಂತರಾಯಗೌಡ ಮುಂತಾದವರು.

೪. **ಸಾಲವಾಡಗಿ ಶಿಬಿರ** : ಶಿಬಿರಾಧಿಪತಿಗಳು ವಿರುಪಾಕ್ಷಪ್ಪಗೌಡರು. ಬಸವಂತ್ರಾಯ, ಮಹಾಂತಪ್ಪ ಸಂಗಪ್ಪ ಉದ್ದನ್ನ, ಮಲ್ಲಪ್ಪ ವಜ್ಜಲ, ವೆಂಕಪ್ಪ ಗುರಿಕಾರ, ನಿಂಗನಗೌಡ ಗುಳಬಾಳ, ರಾಯಪ್ಪಮಾಸ್ತರ, ಬಸವಂತರಾಯ ದ್ಯಾಮನಾಳ ಮುಂತಾದವರು.

ಈ ಎಲ್ಲ ಶಿಬಿರಗಳು ರಾಜಾ ವೆಂಕಟಪ್ಪನಾಯಕರ ನೇತೃತ್ವದಲ್ಲಿ ಕಾರ್ಯನಿರ್ವಹಿಸು ತ್ತಿದ್ದವು. ಈ ನಾಲ್ಕು ಶಿಬಿರಗಳ ಶಿಬಿರಾರ್ಥಿಗಳು ತಾಳಿಕೋಟೆ ಶಿಬಿರವನ್ನು ಕೇಂದ್ರವಾಗಿಟ್ಟುಕೊಂಡು ಕಾರ್ಯನಿರ್ವಹಿಸುತ್ತಿದ್ದರು. ಈ ಎಲ್ಲ ಶಿಬಿರಾರ್ಥಿಗಳು ರಾಜಾ ವೆಂಕಟಪ್ಪ ನಾಯಕರ ಸಲಹೆ ಮೇರೆಗೆ ಕಾರ್ಯಚಟುವಟಿಕೆಗಳು ರಜಾಕಾರರ ವಿರುದ್ಧ ಕೈಗೊಳ್ಳುತ್ತಿದ್ದರು. ಅಪ್ಪಾರಾವ್ ವಕೀಲರು ಮತ್ತು ರಾಜಾ ವೆಂಕಟಪ್ಪನಾಯಕರು ರಜಾಕಾರರ ವಿರುದ್ಧ ಹೋರಾಟದ ರೂಪರೇಷೆಗಳನ್ನು ಹಾಕಿಕೊಡುತ್ತಿದ್ದರು. ತಾಳಿಕೋಟೆ ಶಿಬಿರದ ಶಿಬಿರಾರ್ಥಿಗಳು ಈ ಮೇಲಿನ ೩ ಶಿಬಿರಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರು (ಸಂದರ್ಶನ: ವೆಂಕನಗೌಡ ೨೪.೨.೨೦೦೬).

ಸಿಂದಗಿ ಶಿಬಿರದ ಶಿಬಿರಾಧಿಪತಿಗಳಾದ ಸರ್ದಾರ ಶರಣಗೌಡರು ಕೆಂಭಾವಿಯ ಪೊಲೀಸ ಠಾಣೆಯ ಮೇಲೆ ದಾಳಿ ಮಾಡಿದರು. ಆ ಸಮಯದಲ್ಲಿ ರಾಜಾ ವೆಂಕಟಪ್ಪನಾಯಕರು ತಾಳಿಕೋಟೆಯಲ್ಲಿ

ಶಿಬಿರವನ್ನು ತೆಗೆಯುವ ವಿಚಾರವನ್ನು ಸರ್ದಾರ ಶರಣಗೌಡರಿಗೆ ತಿಳಿಸಿದರು. ಸರ್ದಾರ ಶರಣಗೌಡರ ಸಲಹೆ ಮೇರೆಗೆ ಶಿಬಿರವನ್ನು ತಾಳಿಕೋಟೆಯಲ್ಲಿ ಸ್ಥಾಪಿಸಿದರೆಂದು ಸಂದರ್ಶನದಲ್ಲಿ ಶರಣಗೌಡರು ತಿಳಿಸಿದ್ದಾರೆ (ಸಂದರ್ಶನ: ಸರ್ದಾರ ಶರಣಗೌಡ ೨೩.೦೧.೨೦೦೬).

ರಾಜಾ ವೆಂಕಟಪ್ಪನಾಯಕರು ಸರ್ದಾರ ವಲ್ಲಭಭಾಯಿ ಪಟೇಲರೊಂದಿಗೆ ನೇರ ಸಂಪರ್ಕ ಹೊಂದಿದ್ದರು. ಇದು ಈ ಶಿಬಿರದ ಐತಿಹಾಸಿಕ ಮಹತ್ವವನ್ನು ತಿಳಿಸುತ್ತದೆ. ಈ ಶಿಬಿರಕ್ಕೆ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದ ನಾಯಕರಾದ ರಮಾನಂದತೀರ್ಥರ[೮] ಮಾರ್ಗದರ್ಶನವಿತ್ತು. ಗುಲಬರ್ಗಾ ಜಿಲ್ಲೆಯ ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರಾದ ಕೊಲ್ಲೂರು ಮಲ್ಲಪ್ಪನವರ ನಿಕಟ ಸಂಪರ್ಕವಿತ್ತು.

**೧. ಸಿಂದಗಿ ಶಿಬಿರ :** ಹೋರಾಟದ ಪ್ರಮುಖ ಕಾರ್ಯತಂತ್ರಗಳು ಮತ್ತು ಘಟನಾವಳಿಗಳ ವಿವರಗಳು ಹೀಗಿವೆ. ಸಿಂದಗಿ ಶಿಬಿರದ ಶಿಬಿರಾಧಿಪತಿಗಳಾದ ಸರ್ದಾರ ಶರಣಗೌಡರು ತಾಳಿಕೋಟೆ ಶಿಬಿರಕ್ಕೆ ಬಂದು ಶಿಬಿರಾರ್ಥಿಗಳ ಸಭೆ ಕರೆದು ರಜಾಕಾರರ ವಿರುದ್ಧ ಹೋರಾಡಲು ರೂಪರೇಷೆಗಳನ್ನು ತಯಾರಿಸಿ ಕೊಡುತ್ತಿದ್ದರು. ಕೊಲ್ಲೂರು ಮಲ್ಲಪ್ಪ, ಡಾ.ಕಂಠಿಯವರ ಕೇಂದ್ರ ಕಛೇರಿ ಗದಗದಿಂದ ಬಂದು ಈ ಶಿಬಿರದ ಹೋರಾಟಗಾರರಿಗೆ ಕಾರ್ಯ ಯೋಜನೆಗಳ ಬಗ್ಗೆ ಮಾಹಿತಿ ನೀಡುತ್ತಿದ್ದರು. ಸುರಪುರ ಪ್ರಾಂತ್ಯದ ವ್ಯಾಪ್ತಿಗೆ ಸಂಬಂಧಿಸಿದಂತೆ ಅನೇಕ ಕರೋಡಗಿರಿ ನಾಕಾಗಳು[೧೨] ಇದ್ದವು. ಅವುಗಳೆಂದರೆ ತೀರ್ಥ, ನಾರಾಯಣಪುರ, ಹಗರಟಗಿ, ಮಾರಲಭಾವಿ, ಮಾಳನೂರ, ರಾಯನಪಾಳ ಮತ್ತು ಕೊಡೇಕಲ್‌ಗಳಾಗಿದ್ದವು. ಕರೋಡಗಿರಿ ನಾಕಾಯೆಂದರೆ ತೆರಿಗೆ ಸಂಗ್ರಹಿಸುವ ಕಛೇರಿಯಾಗಿದೆ. ಸ್ವಾತಂತ್ರ್ಯ ಹೋರಾಟಗಾರರು ಕರೋಡಗಿರಿಗಳನ್ನು ತಮ್ಮ ಗುರಿಯನ್ನಾಗಿಟ್ಟುಕೊಂಡು ಕಾರ್ಯ ಪ್ರಾರಂಭಿಸಿದರು. ಈ ನಾಕಾಗಳ ಮೇಲೆ ದಾಳಿ ಮಾಡಿದಾಗ ಮಾತ್ರ ಸರ್ಕಾರದ ಮತ್ತು ಆಸಕ್ತ ದೇಶಾಭಿಮಾನಿಗಳ ಗಮನ ಈ ಕಡೆ ಸೆಳೆಯುತ್ತದೆ ಎಂಬ ವಿಚಾರವನ್ನು ಶಿಬಿರಗಳ ಕಾರ್ಯಕರ್ತರು ಹೊಂದಿದ್ದರು (ಪೊಲೀಸ್‌ಪಾಟೀಲ ೨೦೦೨:೧೨೩).

**೨. ತಾಳಿಕೋಟೆ ಶಿಬಿರ :** ತಾಳಿಕೋಟೆ ಶಿಬಿರದ ಕಾರ್ಯಕರ್ತರು ಗುಳಬಾಳ, ಮುದ್ನೂರು, ತೀರ್ಥ ಈ ಗ್ರಾಮಗಳ ಮೇಲೆ ದಾಳಿ ಮಾಡಿ ಹೆಂಡದಂಗಡಿಗಳನ್ನು ಸುಟ್ಟರು. ಸರ್ಕಾರಿ ಕಟ್ಟಡಗಳನ್ನು ನಾಶ ಮಾಡಿ ಸರ್ಕಾರಿ ದಾಖಲೆ ಪತ್ರಗಳನ್ನು ವಶಪಡಿಸಿಕೊಂಡರು ಮುದ್ನೂರನ್ನು ವಶಪಡಿಸಿಕೊಂಡಿದ್ದರಿಂದ ಅದರ ಸುತ್ತಮುತ್ತಲಿನ ಹಳ್ಳಿಗಳು ಇವರ ಅಧೀನಕ್ಕೆ ಬಂದವು. ವೆಂಕನಗೌಡ, ವಿರೂಪಾಕ್ಷಪ್ಪಗೌಡ, ಮಹಾದೇವಪ್ಪ ಹೂಗಾರ, ಉದ್ದನ್ನ ಸಂಗಪ್ಪ ಇವರೆಲ್ಲರು ರಾಯನಪಾಳ, ಮಾರಲಭಾವಿ, ತೀರ್ಥ, ಹಗರಟಗಿಯಲ್ಲಿನ ಕರೋಡಗಿರಿ ನಾಕಾಗಳ ಮೇಲೆ ದಾಳಿ ಮಾಡಿದರು. ಅಗ್ನಿ, ಅರಿಕೇರಿ ಎಂಬ ಗ್ರಾಮಗಳ ಗೌಡ, ಕುಲ್ಕರ್ಣಿಯವರು ವಸೂಲಿ ಮಾಡಿಟ್ಟಿದ್ದ ಹಫ್ತೆಯನ್ನು ಶಿಬಿರಾರ್ಥಿಗಳು ಲೂಟಿ ಮಾಡಿ ಅದನ್ನು

ಶಿಬಿರಗಳ ಖರ್ಚಿಗಾಗಿ ಬಳಸುತ್ತಿದ್ದರು (ಸಂದರ್ಶನ ವೆಂಕನಗೌಡ ಪಾಟೀಲ ೨೪.೦೨.೨೦೦೬). ಸಿಂದಗಿ ಶಿಬಿರದ ಶಿಬಿರಾಧಿಪತಿಗಳಾದ ಸರ್ದಾರ ಶರಣಗೌಡರು ಸುರಪುರದ ವ್ಯಾಪ್ತಿಯಲ್ಲಿ ಬರುವ ನಾರಾಯಣಪುರದಿಂದ ಕೊಡೇಕಲ್‌ಗಳ ಮಧ್ಯೆ ಬರುವ ಎಲ್ಲಾ ಕರೋಡಗಿರಿ ನಾಕಾಗಳನ್ನು ಸುಟ್ಟು ಹಾಕಿದರು. ಅಲ್ಲದೇ ಕೆಂಭಾವಿ, ಹುಣಸಗಿ ಪೋಲೀಸ್ ಠಾಣೆಗಳನ್ನು ವಶಪಡಿಸಿಕೊಂಡು ಗಡಿಯೊಳಗೆ ೩೦ ಮೈಲುಗಳವರೆಗಿನ ಪ್ರದೇಶವನ್ನು ಸ್ವತಂತ್ರಗೊಳಿಸಿರುವ ವಿವರವು ಸರ್ದಾರ ಶರಣಗೌಡರ ಸಂದರ್ಶನದಿಂದ ತಿಳಿದುಬಂದಿದೆ (ಸಂದರ್ಶನ: ಸರ್ದಾರ ಶರಣಗೌಡ, ೨೩.೦೧.೨೦೦೬).

ತಾಳಿಕೋಟೆ ಶಿಬಿರದ ಕಾರ್ಯಕರ್ತರು ನಡೆಸಿದ ಬಹುಮುಖ್ಯ ಹೋರಾಟವೆಂದರೆ ಸುರಪುರ ತಾಲೂಕಿನ ನೆಲೋಗಿ ಹಾಗೂ ಮಾಳನೂರ ಪ್ರದೇಶವನ್ನು ವಿಮೋಚನೆಗೊಳಿಸಿದರು. ರಜಾಕಾರರ ದಾಳಿಯನ್ನು ಹತ್ತಿಕ್ಕಲು, ನಿಜಾಂ ಅವರ ಆಳ್ವಿಕೆಯಿಂದ ಹಳ್ಳಿಗಳನ್ನು ಮುಕ್ತಗೊಳಿಸಲು ತಾಳಿಕೋಟೆ ಶಿಬಿರದ ಶಿಬಿರಾಧಿಪತಿಗಳಾದ ಬ್ಯಾರಿಸ್ಟರ ರಾಜಾ ವೆಂಕಟಪ್ಪ ನಾಯಕರು ಗೆರಿಲ್ಲಾ ಹೋರಾಟವನ್ನು ಸಂಘಟಿಸಿದ್ದರು (ಸಂದರ್ಶನ; ಸೀತಾರಾಮನಾಯಕ ೨೮.೦೧.೨೦೦೬).

**೩. ಎಣ್ಣಿವಡಗೇರಿ :** ಎಣ್ಣಿವಡಗೇರಿಯು ಸುರಪುರ ತಾಲೂಕಿನ ಒಂದು ಗ್ರಾಮವಾಗಿದೆ. ಎಣ್ಣಿವಡಗೇರಿ ಎಂಬ ಗ್ರಾಮದಲ್ಲಿ ಹಿಂದೂಗಳ ಮನೆಯಲ್ಲಿ ರಜಾಕಾರರು ಆಶ್ರಯಪಡೆದಿದ್ದಾರೆ ಎಂಬ ಸುದ್ದಿ ತಿಳಿದು ಶಿಬಿರದ ಕಾರ್ಯಕರ್ತರು ಆ ಮನೆಗೆ ನುಗ್ಗಿದರು. ಇವರನ್ನು ಕಂಡ ರಜಾಕಾರರು ಇವರ ಮೇಲೆ ಗುಂಡಿನ ಮಳೆಗರೆದರು. ಎರಡು ಕಡೆಗಳ ನಡುವೆ ಗುಂಡಿನ ಚಕಮಕಿ ನಡೆದು ರಜಾಕಾರರಲ್ಲಿ ಇಬ್ಬರು ಸತ್ತರು. ಇದನ್ನು ಕಂಡು ಉಳಿದ ರಜಾಕಾರರು ಓಡಿ ಹೋದರು. ಆಗ ಶಿಬಿರದ ಕಾರ್ಯಕರ್ತರು ರಜಾಕಾರರಿಗೆ ಆಶ್ರಯ ನೀಡಿದ ಮನೆಯನ್ನು ಪ್ರವೇಶಿಸಿ ಅವರ ಮನೆಯಲ್ಲಿದ್ದ ೨ ಒಂಟೆಗಳು, ಒಂದು ಕುದುರೆ, ಕುರಿಗಳನ್ನು ತೆಗೆದುಕೊಂಡು ಹೋಗಿ ಸಂತೆಯಲ್ಲಿ ಮಾರಾಟ ಮಾಡಿದರು.

ವೆಂಕನಗೌಡ, ವಿರುಪಾಕ್ಷಪ್ಪನವರ ನಾಯಕತ್ವದಲ್ಲಿ ಕಾರ್ಯಕರ್ತರು ರಾಜನಕೋಳೂರಿನ ಗೌಡ, ಕುಲಕರ್ಣಿಯವರ ದಫ್ತರ ಸುಟ್ಟು ಹಾಕಿದರು. ನಂತರ ಹಗರಟಗಿಯ ಪೋಲೀಸ ಠಾಣಾಕ್ಕೆ ಮುತ್ತಿಗೆ ಹಾಕಿದರು. ಈ ಮುತ್ತಿಗೆಯಲ್ಲಿ ಹಗರಟಗಿಯ ಕುಪ್ಪಿಹನುಮಂತರಾವ್, ಸಲಗುಂದಿ ಮಲಕಣ್ಣ, ಗುರುಬಸಪ್ಪ ಗೌಡ ಇದ್ದರು. ಇವರು ಕಛೇರಿಯಲ್ಲಿರುವ ಹಫ್ತೆ ಹಣವನ್ನು ದೋಚಿಕೊಂಡು ಬಂದರು. ಯಾವ ಗ್ರಾಮದಲ್ಲಿಯಾದರೂ ಗಲಾಟೆಯಾದರೆ ತಕ್ಷಣ ಜನರ ರಕ್ಷಣೆಗಾಗಿ ಈ ಕಾರ್ಯಕರ್ತರು ತಯಾರಾಗಿರುತ್ತಿದ್ದರು.

**೪. ಮಾಳನೂರ ಮತ್ತು ನೆಲೋಗಿ :** ಮಾಳನೂರ ಮತ್ತು ನೆಲೋಗಿಗಳು ಸುರಪುರ ತಾಲೂಕಿನ ಗ್ರಾಮಗಳಾಗಿವೆ. ಗಡಿ ಪ್ರದೇಶದಲ್ಲಿನ ಸ್ವಾತಂತ್ರ ಹೋರಾಟಗಾರರು ರಜಾಕಾರರಿಗೆ ತಿರುಗೇಟು

ಕೊಡತೊಡಗಿದರು. ಇದರಿಂದ ಇವರು ನಿಜಾಂ ಸರ್ಕಾರದ ಕೋಪಕ್ಕೆ ಗುರಿಯಾಗಿದ್ದರಿಂದ ಇವರನ್ನು ಕೊಲೆ ಮಾಡಲು ನಿಜಾಂ ಸರ್ಕಾರ ನಿರ್ಧರಿಸಿತು. ವಿರುಪಾಕ್ಷಪ್ಪಗೌಡರು ನಿಜಾಂ ಅವರಿಗೆ ಸಿಂಹಸ್ವಪ್ನವಾಗಿ ಪರಿಣಮಿಸಿದರು. ವಿರೂಪಾಕ್ಷಪ್ಪಗೌಡರು ಮಾಳನೂರು ಮತ್ತು ನೆಲೋಗಿಗಳಲ್ಲಿ ನಡೆಸಿದ ಹೋರಾಟ ಅಪ್ರತಿಮವಾಗಿತ್ತು. ವಿರುಪಾಕ್ಷಪ್ಪಗೌಡರ ನಾಯಕತ್ವದ ೨೫ ಜನರ ತಂಡವು ದಾಳಿಯಲ್ಲಿ ಭಾಗವಹಿಸಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ನಿಜಾಂ ಅವರ ಆಡಳಿತವನ್ನು ಕಿತ್ತೊಗೆದು ಆ ಹಳ್ಳಿಗಳನ್ನು ಸ್ವತಂತ್ರಗೊಳಿಸಿದರು. ವಿರೂಪಾಕ್ಷಪ್ಪಗೌಡರು ರಜಾಕಾರರೊಡನೆ ಅನೇಕ ಸಲ ಉಗ್ರಹೋರಾಟವನ್ನು ಕೈಗೊಂಡಿದ್ದರು. ಇದಕ್ಕಾಗಿ ಇವರನ್ನು ಹಿಡಿದುಕೊಟ್ಟವರಿಗೆ ೧೦೦೦ರೂ ಬಹುಮಾನ ಕೊಡುವುದಾಗಿ ನಿಜಾಂ ಸರ್ಕಾರ ಘೋಷಣೆ ಮಾಡಿದರು(ಸಂಯುಕ್ತ ಕರ್ನಾಟಕ, ೧೫.೦೯.೨೦೦೫).

**೫. ರಾಜನ ಕೋಳೂರು :** ರಜಾಕಾರರ ಹಾವಳಿಗೆ ತುತ್ತಾದ ಗ್ರಾಮಗಳಲ್ಲಿ ಸುರಪುರ ತಾಲೂಕಿನ ರಾಜನಕೋಳೂರ ಗ್ರಾಮವು ಒಂದು. ವಿರುಪಾಕ್ಷಪ್ಪಗೌಡರು ರಜಾಕಾರರೊಡನೆ ಕೈಗೊಂಡಿರುವ ಘಟನೆಗಳಲ್ಲಿ ರಾಜನಕೋಳೂರಿನ ಘಟನೆ ಪ್ರಮುಖವಾಗಿವೆ. ಇವರು ರಾಜನಕೋಳೂರಿನ ಕರೋಡಗಿರಿ ನಾಕಾದ ಮೇಲೆ ದಾಳಿ ಮಾಡಿ ಅಲ್ಲಿಯ ಕಾಗದ ಪತ್ರಗಳನ್ನು ಸುಟ್ಟು ಹಾಕಿದರು. ೧೯೪೮ರ ಮೇ ತಿಂಗಳಲ್ಲಿ ರಾಜನಕೋಳೂರಿನ ಮೂರ್ಕಾರ್ತಿ ಗುಡ್ಡದ ಹತ್ತಿರ ರಜಾಕಾರರೊಡನೆ ನಡೆದ ಸಶಸ್ತ್ರ ಘರ್ಷಣೆಯಲ್ಲಿ ವಿರುಪಾಕ್ಷಪ್ಪಗೌಡ, ಮಹಾಂತಪ್ಪ ಮತ್ತು ಇವರ ರಕ್ಷಣೆಗಾಗಿ ಬಂದಿದ್ದ ಮುಂಬೈ ಕರ್ನಾಟಕದ ಪೋಲೀಸರು ರಜಾಕಾರರ ಗುಂಪಿಗೆ ಆಹುತಿಯಾದರು. ಹೀಗೆ ತಾಳಿಕೋಟೆ ಶಿಬಿರವು ಸುರಪುರ ಪ್ರಾಂತ್ಯದ ಗ್ರಾಮಗಳನ್ನು ರಜಾಕಾರರ ಹಾವಳಿಯಿಂದ ಮುಕ್ತಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿದೆ.

ಹೈದರಾಬಾದ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರ ಗಡಿಶಿಬಿರಗಳನ್ನು ಸ್ಥಾಪಿಸುವುದರ ಮೂಲಕ ರಜಾಕಾರರ ಹಾವಳಿಯನ್ನು ತಡೆಯುವುದರಲ್ಲಿ ಯಶಸ್ವಿಯಾದರು. ಶಿಬಿರಗಳ ಮುಖ್ಯಸ್ಥರು ಮತ್ತು ಕಾರ್ಯಕರ್ತರು ಯಾವ ಅಪಾಯವನ್ನು ಲೆಕ್ಕಿಸದೇ ಹೋರಾಡಿ ರಜಾಕಾರರಲ್ಲಿಯೇ ಭೀತಿ ಮೂಡುವಂತೆ ಮಾಡಿದರು. ಶಿಬಿರಾರ್ಥಿಗಳು ತಮ್ಮ ಪ್ರಾಣವನ್ನು ಲೆಕ್ಕಿಸದೇ ತಮ್ಮ ಪ್ರಾಂತ್ಯಗಳ ವಿಮೋಚನೆಗಾಗಿ ಶ್ರಮಿಸಿ ಕೊನೆಗೆ ಭಾರತದೊಂದಿಗೆ ಹೈದರಾಬಾದ ಸಂಸ್ಥಾನವನ್ನು ವಿಲೀನಗೊಳಿಸುವಲ್ಲಿ ಸಫಲತೆಯನ್ನು ಪಡೆದಿದ್ದಾರೆ.

ಒಂದು ವೇಳೆ ಈ ತರಹದ ಗಡಿಶಿಬಿರಗಳು ಸ್ಥಾಪನೆಯಾಗದಿದ್ದರೆ, ಎಲ್ಲ ಜನರು ಕೂಡಿ ನಿಜಾಂ ಅವರ ವಿರುದ್ಧ ಹೋರಾಡಲು ಸಾಧ್ಯವಾಗುತ್ತಿರಲಿಲ್ಲ. ಗಡಿಶಿಬಿರವು ಹೋರಾಡುವವರಿಗೆ ಒಂದು ವೇದಿಕೆಯಾಗಿ ಕಾರ್ಯನಿರ್ವಹಿಸಿತು. ಜನರು ಈ ಶಿಬಿರಗಳಲ್ಲಿ ಸೇರಿ ತಮ್ಮ ಅಭಿಪ್ರಾಯಗಳನ್ನು ಸೂಚಿಸಲು ಅವಕಾಶವಿತ್ತು. ಒಂದು ವೇಳೆ ಎಲ್ಲ ಜನರು ಒಟ್ಟುಗೂಡಿ ಶಿಬಿರ ಸ್ಥಾಪನೆ ಮಾಡದೇ

ತಮ್ಮ ತಮ್ಮ ಪ್ರದೇಶಗಳಲ್ಲಿಯೇ ಪ್ರತಿಭಟನೆ ಆರಂಭಿಸಿದ್ದರೆ, ನಿಜಾಂ ಸೈನಿಕರು ಆ ದಂಗೆಗಳನ್ನು ಹತ್ತಿಕ್ಕುತ್ತಿದ್ದರು. ಗಡಿಶಿಬಿರಗಳ ಮೂಲಕ ಹೋರಾಟ ಕೈಗೊಳ್ಳದಿದ್ದರೆ ನಿಜಾಂ ಅವರ ದಬ್ಬಾಳಿಕೆಯನ್ನು, ಸರ್ವಾಧಿಕಾರವನ್ನು ಕಿತ್ತೊಗೆಯಲು ಸಾಧ್ಯವಾಗುತ್ತಿರಲಿಲ್ಲ.

## ೪.೩. ಕನ್ನಡ ಸಾಹಿತ್ಯ ಸಂಘಗಳ ಪಾತ್ರ

ಒಂದು ನಾಡಿನ ಅಭಿವೃದ್ಧಿಯಲ್ಲಿ ಸಂಘಸಂಸ್ಥೆಗಳು ಪ್ರಮುಖವಾದ ಪಾತ್ರವಹಿಸುತ್ತವೆ. ಜನರಲ್ಲಿ ಸಾಹಿತ್ಯ, ಸಂಸ್ಕೃತಿ ಪ್ರಚಾರ ಕಾರ್ಯವನ್ನು ಯಶಸ್ವಿಯಾಗಿ ಪೂರೈಸುವಲ್ಲಿ ಗಮನಾರ್ಹವಾದ ಪಾತ್ರ ನಿರ್ವಹಿಸುತ್ತವೆ. ಇಂತಹ ಕೆಲವು ಉದ್ದೇಶಗಳನ್ನು ಇಟ್ಟುಕೊಂಡು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಮತ್ತು ಅದರ ಒಂದು ಭಾಗವಾದ ರಂಗಂಪೇಟದಲ್ಲಿ ಕನ್ನಡ ಸಾಹಿತ್ಯ ಸಂಘಗಳು ಅಸ್ತಿತ್ವಕ್ಕೆ ಬಂದಿದ್ದವು.

ನಿಜಾಂ ಸಂಸ್ಥಾನದ ಆಳ್ವಿಕೆಗೆ ಒಳಗಾಗಿದ್ದ ಮತ್ತು ಉರ್ದುಭಾಷೆಯ ಪ್ರಭಾವಕ್ಕೆ ಒಳಗಾಗಿದ್ದ ಪ್ರದೇಶದಲ್ಲಿ ಕನ್ನಡಿಗರು ಕನ್ನಡ ಭಾಷೆ, ಸಂಸ್ಕೃತಿಗಳ ರಕ್ಷಣೆಗಾಗಿ ತಮ್ಮ ತಮ್ಮ ಪ್ರದೇಶಗಳಲ್ಲಿ ಕನ್ನಡದ ಕಾರ್ಯಚಟುವಟಿಕೆಗಳನ್ನು ಕೈಗೊಂಡರು. ಕಾರ್ಯಚಟುವಟಿಕೆಗಳನ್ನು ನಡೆಸಲು ಪ್ರಬಲವಾದ ಅಸ್ತ್ರವಾಗಿದ್ದ ಸಂಘಸಂಸ್ಥೆಗಳನ್ನು ಸ್ಥಾಪನೆ ಮಾಡಿದರು. ಈ ಸಂಘಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ನಿಜಾಂ ಸರ್ಕಾರದ ವಿರುದ್ದ ಪ್ರತಿಭಟನೆ ಆರಂಭಿಸಿದರು (ಮಹಾಬಲೇಶ್ವರಪ್ಪ ೧೯೯೭ :೫೮).

ನಿಜಾಂ ಅವರ ಆಳ್ವಿಕೆಗೆ ಒಳಗಾಗಿದ್ದ ಈ ಪ್ರಾಂತ್ಯಗಳಲ್ಲಿ ಮರಾಠಿ ಮತ್ತು ತೆಲುಗು ಮಾತನಾಡುವ ಜನರು ಬಹುಸಂಖ್ಯಾತರಾಗಿದ್ದರು. ಕನ್ನಡ ಮಾತನಾಡುವವರು ಅಲ್ಪಸಂಖ್ಯಾತರಾಗಿದ್ದರು. ನಿಜಾಂ ಆಳ್ವಿಕೆಯಲ್ಲಿ ಹಿಂದಿನಿಂದ ಬಂದಿದ್ದ ಉರ್ದು ಭಾಷೆಯನ್ನು ಆಡಳಿತದ ಭಾಷೆಯನ್ನಾಗಿ ಮಾಡಿದ್ದರಿಂದ ಕನ್ನಡ ಭಾಷೆ ಅಳಿವಿನ ಸ್ಥಿತಿಯಲ್ಲಿತ್ತು. ೧೯೩೮ರ ಸಮಯದಲ್ಲಿ ನಿಜಾಂ ಸರ್ಕಾರ ರಾಜ್ಯ ಕಾಂಗ್ರೆಸ್‌ನ ಮೇಲೆ ನಿಷೇಧ ಹಾಕಿತ್ತು. ರಮಾನಂದ ತೀರ್ಥ, ಜನಾರ್ಧನರಾವ್ ದೇಶಪಾಂಡೆ, ರಾಮಾಚಾರ ಜೋಶಿ ಮತ್ತು ಜಿ.ಕೆ.ಪ್ರಾಣೇಶಾಚಾರ್ಯರು ರಾಜ್ಯಕಾಂಗ್ರೆಸ್‌ನ ಚಟುವಟಿಕೆಗಳನ್ನು ನಿಜಾಂ ಕರ್ನಾಟಕ ಪರಿಷತ್ತಿನ ಮೂಲಕ ಆರಂಭಿಸಿದರು.

ಇದಕ್ಕೆ ಸಂಬಂಧಿಸಿದ ಅಂಶಗಳನ್ನು ಆರ್.ರೇವಣಸಿದ್ದಯ್ಯವರ ‘ಶೋರಾಪುರ ತಾಲೂಕಾ ದರ್ಶನ’(೧೯೮೬), ಎಂ.ಬಿ.ಪಾಟೀಲ್ ರ ‘ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್’ (೧೯೯೭), ಎ.ಎಚ್. ದೇಸಾಯಿಯವರ ‘The Saga of Hyderabad Liberation Struggle in India’s Freedom Movement’(2000), ನಾಗಪ್ಪ ತ್ರಿವೇದಿಯರ ‘ವಜ್ರದೀಪ್ತಿ’(೨೦೦೪) ಈ ಕೃತಿಗಳಲ್ಲಿ ಕಂಡುಕೊಳ್ಳಲಾಗಿದೆ.

ಈ ಸಂಘಗಳ ಬಗ್ಗೆ ಅನೇಕ ಪತ್ರಿಕೆಗಳಲ್ಲಿ ಲೇಖನಗಳು ಬಂದಿರುವುದನ್ನು ಕಾಣಬಹುದು. ಇವುಗಳಲ್ಲದೇ ಈ ಸಾಹಿತ್ಯ ಸಂಘವನ್ನು ಸ್ಥಾಪಿಸಿದ ಸ್ಥಾಪಕರ ಮತ್ತು ಇವರ ಸದಸ್ಯರನ್ನು ಭೇಟಿಯಾಗಿ ಅವರ ಜೊತೆ ಚರ್ಚೆ ಮಾಡಿ ಕೆಲವು ಅಂಶಗಳನ್ನು ಇದರಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

* * * * *

ಹೀಗೆ ಹೈದರಾಬಾದ ಕರ್ನಾಟಕದ ವಿವಿಧ ಸ್ಥಳಗಳಲ್ಲಿ ನಿಜಾಂ ಕರ್ನಾಟಕ ಶಾಖೆಗಳನ್ನು ಸ್ಥಾಪಿಸಿ, ಈ ಶಾಖೆಗಳನ್ನು ಕನ್ನಡ ಸಾಹಿತ್ಯ ಸಂಘ ಎಂಬ ಹೆಸರಿನಿಂದ ಶುರು ಮಾಡಿದರು. ಈ ಸಂಘಗಳ ಮುಖ್ಯ ಉದ್ದೇಶ ಜನರಲ್ಲಿ ಸಾಹಿತ್ಯ ಅಭಿರುಚಿಯನ್ನು ಬೆಳೆಸುವಂತೆ ಮಾಡುವುದು ಮತ್ತು ಸ್ವಾತಂತ್ರ್ಯ ಭಾವನೆಯನ್ನು ಜಾಗೃತಗೊಳಿಸಿ ನಿಜಾಂ ಸರ್ಕಾರದ ವಿರುದ್ಧ ಹೋರಾಟ ಮಾಡುವ ಮನೋಭಾವನೆ ಬೆಳೆಸುವುದಾಗಿತ್ತು. ಉರ್ದುಮಯವಾಗಿದ್ದಂತಹ ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆಯನ್ನು ಪ್ರಚಾರ ಮಾಡುವುದು. ಕನ್ನಡ ಮಾಧ್ಯಮದ ಮೂಲಕ ಶಿಕ್ಷಣ ಪಡೆಯಲು ಕನ್ನಡ ಸಾಹಿತ್ಯ ಸಂಘಗಳು ಅವಿರತವಾಗಿ ಕಾರ್ಯನಿರ್ವಹಿಸಿವೆ. ಸಂಘಸಂಸ್ಥೆಗಳು ಕೈಗೊಳ್ಳುವ ಕಾರ್ಯಕ್ರಮಗಳ ಮೇಲೆ ನಿಜಾಂ ಸರ್ಕಾರ ನಿಷೇಧ ಹಾಕುತ್ತಿತ್ತು ಎಂದು ಸಂದರ್ಶವೊಂದರಲ್ಲಿ ಬುದ್ದಿವಂತ ಶೆಟ್ಟರು ಮಾಹಿತಿ ನೀಡಿದ್ದಾರೆ. (ಸಂದರ್ಶನ : ಬುದ್ದಿವಂತ ಶೆಟ್ಟಿ, ೨೭-೦೨-೨೦೦೬)

ಅನೇಕ ಅಡೆ ತಡೆಗಳ ಮಧ್ಯದಲ್ಲಿಯು ಕನ್ನಡ ಸಾಹಿತ್ಯ ಸಂಘಗಳು ಕನ್ನಡದ ಕಾರ್ಯ ಚಟುವಟಿಕೆಗಳನ್ನು ನಡೆಸಿವೆ. ಗುಲಬರ್ಗಾದಲ್ಲಿ ೧೯೪೧ರಲ್ಲಿ ತವಗಭೀಮಸೇನರಾಯ, ಅಶ್ವಥರಾವ್ ವಕೀಲ, ಮಾಜೇಂದ್ರರಾವ್ ಮತ್ತು ದತ್ತಾತ್ರೇಯ ಅವರಾದಿ ಮುಂತಾದವರು ಕೂಡಿಕೊಂಡು ಕನ್ನಡ ಸಾಹಿತ್ಯ ಸಂಘವನ್ನು ಆರಂಭಿಸಿದರು. ಈ ಸಂಘಗಳು ನಾಡಹಬ್ಬ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಸ್ಪರ್ಧೆಗಳನ್ನು, ಉಪನ್ಯಾಸಗಳನ್ನು ಹಮ್ಮಿಕೊಳ್ಳುತ್ತಿದ್ದವು. ಕನ್ನಡ ನಾಡಿನ ಅನೇಕ ಸಾಹಿತಿಗಳು ಈ ಸಂಘಗಳಿಗೆ ಭೇಟಿ ನೀಡಿ ತಮ್ಮ ಉಪನ್ಯಾಸ ಕಾರ್ಯಕ್ರಮಗಳನ್ನು ನೀಡಿದ್ದಾರೆ(ಪಾಟೀಲ್ ೧೯೯೭: ೫೯೮). ಸ್ವಾತಂತ್ರ್ಯಪೂರ್ವದಲ್ಲಿ ಸಂಘಸಂಸ್ಥೆಗಳನ್ನು ಸಂಶಯ ದೃಷ್ಟಿಯಿಂದ ಕಾಣುತ್ತಿದ್ದ ಕಾಲ, ಇನ್ನೊಂದು ಕಡೆ 'ಮಾಡು ಇಲ್ಲವೇ ಮಡಿ' ಎಂದು ಪ್ರಾಣವನ್ನು ಪಣಕ್ಕಿಟ್ಟು ದೇಶದ ಮುಕ್ತಿಗಾಗಿ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಸುರಪುರ ಮತ್ತು ರಂಗಂಪೇಟೆಗಳಲ್ಲಿ ಕನ್ನಡ ಸಾಹಿತ್ಯಸಂಘಗಳು ಸ್ಥಾಪನೆಯಾದವು. ಅವುಗಳ ವಿವರಗಳು ಹೀಗಿವೆ.

### ೧. ಸುರಪುರದ ಕನ್ನಡ ಸಾಹಿತ್ಯ ಸಂಘ

ಸುರಪುರದ ಕನ್ನಡ ಸಾಹಿತ್ಯ ಸಂಘವು ೧೯೪೨ರಲ್ಲಿ ದೀಕ್ಷಾಚಾರ್ಯ ವಕೀಲರ ನೇತೃತ್ವದಲ್ಲಿ ಸ್ಥಾಪನೆಯಾಯಿತು (ಸಂದರ್ಶನ : ರಾಮಚಂದ್ರ೧ವರ್ಮ, ೨೮.೧.೨೦೦೬). ಈ ಸಂಘವನ್ನು ಮೊದಲಿಗೆ

ಪರಮಹಂಸರ ಮಠದಲ್ಲಿಯೇ ಸ್ಥಾಪಿಸಿದರು. ಈ ಸಂಘದ ಪ್ರಪ್ರಥಮ ನಾಡಹಬ್ಬದ ಆಚರಣೆ, ಕಾರ್ಯಕ್ರಮದ ರೂಪರೇಷೆಯನ್ನು ನಿಲೋಗಲ್ಲು ಕೃಷ್ಣರಾಯರು ಪ್ರಾರಂಭಿಸಿದರು. ಊರಿನ ಹಿರಿಯರು, ಸ್ಥಳೀಯ ವಕೀಲರು ಸಹಾಯಕ್ಕಾಗಿ ನಿಂತರು. ಈ ಸಂಘಕ್ಕೆ ಸಹಕಾರಿ ಸಂಘದ ಅಧಿಕಾರಿಗಳಾದ ರಾಜಗೋಪಾಲಚಾರ್ಯರು, ವಟಗಲ್ಲ ರಾಘವೇಂದ್ರರಾಯರು, ಜಯತೀರ್ಥಾಚಾರ್ಯ ಮಣೂರ ಮತ್ತು ಶೇಷಶಾಸ್ತ್ರಿ ಹೆಬ್ಬಾಳರು ಆರ್ಥಿಕ ಬೆಂಬಲ ನೀಡಿದರು. ಸ್ಥಳೀಯರಿಂದ ಹಣವನ್ನು ಸಂಗ್ರಹಿಸಿ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು (ಹೈದರಾಬಾದ ಕರ್ನಾಟಕದ ವಿಶೇಷ ಪುರವಣಿ ೯.೦೩.೨೦೦೬).

ಈ ಕನ್ನಡ ಸಾಹಿತ್ಯ ಸಂಘಕ್ಕೆ ಬಿ.ಎಂ.ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ, ದ.ರಾ.ಬೇಂದ್ರೆ, ತೀ.ನಂ.ಶ್ರೀಕಂಠಯ್ಯ, ಮಾಸ್ತಿನರಸಿಂಗರಾಯರು ಮುಂತಾದ ಸಾಹಿತಿಗಳನ್ನು ಆಮಂತ್ರಿಸಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಶಿಸ್ತನ್ನು ಕಾಪಾಡಲು ಸ್ವಯಂ ಸೇವಕ ದಳವಿತ್ತು. ಇದರಲ್ಲಿ ೬೩ ಸ್ವಯಂ ಸೇವಕರಿದ್ದರು. ಹರಿಕೀರ್ತಿಯ ಮೂಲಕ ರಾಷ್ಟ್ರೀಯ ಭಾವನೆಗಳನ್ನು ಪ್ರಚೋದಿಸಲು ಪೌರಾಣಿಕ ಸಂಗತಿಗಳನ್ನು ಬಳಸುತ್ತಿದ್ದರು. ಈ ಸಂಘದಲ್ಲಿ ದೇಶಭಕ್ತಿಗೀತೆ, ಸ್ವಯಂ ಸೇವಕ ದಳಗಳ ರಚನೆ, ಕವಾಯತು, ವ್ಯಾಯಾಮ ಈ ತರಹದ ಕಾರ್ಯಚಟುವಟಿಕೆಗಳು ನಾಡಹಬ್ಬದ ಪೂರಕವಾಗಿ ನಡೆಯುತ್ತಿದ್ದವು.

ಕನ್ನಡ ಸಾಹಿತ್ಯ ಸಂಘವು ನಾಡಹಬ್ಬದ ಜೊತೆಗೆ ನಿಜಾಂ ಕರ್ನಾಟಕ ಪರಿಷತ್ತಿನ ೩ನೇ ಅಧಿವೇಶನವನ್ನು ಸುರಪುರದಲ್ಲಿ ನಡೆಸಬೇಕೆಂದು ನಿರ್ಣಯಿಸಲಾಯಿತು. ಈ ಅಧಿವೇಶನ ೧೯೪೨ರಲ್ಲಿ ನಡೆಯಿತು. ಈ ಅಧಿವೇಶನವನ್ನು ನಡೆಸಲು ಮೊದಲು ಸುರಪುರ ಅರಸರು ಒಪ್ಪಿಕೊಂಡರು. ನಂತರ ನಿಜಾಂ ಅವರ ಒತ್ತಡಕ್ಕೊಳಗಾದ ಇವರು ಅರಮನೆಯ ಮುಂದಿನ ಜಾಗವನ್ನು ಅಧಿವೇಶನವನ್ನು ನಡೆಸಲು ಕೊಡಲಿಲ್ಲ. ಸುರಪುರದ ಆನಂದ ವಿದ್ಯಾಲಯದ ಆವರಣದಲ್ಲಿ ನಾನಪ್ಪ ದೇಸಾಯಿ ಹಾಗೂ ಸುರಪುರದ ಎಲ್ಲ ಹಿರಿಯರ ಉತ್ಸಾಹದ ಫಲವಾಗಿ ನಿಜಾಂ ಕರ್ನಾಟಕ ಪರಿಷತ್ತಿನ ೩ನೇ ಅಧಿವೇಶನ ಅಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಕನ್ನಡ ಸಾಹಿತ್ಯ ಸಂಘದಿಂದ ಹೋರಾಟ ಮೆರವಣಿಗೆಯು ಪರಿಷತ್ತು ವೇದಿಕೆವರೆಗೆ ಹೋಯಿತು. ಅಧಿವೇಶನದ ಕಾರ್ಯಚಟುವಟಿಕೆಗಳನ್ನು ಪರಾಂಕುಶ ಸ್ವಾಮಿಗಳ ಮಠದಲ್ಲಿ ಜರುಗಿಸಲಾಗಿತ್ತು (ಸಂದರ್ಶನ; ರಾಮಚಂದ್ರವರ್ಮ, ೨೮.೦೧.೨೦೦೬).

ಈ ಅಧಿವೇಶನದ ಸಂದರ್ಭದಲ್ಲಿ ರಾಜಾಸಾಬ್ ಎಂಬುವವನ ನಾಯಕತ್ವದಲ್ಲಿ ಮುಸ್ಲಿಂರು ಒಡ್ಡಿದ ಕೋಮುಆತಂಕಗಳು ಸಫಲವಾಗಲಿಲ್ಲ. 'ಭಾರತ ಬಿಟ್ಟು ತೊಲಗಿ' ಚಳುವಳಿಯ ಹಿನ್ನಲೆಯಲ್ಲಿ ನಡೆದ ಈ ಅಧಿವೇಶನ ನಿಜಕ್ಕೂ ಪ್ರಾತಿನಿಧಿಕವಾಗಿತ್ತು; ಹಿಂದೂ ಸಂಸ್ಕೃತಿ ಮತ್ತು ಪರಂಪರೆಗಳ ರಕ್ಷಣೆಗಾಗಿ ರಜಾಕಾರರ ನಿರಂಕುಶ ಆಡಳಿತವನ್ನು ಹತ್ತಿಕ್ಕುವಂತೆ ಈ ಪರಿಷತ್ತಿನ ಅಧ್ಯಕ್ಷರು ಜನರಿಗೆ ಕರೆ ನೀಡಿದರು ಎಂದು ಮಹಾಬಲೇಶ್ವರಪ್ಪನವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ (ಮಹಾಬಲೇಶ್ವರಪ್ಪ ೧೯೯೭:೫೯).

## ೨. ರಂಗಂಪೇಟೆಯ ಕನ್ನಡ ಸಾಹಿತ್ಯ ಸಂಘ

ಸುರಪುರ ತಾಲೂಕಿನ ಒಂದು ಭಾಗವಾದ ರಂಗಂಪೇಟೆಯಲ್ಲಿ ಕನ್ನಡ ಸಾಹಿತ್ಯ ಸಂಘವು ಸ್ಥಾಪನೆಯಾಯಿತು. ಈ ಸಂಘವು ಕೂಡ ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ೧೯೪೩ ಏಪ್ರಿಲ್ ೫ ರಂದು ಕನ್ನಡ ಸಾಹಿತ್ಯ ಸಂಘವು ರಂಗಂಪೇಟೆಯಲ್ಲಿ ಸ್ಥಾಪನೆಯಾಯಿತು (ತ್ರಿವೇದಿ, ೨೦೦೪:೬೮). ಬಂಡಿಗುರಾಚಾರ್ಯ, ಶ್ರೀನಿವಾಸ ಜಹಗೀರದಾರ, ಶ್ರೀಬುದ್ಧಿವಂತಶೆಟ್ಟಿ, ಸಗರ ಕೃಷ್ಣಮಾಚಾರ್ಯ, ಡಿ.ಗೋವಿಂದಪ್ಪ ಮತ್ತು ಶ್ರೀ ಮುಮ್ಮಡಿ ಶಿವಣ್ಣನವರು ಸಂಘದ ಸ್ಥಾಪಕರಲ್ಲಿಯೇ ಮುಖ್ಯರಾಗಿದ್ದರು. ಶ್ರೀ ಮಣೂರು ಜಯತೀರ್ಥಾಚಾರ್ಯ, ಶ್ರೀ ಹೆಬ್ಬಾಳ ಶೇಷಶಾಸ್ತ್ರಿಗಳು, ದಿ.ಶ್ರೀ.ಅಷ್ಟಾವದಾನಿ ನರಸಿಂಹ ಶಾಸ್ತ್ರಿಗಳ ಮಾರ್ಗದರ್ಶನದಲ್ಲಿ ಈ ಸಂಘವು ಜನಪ್ರಿಯತೆಯನ್ನು ಪಡೆಯಿತು.

ಶ್ರೀ ಬೋಡಾ ರಾಮಣ್ಣನವರು ಕನ್ನಡ ಸಾಹಿತ್ಯ ಸಂಘದ ಸ್ಥಾಪನಾ ಅಧ್ಯಕ್ಷರಾಗಿದ್ದರು. ಶ್ರೀನಿವಾಸಚಾರ್ಯ ಜಹಗೀರದಾರರು ಉಪಾಧ್ಯಕ್ಷರು. ಶ್ರೀ ರುದ್ರಸ್ವಾಮಿಯವರು ಕಾರ್ಯದರ್ಶಿಗಳಾಗಿ ಈ ಸಂಘಕ್ಕೆ ಭದ್ರ ಬುನಾದಿ ಹಾಕಿದರು. ಈ ಸಂಘವು ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಸಾಹಿತ್ಯಾಭಿಮಾನಿಗಳ ಮತ್ತು ಸ್ವಾತಂತ್ರ್ಯಾಭಿಮಾನಿಗಳ ಗಮನ ಸೆಳೆಯಿತು. ಈ ಸಂಘವು ೫ ದಿನಗಳ ನಾಡಹಬ್ಬವನ್ನು ಆಚರಿಸುತ್ತದೆ. ಈಗ ಬುದ್ಧಿವಂತ ಶೆಟ್ಟರು ಈ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಘದ ಆಶ್ರಯದಲ್ಲಿ ಅನೇಕ ಉತ್ಸವಗಳನ್ನು ಏರ್ಪಡಿಸಲಾಗುತ್ತದೆ. ೧. ನಾಡಹಬ್ಬ, ೨. ವಸಂತ ಸಾಹಿತ್ಯೋತ್ಸವ, ೩. ವಾರ್ಷಿಕೋತ್ಸವ, ೪. ರಾಷ್ಟ್ರನಾಯಕರ ಜಯಂತಿ. ಈ ಸಂಘದ ಕಾರ್ಯಕ್ರಮಗಳಿಗೆ ಅತಿಥಿಗಳಾಗಿ ಹೆಸರಾಂತ ಲೇಖಕರು, ವಿಮರ್ಶಕರು, ಕವಿಗಳನ್ನು ಕರೆಯಿಸುತ್ತಾರೆ. ಬಂದ ಅತಿಥಿಗಳಿಂದ ನಾಡಿನ ಸಾಹಿತ್ಯ, ಸಂಸ್ಕೃತಿ, ಪರಂಪರೆ ಹಾಗೂ ಇತಿಹಾಸ ಇತ್ಯಾದಿ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ. ಸಂಘ ಸ್ಥಾಪನೆಯಾದಾಗ ಈ ಪ್ರಾಂತ್ಯ ಇನ್ನು ನಿಜಾಂ ಅವರ ಆಳ್ವಿಕೆಗೆ ಒಳಪಟ್ಟಿತ್ತು. ಬೇರೆ ಪ್ರದೇಶಗಳಿಂದ ಅತಿಥಿಗಳನ್ನು ಈ ಸಂಘಕ್ಕೆ ಕರೆಸಬೇಕಾದರೆ ನಿಜಾಂ ಸರ್ಕಾರದ ಕಲೆಕ್ಟರ್‌ನಿಂದ ಅನುಮತಿ ಪಡೆಯಬೇಕಾಗಿತ್ತು (ಸಂದರ್ಶನ ಬುದ್ದಿವಂತಶೆಟ್ಟಿ, ೨೭.೦೧.೨೦೦೬). ಈ ಕನ್ನಡ ಸಾಹಿತ್ಯ ಸಂಘಕ್ಕೆ ನಾಡಿನ ಸಾಹಿತಿಗಳಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಸಿ.ಕೆ.ವೆಂಕಟರಮಣಯ್ಯ, ದ.ರಾ.ಬೇಂದ್ರೆಯವರಿಂದ ಹಿಡಿದು ಶಾಂತರಸ, ಎಂ.ಎಸ್.ಲಠ್ಠರವರೆಗೆ ಸುಮಾರು ೩೭೦ಕ್ಕೂ ಹೆಚ್ಚು ಅತಿಥಿಗಳು ನಾಡಹಬ್ಬದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಉಪನ್ಯಾಸ ನೀಡಿದ್ದಾರೆ. ಈ ಎಲ್ಲ ಅತಿಥಿಗಳ ಸಹಸ್ತಾಕ್ಷರ ಬರವಣಿಗೆಯನ್ನು ಕಂಡು ಗುಲಬರ್ಗಾ ವಿಶ್ವವಿದ್ಯಾಲಯದ ಹಿರಿಯ ಗ್ರಂಥಪಾಲಕರಾದ ಎಸ್.ಆರ್.ಗುಂಜಾಳರು ಹೀಗೆ ಹೇಳಿದ್ದಾರೆ. "ನಮ್ಮ ನಾಡಿನ ಹಿರಿಯ ಸಾಹಿತಿಗಳ ಹಸ್ತಾಕ್ಷರಗಳಿಗಾಗಿ ರಂಗಂಪೇಟೆಯ ಕನ್ನಡ ಸಾಹಿತ್ಯ ಸಂಘಕ್ಕೆ

ಬರಬೇಕಾಗಬಹುದು'' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ನಾಣ್ಣುಡಿ ಈ ಸಂಘಕ್ಕೆ ಒಪ್ಪುತ್ತದೆ (ತ್ರಿವೇದಿ ೨೦೦೪:೭೦). ಈ ಸಂಘವು ವಾಚನಾಲಯ ಮತ್ತು ಪುಸ್ತಕ ಭಂಡಾರವನ್ನು ಹೊಂದಿದೆ. ಈ ಪುಸ್ತಕ ಭಂಡಾರದಲ್ಲಿ ೨೦೦೦ ಗ್ರಂಥಗಳು ಇವೆ. ಪ್ರತಿಭಾ ಪುರಸ್ಕಾರ ಯೋಜನೆಯ ಅಡಿಯಲ್ಲಿ ಪರೀಕ್ಷೆಗಳಲ್ಲಿ ಅತಿ ಹೆಚ್ಚಿನ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಲಾಗುವುದು. ನಾಡು ನುಡಿಗೆ ಗಣನೀಯ ಸೇವೆ ಸಲ್ಲಿಸಿದ ಹಿರಿಯರಿಗೆ ಸನ್ಮಾನ ಮಾಡುವ ಪದ್ಧತಿ ಇನ್ನೂ ಚಾಲ್ತಿಯಲ್ಲಿದೆ. ಈ ಸಂಘದ ಸ್ಥಾಪನೆಯೊಂದಿಗೆ 'ಅರುಣ' ಎಂಬ ಕೈಬರಹದ ತ್ರೈಮಾಸಿಕ ಪತ್ರಿಕೆಯನ್ನು ಹೊರತಂದರು (ಅನುಬಂಧದಲ್ಲಿ ಇದರ ಪ್ರತಿಯ ಮಾಹಿತಿಗಳಿವೆ ಪು.169 ನೋಡಿ). ಅರುಣ ಪತ್ರಿಕೆಯಲ್ಲಿ ರಂಗಂಪೇಟೆ ಕನ್ನಡ ಸಾಹಿತ್ಯ ಸಂಘದ ಬಗ್ಗೆ ಲಾವಣಿಯೊಂದು ಪ್ರಕಟವಾಗಿರುವುದು ಗಮನಾರ್ಹವಾಗಿದೆ. ಅದರ ವಿವರ ಹೀಗಿದೆ.

**ರಂಗಂಪೇಟೆ ಕನ್ನಡ ಸಾಹಿತ್ಯ ಸಂಘ**

**ಸಂತೋಷದ ಕೂಟ**

**ಲಾವಣಿಕಾರ ಗುಲಾಮ್ ರಸೂಲ್ ಸಾಹೇಬ್**

ನಮಗೊಂದಾನಂದದ ಊಟ
ಕನ್ನಡ ಸಾಹಿತ್ಯ ಸಂಘ ರಂಗಂಪೇಟೆ ಒಳಗ
ಬಹುಕೀರ್ತಿ ಪಡೆದಿದೆ ಸಣ್ಣ ವಯಸ್ಸದೊಳಗ
ಬುರ್ಲಿಬಿಂದು ಮಾಧವಚಾರ್ಯ, ಬೆಟಗೇರಿ ಕೃಷ್ಣಶರ್ಮ
ವೆಂಕಟ್ರಾಮಯ್ಯ ಧರಣೇಂದ್ರಯ್ಯನವರ ಮತ್ತು
ಇನ್ನಿತರ ಜನರು
ಬಂದು ಹೋಗಿದ್ದ ಮಹನೀಯರ
ಸಂತೋಷದ ಕೂಟ......
ರುದ್ರಸ್ವಾಮಿ ಬುದ್ಧಿವಂತಶೆಟ್ಟಿಯವರ
ಮಾಡಿ ಕೇಂದ್ರ ಸಂಘದಲ್ಲಿ ಕೀರ್ತಿ ಬೆಳೆಸಿದವರ
ಸಗರ ಕೃಷ್ಣಾಚಾರಿ, ಬಂಡಿ ಗುರಾಚಾರಿ ಕೊಳ್ಳೂರ ಜಾಗಿರದಾರ
ಶ್ರೀನಿವಾಸಾ ಚಾರಿ ಸಂಘ ಕಟ್ಟಿದವರ
ಒಳ್ಳೆ ಸಹಾಯ ನೀಡಿದವರ
ನಾಡು ನುಡಿಯ ಸೇವಕರ
ಸಂತೋಷದ ಕೂಟ...........
ಪರಿಷತ್ ಪರೀಕ್ಷೆ, ಕನ್ನಡ ಕಾವ, ಜಾಣ
ಬಹಳ ಜನರು ಆಗಿದ್ದಾರು ಇದರಲ್ಲಿ ಉತ್ತೀರ್ಣ
ಸದಾಶಿವ ಭಟ್ಟ, ರಾಜ್ ಜೋಷಿ, ನರಸಿಂಹಾಚಾರಿ
ಮೇಲಗಿರಿ ಮಾಸ್ತರ, ತ್ರಿವೇದಿ ನಾಗಣ್ಣ ಮತ್ತು
ಕುಲಕರ್ಣಿ ಶೀನಣ್ಣಾ ಆಗ್ಯಾರ ಒಳ್ಳೆ ಕಾವ ಜಾಣ
ಸಂತೋಷದ ಕೂಟ...........
ಆದಿತ್ಯವಾರ ಒಂದು ಫೆಬ್ರುವರಿ ದಿವಸ

ಮಾಡಿ ಮಂಡಾಳು ವಗ್ಗರಣೆ ಕರದಂಟ ಸೊಗಸ
ಇಪ್ಪತ್ತೈದು ಜನ ಮಿತ್ರರು ಕೂಡಿ ಹತ್ತು ಬಡಿದು
ವನ ಭೋಜನ ಮಾಡಿ
ಕಾಫಿಯ ಕುಡಿಯುತ್ತ ಮುದ್ರಿಕ ಸಂಗೀತ
ಕೇಳುತ್ತ ಕಳೆದೇವ್ರಿ ನಾಲ್ಕಾರು ತಾಸ
ಸಂತೋಷದ ಕೂಟ.........
ಕೊನೆಯಲ್ಲಿ ಒಂದು ಸಭೆ ಮಾಡಲಾಗಿ
ಶ್ರೀರುದ್ರಸ್ವಾಮಿ ಇವರನ್ನು ಅಧ್ಯಕ್ಷರನ್ನಾಗಿ
ಗುರುಚಾರ್ಯ, ತ್ರಿವೇದಿ ಗಿರೆಪ್ಪಾ ಬುದ್ಧಿವಂತಶೆಟ್ಟಿ
ಡಿ.ಗೋವಿಂದಪ್ಪಾ ನಮ್ಮಲ್ಲಿ ಪ್ರಮುಖರು
ಇವರು ಭಾಷಣ ಮಾಡಿದವರ
ಮಾವಿನ ತೋಪು ಅಸೀಫ್ ನಗರ
ಸಂತೋಷದ ಕೂಟ.........
ಸಂತೋಷ ಶರಣ ಪಠ ಮಾಡಿ ಹೇಳ್ತಾನ
ಕನ್ನಡ ಸಾಹಿತ್ಯ ಸಂಘದ ಸಂಕ್ಷಿಪ್ತ ಮಜಕೂರ
ನಾಡಿನಲ್ಲಿ ಒಳ್ಳೇ ಶ್ರೇಷ್ಟರಾಗಬೇಕು
ಗಾಂಧೀ ಮಹಾತ್ಮರಂತೆ ಕೀರ್ತಿ ಪಡೆಯಬೇಕು
ಅಕ್ಕ ತಂಗಿದೇರಾ ಕನ್ನಡ ನಾಡಿನ ಭಾಂದವರ
ಭಾರತ ಮಾತೆಯ ಸೇವಕರ
ನೀವು ಹೊಸ್ತಿಲು ದಾಟಿ ಕೊಡಬೇಕು
ಸಂಘಕ್ಕೆ ತಮ್ಮ ಭೇಟಿ
ಸಂತೋಷದ ಕೂಟ......

ಸಂಗ್ರಹ
ಅರುಣ ಪತ್ರಿಕೆ, ೨೪ನೇ ಪುಟ
ಸಂಪಾದಕರು, ರುದ್ರಸ್ವಾಮಿ

ಹೀಗೆ ಸ್ವಾತಂತ್ರ್ಯಪೂರ್ವದಲ್ಲಿ ಸ್ಥಾಪಿತವಾದ ಸಂಘವು ಕನ್ನಡ ಪರವಾದ ಕೆಲಸವನ್ನು ಮಾಡಿ ಕನ್ನಡಗರಲ್ಲಿ ಜಾಗೃತಿಯನ್ನುಂಟು ಮಾಡಿದವು. ನಿಜಾಂ ಅವರ ಸರ್ಕಾರದ ವಿರುದ್ಧ ಈ ಜನರು ಸಂಘಟಿತರಾಗುವಲ್ಲಿ ಅರುಣ ಪತ್ರಿಕೆ ಮತ್ತು ಕನ್ನಡ ಸಾಹಿತ್ಯ ಸಂಘ ಪ್ರಮುಖ ಪಾತ್ರವಹಿಸಿವೆ.

ಹೀಗೆ ಮೇಲಿಂದ ಮೇಲೆ ಕಾರ್ಯಕ್ರಮಗಳು ಯಾವುದೇ ಸದ್ದುಗದ್ದುಲವಿಲ್ಲದೆ ನಡೆಯುತ್ತಾ ಹೋದವು. ಜನರು ಕನ್ನಡ ಸಾಹಿತ್ಯ ಸಂಘದ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕನ್ನಡ ಭಾಷೆಯ ಮಹತ್ವ, ಪ್ರಾಚೀನತೆಗಳನ್ನು ತಿಳಿದುಕೊಂಡು, ಕನ್ನಡಾಭಿಮಾನವನ್ನು ಬೆಳೆಸಿಕೊಂಡರು. ಕನ್ನಡ ಮಾತನಾಡಬೇಕೆಂದರೆ ನಿರ್ಬಂಧವಿದ್ದಂತಹ ನಿಜಾಂ ಆಳ್ವಿಕೆಯ ಸಮಯದಲ್ಲಿ ಕೆಲವರು ಧೈರ್ಯದಿಂದ ಕನ್ನಡ ಭಾಷೆಯ ಬೆಳವಣಿಗೆಗಾಗಿ ಅವಿರತ ಪ್ರಯತ್ನ ನಡೆಸಿದರು. ಕನ್ನಡದ ಮೂಲಕವೇ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಿದರು.

ಈ ರೀತಿಯಾಗಿ ಅನೇಕ ಮಹತ್ತರವಾದ ಉದ್ದೇಶಗಳನ್ನಿಟ್ಟುಕೊಂಡು ಸ್ಥಾಪನೆಯಾದ ರಂಗಂಪೇಟೆಯ ಕನ್ನಡ ಸಾಹಿತ್ಯ ಸಂಘವು ಸಾಧಿಸಿದ ಸಾಧನೆ ಅಪಾರವಾಗಿದೆ. ಕನ್ನಡ ಕಾರ್ಯಕ್ರಮಗಳ ಮೇಲೆ ನಿರ್ಬಂಧವಿದ್ದ ಕಾಲದಲ್ಲಿ ಈ ಸಂಘವು ಹೈದರಾಬಾದ ವಿಮೋಚನಾ ಚಳುವಳಿಯಲ್ಲಿ ವ್ಯಕ್ತಿಯಂತೆ ಕಾರ್ಯನಿರ್ವಹಿಸಿದೆ. ಅನೇಕ ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಜೊತೆಗೆ ಹೈದರಾಬಾದ ಕರ್ನಾಟಕದ ವಿಮೋಚನಾ ಹೋರಾಟಗಾರರಿಗೆ ಅಡಗಿಕೊಳ್ಳಲು ಆಶ್ರಯ ನೀಡಿತು. ಈ ಸಂಘದ ಸದಸ್ಯರು ಕಾರ್ಯಕರ್ತರು ಹೋರಾಟಗಾರರೊಂದಿಗೆ ಗುಪ್ತವಾಗಿ ಸಭೆ-ಸಮಾಲೋಚನೆಗಳನ್ನು ನಡೆಸುತ್ತಿದ್ದರು. ಈ ಸಂಘದ ಕಾರ್ಯಚಟುವಟಿಕೆಗಳು ಹೋರಾಟದಲ್ಲಿ ಮುನ್ನುಗ್ಗಲು ಪ್ರೇರಣೆ ನೀಡಿತು. ಹೋರಾಟದ ಹಲವಾರು ಮಹತ್ವದ ನಿರ್ಣಯಗಳು ಈ ಸಂಘದಲ್ಲಿಯೇ ರೂಪುಗೊಳ್ಳುತ್ತಿದ್ದವು. ಈ ಸಂಘವು ನಿಜಾಂ ಅವರ ವಿರುದ್ಧ ಕಾರ್ಯಯೋಜನೆಗಳನ್ನು ರೂಪಿಸಲು ವೇದಿಕೆಯಾಗಿ ಕಾರ್‍ಯನಿರ್ವಹಿಸಿತ್ತು.

* * * * *

ಸುರಪುರದ ಕನ್ನಡ ಸಾಹಿತ್ಯ ಸಂಘ ಹಾಗೂ ರಂಗಪೇಟೆಯ ಸಾಹಿತ್ಯ ಸಂಘಗಳು ಸಾಹಿತ್ಯ ಚಟುವಟಿಕೆಗಳನ್ನು ಆರಂಭಿಸುವ ಮೂಲಕ ಕನ್ನಡ ಭಾಷಾ ಬೆಳವಣಿಗೆಗೆ ಶ್ರಮಿಸಿದವು. ಸಾಹಿತ್ಯಾಭಿವೃದ್ಧಿಯು ರಾಷ್ಟ್ರೀಯತೆಯ ಪ್ರಚಾರಕ್ಕೆ ಪುಷ್ಟಿ ನೀಡಿತು. ಒಂದು ವೇಳೆ ಈ ತರಹದ ಸಂಘಸಂಸ್ಥೆ ಸ್ಥಾಪನೆಯಾಗದಿದ್ದರೆ ಜನರು ಕನ್ನಡ ಭಾಷೆಯನ್ನು ಅರಿಯದೇ ಇರುವ ಸ್ಥಿತಿಯಲ್ಲಿರುತ್ತಿದ್ದರು. ಕನ್ನಡ ಸಾಹಿತ್ಯ ಸಂಘವು ಮಾತ್ರ ಕನ್ನಡ ಕಾರ್ಯಕ್ರಮಗಳನ್ನು ಸಂಘಟಿಸುವ ವೇದಿಕೆಯಾಗಿತ್ತು. ಸಂಪೂರ್ಣವಾಗಿ ಉರ್ದುಮಯವಾಗಿದ್ದಂತಹ ಪರಿಸ್ಥಿತಿಯಲ್ಲಿ ಸುರಪುರ ಮತ್ತು ರಂಗಂಪೇಟೆಯ ಜನರು ಕನ್ನಡ ಭಾಷೆಯ ಉಳಿವಿಗಾಗಿ ಶ್ರಮಿಸಿರುವುದು ನಿಜಕ್ಕೂ ಮೆಚ್ಚುವಂತಹದ್ದು. ಇದು ಜನರಲ್ಲಿರುವ ಕನ್ನಡಾಭಿಮಾನವನ್ನು ಎತ್ತಿ ತೋರಿಸುತ್ತದೆ.

ಕನ್ನಡ ಸಾಹಿತ್ಯ ಸಂಘವನ್ನು ಸ್ಥಾಪಿಸಿರುವ ಈ ಭಾಗದ ಜನರ ಧೈರ್ಯ ಮೆಚ್ಚಬೇಕಾದದ್ದು. ಈ ಸಂಘಗಳ ಸ್ಥಾಪನೆಯ ಮೂಲಕ ಕನ್ನಡಿಗರಲ್ಲಿ ದೇಶಾಭಿಮಾನವನ್ನು ಜಾಗೃತಗೊಳಿಸಲಾಯಿತು. ಇದರಿಂದ ನಿಜಾಂ ಸರ್ಕಾರದ ನಿರಂಕುಶಾಡಳಿತವನ್ನು ಕಿತ್ತೊಗೆಯುವಲ್ಲಿ ಕನ್ನಡಿಗರ ಪಾತ್ರ ಎಂತಹದು ಎಂದು ತಿಳಿದುಬರುತ್ತದೆ. ನಿಜಾಂ ಆಳ್ವಿಕೆಯಲ್ಲಿ ಕನ್ನಡ ಭಾಷೆಗೆ ಉಳಿಗಾಲವೇ ಇಲ್ಲದ ಸಂದರ್ಭದಲ್ಲಿ ಸ್ಥಾಪನೆಯಾದ ಈ ಸಾಹಿತ್ಯ ಸಂಘಗಳು ಇಂದಿನವರೆಗೂ ಕನ್ನಡ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ. ಈ ಸಂಘಗಳು ಸ್ಥಾಪನೆಯಾಗದಿದ್ದರೆ ಈ ಪ್ರದೇಶವು ಕೂಡ ಉರ್ದುಮಯವಾಗಿರುತ್ತಿತ್ತು. ಈ ಸಂಘಗಳ ಸ್ಥಾಪನೆಯಿಂದ ಜನರಲ್ಲಿ ನಾಡಿನ, ಭಾಷೆಯ ಬಗ್ಗೆ ಚಿಂತನೆ, ಎಲ್ಲವನ್ನು ವಿಮರ್ಶೆ

ಮಾಡುವ ಚಿಕಿತ್ಸಕ ಬುದ್ಧಿ ಜಾಗೃತವಾಯಿತು. ಹೀಗೆ ಕನ್ನಡ ಸಾಹಿತ್ಯ ಸಂಘವು ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

ಸುರಪುರ ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದಂತೆ ಈ ಭಾಗದ ಪತ್ರಿಕೆಗಳು ಕಾರ್ಯನಿರ್ವಹಿಸಿದ ರೀತಿ ಶ್ಲಾಘನೀಯವಾಗಿದೆ. ಈ ಭಾಗದ ಪತ್ರಿಕೆಗಳಾದ 'ನೈಜಾಂ ನ್ಯಾಯ ತೀರ್ಪು, 'ಅರುಣ', 'ಸುರಪುರ ಸಮಾಚಾರ' ಎಂಬ ಪತ್ರಿಕೆಗಳು ನಿಜಾಂ ಸರ್ಕಾರದ ಬಗ್ಗೆ ಉಗ್ರಲೇಖನಗಳನ್ನು ಬರೆಯುವುದರ ಮೂಲಕ ವಿರೋಧವನ್ನು ವ್ಯಕ್ತಪಡಿಸಿರುವುದು ಕಂಡುಬಂದಿದೆ. ನಿಜಾಂ ಅವರ ಆಳ್ವಿಕೆಗೊಳಪಟ್ಟ ಈ ಪ್ರದೇಶದಲ್ಲಿ ಉರ್ದು ಭಾಷೆ ಪ್ರಾಮುಖ್ಯತೆ ಹೊಂದಿತ್ತು. ಕನ್ನಡ ಭಾಷೆ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಸಂದರ್ಭದಲ್ಲಿ ಜನ್ಮತಾಳಿದ ಈ ಪತ್ರಿಕೆಗಳು ಜನರಲ್ಲಿ ಭಾಷಾಭಿಮಾನ, ದೇಶಾಭಿಮಾನವನ್ನು ಜಾಗೃತಗೊಳಿಸಿ ನಿಜಾಂ ಅವರ ನಿರಂಕುಶ ವರ್ತನೆಯ ವಿರುದ್ಧ ವಿಮೋಚನಾ ಹೋರಾಟ ಕೈಗೊಳ್ಳಲು ಪ್ರೇರಣೆ ನೀಡಿದವು. ನಿಜಾಂ ಅವರ ವಿರುದ್ಧ ಬರೆದ ಪತ್ರಿಕೆಗಳಿಗೆ ನಿರ್ಬಂಧವಿದ್ದಂತಹ ಕಾಲದಲ್ಲಿ ನಿಜಾಂ ಸರ್ಕಾರಕ್ಕೆ ಹೆದರದೆ ಧೈರ್ಯವಾಗಿ ಪತ್ರಿಕೆಗಳನ್ನು ಪ್ರಕಟಿಸಿದ ಸಂಪಾದಕರ ಕಾರ್ಯ ಗಮನಾರ್ಹವಾದದ್ದು. ಈ ಪತ್ರಿಕೆಗಳಲ್ಲಿ ಬಂದಿರುವ ವಿಷಯಗಳಿಂದ ಜಾಗೃತರಾದ ಜನರು ವಿಮೋಚನಾ ಹೋರಾಟದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಯಾಗಿ ಹೈದರಾಬಾದ ಸಂಸ್ಥಾನವನ್ನು ನಿಜಾಂ ಅವರ ಆಳ್ವಿಕೆಯಿಂದ ಮುಕ್ತಗೊಳಿಸಿದರು. ಪತ್ರಿಕೆಗಳು ಈ ನಿಟ್ಟಿನಲ್ಲಿ ಇಟ್ಟ ದಿಟ್ಟ ಹೆಜ್ಜೆಗಳು ಇದಕ್ಕೆ ನಿದರ್ಶನವಾಗಿವೆ.

ವಿಮೋಚನಾ ಹೋರಾಟಕ್ಕೆ ಸಹಕಾರಿಯಾದ ಇನ್ನೊಂದು ಅಂಶವೆಂದರೆ ಕನ್ನಡ ಸಾಹಿತ್ಯ ಸಂಘಗಳು. ನಿಜಾಂ ಅವರ ಆಳ್ವಿಕೆಯ ಕಾಲದಲ್ಲಿ ಸ್ಥಾಪನೆಗೊಂಡ ಸುರಪುರ ಮತ್ತು ರಂಗಪೇಟೆಯ ಕನ್ನಡ ಸಾಹಿತ್ಯ ಸಂಘಗಳು ಕನ್ನಡ ಭಾಷೆ, ಧರ್ಮ, ಸಂಸ್ಕೃತಿಯ ಉಳಿವಿಗಾಗಿ ಹೋರಾಡಿದವು. ಕನ್ನಡ ಕಾರ್ಯಕ್ರಮಗಳು ನಡೆಯಬಾರದೆಂಬ ನಿರ್ಬಂಧವಿದ್ದ ಆ ಕಾಲದಲ್ಲಿ ಅಂದರೆ ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಈ ಸಂಘಗಳು ಸ್ಥಾಪನೆಯಾದದ್ದು ಹೋರಾಟದ ಮುಖ್ಯ ಘಟ್ಟಗಳಲ್ಲಿ ಒಂದು ಸಂಗತಿ. ಕನ್ನಡ ಭಾಷೆಯ ನೆಲೆಗಟ್ಟನ್ನು ಭದ್ರಪಡಿಸುವಲ್ಲಿ ಈ ಸಂಘಗಳ ಪಾತ್ರ ಹಿರಿದು. ಕನ್ನಡ ಪರವಾದ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಕನ್ನಡಿಗರ ಮೆಚ್ಚುಗೆಗೆ ಪಾತ್ರವಾಗಿವೆ ಎಂದರೂ ತಪ್ಪಾಗುವುದಿಲ್ಲ. ಅಲ್ಲಿಂದ ಇಲ್ಲಿಯವರೆಗೂ ಈ ಸಂಘಗಳು ಅವ್ಯಾಹತವಾಗಿ ಕನ್ನಡದ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತವೆ. ಕನ್ನಡ ಸಾಹಿತ್ಯ ಸಂಘಗಳ ಕಾರ್ಯಚಟುವಟಿಕೆಗಳು ಕನ್ನಡಿಗರಲ್ಲಿ ಸ್ವಾಭಿಮಾನ, ಹೋರಾಟ ಮಾಡಬೇಕೆನ್ನುವ ಮನೋಬಲ ಹಾಗೂ ಸ್ವಾತಂತ್ರ್ಯವಾಗಬೇಕೆಂಬ ಬಯಕೆ ಮೂಡಿ ಬಂದವು. ಈ ಮನೋಭಾವನೆಯೇ ಮುಂದೆ ಗಡಿಗಳಲ್ಲಿ ಶಿಬಿರಗಳ ಸ್ಥಾಪನೆಗೆ ಕಾರಣವಾಯಿತು.

ಈ ಶಿಬಿರವು ಹೋರಾಟಗಾರರಿಗೆ ಒಂದು ವೇದಿಕೆಯಾಗಿತ್ತು. ಅಲ್ಲಿ ಎಲ್ಲರೂ ಸೇರಿ ಹೋರಾಟದ ರೂಪುರೇಷಗಳನ್ನು ಹಾಕಿ ಗುಂಪುಗಳನ್ನಾಗಿ ಮಾಡಿ ಅವರಿಗೆ ಅವರವರದೇಯಾದ ಜವಾಬ್ದಾರಿ ನೀಡುತ್ತಿದ್ದರು.

ಶಿಬಿರಗಳ ಮೂಲಕ ಇವರು ನಿಜಾಂ ಸರ್ಕಾರದ ವಿರುದ್ಧ, ರಜಾಕಾರರ ವಿರುದ್ಧ ಪ್ರಬಲ ಪ್ರತಿಭಟನೆಗಳನ್ನು ಕೈಗೊಂಡರು. ಈ ಹೋರಾಟ ಯಶಸ್ವಿಯಾಗಲು ಮುಂಬೈ ಸರ್ಕಾರದ ಪೋಲೀಸರು ಮತ್ತು ಪೋಲೀಸ್ ಕಾರ್ಯಾಚರಣೆಯೂ ಕೂಡಾ ಇದರಲ್ಲಿ ಭಾಗಿಯಾಗಿವೆ.

* * * * *

**ಅಡಿಟಿಪ್ಪಣಿಗಳು**

೧. ಈ ಪತ್ರಿಕೆಯು ವಿ.ಎಚ್.ದೇಸಾಯಿಯವರ ಸಂಪಾದಕತ್ವದಲ್ಲಿ ೨೬ ಜನವರಿ ೧೯೪೭ರಂದು ಆರಂಭವಾಯಿತು. ಈ ಪತ್ರಿಕೆಯು ೧೨ ಪುಟಗಳನ್ನು ಅನೇಕ ಚಿತ್ರಗಳನ್ನು ಒಳಗೊಂಡಿದೆ. ತ್ರಿವರ್ಣ ಧ್ವಜ ಹಾಗೂ ಗಾಂಧೀಜಿಯ ಭಾವಚಿತ್ರವನ್ನು ಮುಖ ಪುಟಗಳಲ್ಲಿ ಮುದ್ರಿಸಿ ರಾಷ್ಟ್ರೀಯ ಮನೋಭಾವನೆಯನ್ನು ಹೆಚ್ಚಿಸುವಂತಹ ಲೇಖನಗಳಿಂದ ಈ ಪತ್ರಿಕೆ ಕೂಡಿದೆ. ಈ ಪತ್ರಿಕೆಯು ಹೈದರಾಬಾದ ಚಂಚಲಗೂಡಾ ಕೇಂದ್ರಕಾರ್ಯಗೃಹದ ಮೂಲಕ ಹೊರಹೊಮ್ಮಿತು. ವಾರದಲ್ಲಿ ಎರಡು ಸಲ ಪತ್ರಿಕೆಯನ್ನು ಹೊರಡಿಸಲಾಗುತ್ತಿತ್ತು. ಇದರಲ್ಲಿ ಬಂಧೀನಗರ ಗಣರಾಜ್ಯ, ಕಾಂಗ್ರೇಸ್, ಕಮ್ಯುನಿಸ್ಟ, ಸೋಶಲಿಸ್ಟ್ ನಾಯಕರುಗಳ ಲೇಖನಗಳಿಂದ ಈ ಪತ್ರಿಕೆ ಅಲಂಕೃತವಾಗಿರುತ್ತಿತ್ತು (ಸುಭಾಸಚಂದ್ರದೊಡ್ಡನಿ ೨೦೦೨ : ೭೦).

"ಪಾಳೇಗಾರಿಕೆ ಹೈದರಾಬಾದಿನಲ್ಲಿ ಪ್ರಜಾಪ್ರಭುತ್ವವು ವರ್ಧಿಸಲಿ ಮತ್ತು ನಿಜಾಂ ಅವರು ರಾಷ್ಟ್ರದ ಮುಖ್ಯ ಪ್ರವಾಹದಲ್ಲಿ ಸಂತೋಷದಿಂದ ಸೇರಲಿ" ಎಂಬುದೇ ಈ ಪತ್ರಿಕೆಯ ಧ್ಯೇಯವಾಗಿತ್ತು. ವಿ.ಎಚ್. ದೇಸಾಯಿ, ರಮಾನಂದ ತೀರ್ಥ, ಡಾ.ಜಿ.ಎಸ್.ಮೇಲ್ಕೋಟೆ, ಎಸ್.ಸಿ.ಹೆಡಾ, ಡಾ.ಚನ್ನಾರೆಡ್ಡಿ, ಪಂಡಿತ ನರೇಂದ್ರಜಿ ಮೊದಲಾದವರು ಚಂಚಲಗೂಡಾ ಕಾರಾಗೃಹದಲ್ಲಿ ಬಂಧಿಗಳಾಗಿದ್ದರು. ಇವರು ಕಾರಾಗೃಹದಲ್ಲಿ ಸುಮ್ಮನೆ ಕೂಡದೇ ೯ ಪರಿಚ್ಛೇದಗಳನ್ನೊಳಗೊಂಡ ಒಂದು ಪರಿಸರಕ್ಕೆ ಹೊಂದುವಂತಹ ಸಂವಿಧಾನವನ್ನು ರಚಿಸಿದರು. ಇದರ ಜೊತೆಗೆ ಕಾರಾಗೃಹದ ಶಿಬಿರವನ್ನು ಗಣರಾಜ್ಯವೆಂದು ಘೋಷಿಸಿದ್ದಕ್ಕೆ 'ಬಂಧೀನಗರ' ಎಂದು ಹೆಸರಿಡಲಾಯಿತು (ಪಾಟೀಲ, ೧೯೯೯: ೩೩೧-೩೩೨).

ಈ ಪತ್ರಿಕೆ ರಾಜಕೀಯ ಶಿಕ್ಷಣದ ಜೊತೆಗೆ ಹೊಸಗತಿಗಳತ್ತ ಕಾರ್ಯವನ್ನು ವಿಸ್ತರಿಸಿಕೊಳ್ಳಲು ಹುರಿದುಂಬಿಸುತ್ತಿತ್ತು. ಪತ್ರಿಕೆಯ ಸಂಪಾದಕರು ಈ ಕ್ರಾಂತಿಕಾರಕ ಬದಲಾವಣೆಗೆ ಕಾರಣಕರ್ತರಾಗಿರುತ್ತಿದ್ದರು. ಈ ಪತ್ರಿಕೆಯ ವಿಚಾರಗಳ ಬಗ್ಗೆ ಟೀಕೆ, ಚರ್ಚೆಗಳು ನಡೆಯುತ್ತಿದ್ದವು. ನಿಜಾಂ ಅವರ ನಿರಂಕುಶ ಆಡಳಿತವನ್ನು ಖಂಡಿಸಿ ಕ್ರಾಂತಿಕಾರಕ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದರು. ಈ ಅಂಶಗಳನ್ನು ಗಮನಿಸಿದಾಗ ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಈ ಪತ್ರಿಕೆಗಳು ಜನರಿಗೆ ಬೆಂಬಲ ನೀಡುವುದರ ಮೂಲಕ ಅವರ ಕ್ರಾಂತಿಕಾರಿ ಹೋರಾಟ ಯಶಸ್ವಿಯಾಗಲು ಸಾಧ್ಯವಾಯಿತು.

೨. ಶೋಯೆಬುಲ್ಲಾಖಾನರು ಉರ್ದು ಭಾಷೆಯಲ್ಲಿ 'ಇಮರೋಜ್ ಪತ್ರಿಕೆ'ಯನ್ನು ಆರಂಭಿಸಿದರು. ಈ ಪತ್ರಿಕೆ ಪತ್ರಿಕಾ ಮಾಧ್ಯಮದ ಮೂಲಕ ಹೊಸ ಚಳುವಳಿಯನ್ನು ಹುಟ್ಟು ಹಾಕಿತು. ಈ ಪತ್ರಿಕೆಯು ನಿಜಾಂ ಅವರ ಆಳ್ವಿಕೆಗೆ ಹೆದರದೇ ನಿರ್ಭಯ ಲೇಖನಗಳಿಗೆ ಹಾಗೂ ಕ್ರಾಂತಿಕಾರಿ ಸಂಪಾದಕೀಯ ಲೇಖನಗಳಿಗೆ ಪ್ರಸಿದ್ಧಿ

ಪಡೆಯಿತು. ಶೋಯಬುಲ್ಲಾಖಾನರು ಹೈದರಾಬಾದ ಕರ್ನಾಟಕದಲ್ಲಿ ಪ್ರಭಾವಿ ಪತ್ರಕರ್ತನಾಗಿದ್ದರು (ಸುಭಾಸಚಂದ್ರ ದೊಡ್ಡನಿ, ೨೦೦೨:೭೨). 'ಇಮರೋಜ್' ಎಂಬ ಉರ್ದು ಪತ್ರಿಕೆಯ ಸಂಪಾದಕ ಶೋಯಬುಲ್ಲಾಖಾನರು "ಸ್ವಾತಂತ್ರ್ಯದ ಪರಿಕಲ್ಪನೆ", 'ಜಮೀನ್ದಾರಿ ಪದ್ಧತಿಯ ದೋಷಗಳು' ಮತ್ತು 'ತೆಲಂಗಾಣದ ಸಮತಾವಾದಿಗಳ ಸಿದ್ಧಾಂತ' ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಉಗ್ರ ಲೇಖನಗಳನ್ನು ಬರೆದರು. ಸರ್ಕಾರದ ನೀತಿಯನ್ನು ಕುರಿತು ಟೀಕೆ ಮಾಡಲು ನಿಜಾಂ ಅವರು ಅವಕಾಶ ಕೊಡದೆ ಅಂತಹ ಪತ್ರಿಕೆಗಳ ಮೇಲೆ ನಿಷೇಧ ಹೇರುತ್ತಿದ್ದರು(ನುಗಡೋಣಿ ೨೦೦೨:೧೪).

೧೯೧೯ರ ಸಮಯದಲ್ಲಿ ಶೋಯಬುಲ್ಲಾಖಾನರ ತಂದೆ ನಿಜಾಂ ಅವರ ಪೋಲೀಸ್ ಇಲಾಖೆಯಲ್ಲಿ ನೌಕರರಾಗಿ ಕಾರ್ಯನಿರ್ವಹಿಸುತ್ತಿದ್ದರು. ನಿಜಾಂ ಅವರ ವಿರೋಧಿ ನೀತಿಯನ್ನು 'ತಾಜ್' ಪತ್ರಿಕೆಯ ಮೂಲಕ ಲೇಖನಗಳನ್ನು ಬರೆದು ಕಳಿಸುತ್ತಿದ್ದರು. ನಂತರ ನಿಜಾಂ ಅವರು ಈ ಪತ್ರಿಕೆಯ ಮೇಲೆ ನಿಷೇಧ ಹೇರಿದ ಮೇಲೆ 'ಇಮರೋಜ್' ಎಂಬ ಪತ್ರಿಕೆಯನ್ನು ಆರಂಭಿಸಿದರು. ಇವರ ಉಗ್ರಲೇಖನಗಳಿಂದ, ಕಾಸಿಂ ರಜ್ವಿಯ ಆಡಳಿತದ ಕುತಂತ್ರಗಳ ಕುರಿತು ಈ ಪತ್ರಿಕೆ ಪ್ರಕಟಿಸುತ್ತಿತ್ತು. ಈ ಪತ್ರಿಕೆ ಹಿಂದೂ-ಮುಸ್ಲಿಂ ವಿರೋಧಿಯಾಗಿರದೇ ನಿಷ್ಪಕ್ಷಪಾತವಾದ, ನ್ಯಾಯಯುತವಾದ ಪರಿಣಾಮಕಾರಿಯಾದ ಲೇಖನಗಳನ್ನು ಒಳಗೊಂಡಿತ್ತು. ಈ ಪತ್ರಿಕೆ ಎಂದರೆ ಕಾಸಿಂ ರಜ್ವಿ ಮತ್ತು ನಿಜಾಮರು ಹೆದರುತ್ತಿದ್ದರು. ಮುಂದೆ ಈ ಪತ್ರಿಕೆ ತನ್ನ ಅಳಿವಿಗೆ ಕಾರಣವಾಗಬಹುದೆಂದು ತಿಳಿದು ನಿಜಾಂ ಅವರು ೨೨ ಅಗಸ್ಟ್ ೧೯೪೮ರಂದು ಶೋಯೆಬುಲ್ಲಾಖಾನರನ್ನು ಕೊಲೆ ಮಾಡಲಾಯಿತು (ಮಹಾಬಲೇಶ್ವರಪ್ಪ ೧೯೯೭:೨೧). ನಿಜಾಂ ಅವರ ಸರ್ಕಾರದ ವಿರುದ್ಧ ಪತ್ರಿಕೆಗಳಲ್ಲಿ ಲೇಖನ ಬರೆದರೆ ಇದೇ ಪರಿಸ್ಥಿತಿ ನಿಮಗೂ ಬರಬಹುದೆಂದೂ ನಿಜಾಂ ಅವರು ಎಚ್ಚರಿಸಿದನು. ಇಮರೋಜ್ ಪತ್ರಿಕೆಯು ಈ ಭಾಗದ ಜನತೆಯಲ್ಲಿ ಕೋಮುಸೌಹಾರ್ದ ವಾತಾವರಣವನ್ನುಂಟು ಮಾಡಿತು.

೩. ಮಣೂರ ಜಯತೀರ್ಥಾಚಾರ್ಯರು ಸುರಪುರದವರು. ಜಯತೀರ್ಥಾಚಾರ್ಯರು ನಾರಾಯಣಶಾಸ್ತ್ರಿ ಹೆಬ್ಬಾಳ, ಬಕ್ರಿ ಕೃಷ್ಣಾಚಾರ್ಯ ಮತ್ತು ಇತರರೊಡಗೂಡಿ "ಶಾರದಾ ವಾಚನಾಲಯ"ವನ್ನು ಸ್ಥಾಪಿಸಿದರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ವಿದ್ಯಾರ್ಥಿ ದೆಸೆಯಲ್ಲಿರುವಾಗ ಅಭ್ಯಾಸ ಮಾಡಿದ್ದರು. ೧೯೪೩ರಲ್ಲಿ ರಂಗಂಪೇಟೆಯಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯ ಸಂಘದೊಂದಿಗೆ ನಿರಂತರ ಸಂಪರ್ಕ ಹೊಂದಿದ್ದ ಇವರು 'ಅರುಣ' ಎಂಬ ಕೈಬರಹದ ಪತ್ರಿಕೆಯಲ್ಲಿ ಉತ್ತಮ ಲೇಖನಗಳನ್ನು ಬರೆಯುತ್ತಿದ್ದರು. ಭಾರತದ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿ ಬ್ರಿಟಿಷರ ವಿರುದ್ಧವಾಗಿರುವ ಸುದ್ದಿ ಸಂಗ್ರಹಿಸಿ ಪ್ರಜೆಗಳಿಗೆ ಮನದಟ್ಟಾಗುವಂತೆ ಪತ್ರಿಕೆಗಳಲ್ಲಿ ವರದಿ ಮಾಡುತ್ತಿದ್ದರು. ಜಯತೀರ್ಥಾಚಾರ್ಯರು 'ಪರಿಮಲಾಚಾರ್ಯರ ಪಟ್ಟಬಂಧ', 'ಜಯತೀರ್ಥ ವಿಜಯ', 'ಶ್ರೀಜಗನ್ನಾಥದಾಸರ ಹರಿಕಥಾಮೃತಸಾರ, ಗುರುಗುಣಗಾನಾಮೃತಂ' ಎಂಬ ಕೃತಿಗಳನ್ನು ಬರೆದಿದ್ದಾರೆ. ಇವರು ಸಂಸ್ಕೃತ, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದಿರುವುದು ನಾಗಪ್ಪ ತ್ರಿವೇದಿಯವರು ಸಂಪಾದಿಸಿದ ಕೃತಿಯಿಂದ ತಿಳಿದುಬಂದಿದೆ (ತ್ರಿವೇದಿ ೨೦೦೪:೧೩೪-೧೩೭).

೪. ಸುರಪುರದಲ್ಲಿ ಮೊಟ್ಟ ಮೊದಲ ಬಾರಿಗೆ ಹೆಬ್ಬಾಳ ನಾರಾಯಣಶಾಸ್ತ್ರಿಗಳು ಭಕ್ರಿ ಕೃಷ್ಣಾಚಾರ್ಯರು, ಜಯತೀರ್ಥಾಚಾರ್ಯರು ಮತ್ತು ರಾಮಕೃಷ್ಣಾಚಾರ್ಯರು 'ಶಾರದಾ ವಾಚನಾಲಯ'ವನ್ನು ಸ್ಥಾಪಿಸಿದರು. ಈ ವಾಚನಾಲಯಕ್ಕಾಗಿ ಹೊಸ ಹೊಸ ಪುಸ್ತಕಗಳನ್ನು, ವಾರಪತ್ರಿಕೆಗಳನ್ನು ಲಿಂಗಸೂರಿನಿಂದ ತರಿಸುತ್ತಿದ್ದರು. ಈ ವಾಚನಾಲಯದಲ್ಲಿ ಒಂದು ಸಾವಿರ ಅತ್ಯುತ್ತಮ ಗ್ರಂಥಗಳನ್ನು ಹೊಂದಿಸಿಟ್ಟಿದ್ದರು. ನಾನಪ್ಪ ದೇಸಾಯಿ ಅವರು ಶಾರದಾ ವಾಚನಾಲಯದಿಂದ ಪ್ರತಿ ತಿಂಗಳು 'ಅಭ್ಯುದಯ' ಎಂಬ ಕೈ ಬರಹದ ಪತ್ರಿಕೆಯನ್ನು ಪ್ರಕಟಿಸಿ ವಾಚನಾಲಯದ ಓದುಗರಿಗೆ ಪೂರೈಸುತ್ತಿದ್ದರು. ನಂತರ ಈ ವಾಚನಾಲಯವನ್ನು ಕನ್ನಡ ಸಾಹಿತ್ಯ ಸಂಘುವನ್ನಾಗಿ ಪರಿವರ್ತಿಸಿದರು. ಕನ್ನಡ ಸಾಹಿತ್ಯ ಸಂಘುದಲ್ಲಿ ನಾಡಹಬ್ಬವನ್ನು ಆಚರಿಸುವುದರ ಮೂಲಕ ಕನ್ನಡ ಪರವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. (ಹೈದರಾಬಾದ ಕರ್ನಾಟಕ ವಿಶೇಷ ಪುರವಣಿ, ೦೯-೦೩-೨೦೦೬:೨)

೫. ನಾನಪ್ಪ ದೇಸಾಯಿಯವರು ಸುರಪುರದ 'ಶಾರದಾ ವಾಚನಾಲಯ' ಅಭಿವೃದ್ಧಿಗಾಗಿ ಶ್ರಮಿಸಿದವರಲ್ಲಿ ಒಬ್ಬರು. 'ಶಾರದಾ ವಾಚನಾಲಯ'ವು ಮುಂದೆ 'ಕನ್ನಡ ಸಾಹಿತ್ಯ ಸಂಘು' ಎಂದು ಪರಿವರ್ತನೆಗೊಂಡಿತು. ಈ ಸಂಘುದ ಮೂಲಕ ಅನೇಕ ಕನ್ನಡ ಕಾರ್ಯಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಕನ್ನಡಿಗರ ಗಮನ ಸೆಳೆಯಲಾಯಿತು. ನಿಜಾಂ ಕರ್ನಾಟಕ ಪರಿಷತ್ತಿನ ೩ನೇ ಅಧಿವೇಶನವನ್ನು ಸುರಪುರದಲ್ಲಿ ೧೯೪೨ರಲ್ಲಿ ನಡೆಸಲು ತೀರ್ಮಾನಿಸಲಾಗಿತ್ತು. ಈ ಅಧಿವೇಶನಕ್ಕೆ ಸುರಪುರದ ಅರಸರು ಸ್ಥಳವನ್ನು ಕೊಡಲು ಒಪ್ಪಿದ್ದರು. ನಂತರ ನಿಜಾಂ ಅವರ ಒತ್ತಡ ಸುರಪುರ ಅರಸರ ಮೇಲೆ ಹೆಚ್ಚಾದಾಗ ಅವರು ಸ್ಥಳವನ್ನು ಕೊಡಲು ನಿರಾಕರಿಸಿದರು. ನಾನಪ್ಪ ದೇಸಾಯಿಯವರು ಈ ಅಧಿವೇಶನವನ್ನು ಆನಂದ ವಿದ್ಯಾಲಯದ ಆವರಣದಲ್ಲಿ ನಡೆಸಲು ತೀರ್ಮಾನಿಸಿದರು. ನಾನಪ್ಪ ದೇಸಾಯಿವರ ನೇತೃತ್ವದಲ್ಲಿ ಅಧಿವೇಶನ ಅತ್ಯಂತ ಯಶಸ್ವಿಯಾಗಿ ನಡೆಯಿತು.(ಹೈದರಾಬಾದ ಕರ್ನಾಟಕ ವಿಶೇಷ ಪುರವಣಿ, ೦೯-೦೩-೨೦೦೬:೨)

೬. ಗುರಯ್ಯ ಸೂಗೂರಮಠ : ಇವರು ಸುರಪುರ ತಾಲೂಕಿನ ರಂಗಂಪೇಟೆ ಗ್ರಾಮದವರು. ಇವರು ಉರ್ದು ಮಾಧ್ಯಮದಲ್ಲಿ ಮುನಿಸಿಫಾಜಲ್‌ದವರಗೆ ಓದಿದರು. ಏಕೆಂದರೆ ನಿಜಾಂ ಅವರ ಆಳ್ವಿಕೆಯಲ್ಲಿ ಉರ್ದು ಭಾಷೆ ಆಡಳಿತದ ರಾಜ್ಯ ಭಾಷೆಯಾಗಿರುವುದರ ಜೊತೆಗೆ ಉರ್ದು ಭಾಷೆ ಶಿಕ್ಷಣದ ಮಾಧ್ಯಮವಾಗಿತ್ತು. ಗುರಯ್ಯನವರು ತಂದೆಯಿಂದ ಕನ್ನಡವನ್ನು ಕಲಿತರು. ಶಿಕ್ಷಣವನ್ನು ಮುಗಿಸಿದ ನಂತರ ಖಾಸಗೀ ಶಿಕ್ಷಕರಾಗಿ ಕನ್ನಡ ಶಾಲೆಯನ್ನು ತೆಗೆಯುವುದರ ಮೂಲಕ ಉಚಿತವಾಗಿ ಕನ್ನಡ ಪಾಠ ಮಾಡುತ್ತಿದ್ದರು. ಆ ಕಾಲಕ್ಕೆ ಉರ್ದು ಭಾಷೆ ಕಡ್ಡಾಯವಾಗಿದ್ದರೂ ಅದಕ್ಕೆ ಸಮನಾಗಿ ಕನ್ನಡ ಭಾಷೆಯನ್ನು ಮಕ್ಕಳಿಗೆ ಕಲಿಸುತ್ತಿದ್ದರು. ಅವರ ಈ ಕಾರ್ಯಕ್ಕೆ ಗುರುಮಿಟಕಲ್‌ನ ಶಾಂತವೀರಸ್ವಾಮಿಗಳು ಪ್ರೋತ್ಸಾಹ ನೀಡಿದರು (ತ್ರಿವೇದಿ ೨೦೦೪:೧೨೭).

೭. ಸಶಸ್ತ್ರ ವಿಭಾಗದ ಪ್ರಮುಖ ಕಾರ್ಯವೆಂದರೆ ಶಿಬಿರಾಧಿಪತಿಯ ಆಜ್ಞೆಯ ಮೇರೆಗೆ ಶಿಬಿರಗಳ ಕಾರ್ಯಕರ್ತರು ಪೋಲೀಸ್ ಠಾಣೆ, ಕರೋಡಗಿರಿ ನಾಕಾಗಳ ಮೇಲೆ ದಾಳಿ ಮಾಡುತ್ತಿದ್ದರು. ಇಲ್ಲಿರುವ ಸರ್ಕಾರಿ ದಾಖಲೆ ಪತ್ರಗಳನ್ನು ಸುಡುವುದು, ಸಂಪತ್ತನ್ನು ಲೂಟಿ ಮಾಡುವುದಾಗಿತ್ತು (ಮಹಾಬಲೇಶ್ವರಪ್ಪ, ೧೯೯೭:೧೨೭).

೮. ಗುಪ್ತಚಾರ ವಿಭಾಗದ ಕಾರ್ಯಚಟುವಟಿಕೆಗಳೆಂದರೆ ಶಿಬಿರದ ಕಾರ್ಯಕರ್ತರು ಭಿಕ್ಷುಕರಾಗಿ, ಕೊರವಂಜಿ ಹೀಗೆ ಮಾರುವೇಷದಲ್ಲಿ ಹಳ್ಳಿಗಳನ್ನು ಪ್ರವೇಶಿಸುತ್ತಿದ್ದರು. ರಜಾಕಾರರು ಹಿಂದೂಗಳ ಮೇಲೆ ನಡೆಸಿದ ಆಕ್ರಮಣದ ವಿವರಗಳನ್ನು ಪತ್ತೆಮಾಡಿ ಶಿಬಿರಗಳಿಗೆ ಕಳುಹಿಸುತ್ತಿದ್ದರು. ಹೀಗೆ ಮಾಹಿತಿಯನ್ನು ಪಡೆದುಕೊಂಡು ರಜಾಕಾರರಿಂದಾಗುವ ಅನಾಹುತವನ್ನು ತಪ್ಪಿಸುತ್ತಿದ್ದರು. ಚನ್ನಪ್ಪ ವಾಲಿ, ವೆಂಕೋಬರಾವ್ ಪದಕಿ, ಆರ್. ವಿ.ಬಿಡಪ್, ದತ್ತಾತ್ರೇಯರಾವ್ ಅವರಾದಿ, ಜಯತೀರ್ಥ ರಾಜಪುರೋಹಿತ ಮುಂತಾದವರು ಈ ವಿಭಾಗದ ಖ್ಯಾತ ಕಾರ್ಯಕರ್ತರಾಗಿದ್ದರು.

೯. ನಿಶಸ್ತ್ರ ವಿಭಾಗದ ಕಾರ್ಯಕರ್ತರ ಕಾರ್ಯವೆಂಧರೆ ಸ್ವರಾಜ್ಯದ ಆದರ್ಶವನ್ನು ಪ್ರಚಾರಪಡಿಸುವುದು, ರಜಾಕಾರರ ದೌರ್ಜನ್ಯವನ್ನು ಖಂಡಿಸುವುದು. ಹೈದರಾಬಾದ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ಸೇರಿಸಲು ಜನರನ್ನು ಸಂಘಟಿಸುವುದು. ಜನರಿಂದ ಆಹಾರ, ಹಣ ಮತ್ತ ಬಟ್ಟೆಗಳನ್ನು ಸಂಗ್ರಹಿಸಿ ಶಿಬಿರಗಳಿಗೆ ಸಾಗಿಸುವ ಕೆಲಸವನ್ನು ಇವರು ಮಾಡುತ್ತಿದ್ದರು.

೧೦. ಶರಣಗೌಡರು ಜೇವರ್ಗಿ ತಾಲೂಕಿನ ದುಮ್ಮದ್ರಿಯವರು. ಇವರು ವಿದ್ಯಾರ್ಥಿ ದೆಸೆಯಿದ್ದಾಗಲೇ 'ವಂದೇ ಮಾತರಂ' ಚಳುವಳಿಯ ಮೂಲಕ ಹೋರಾಟದಲ್ಲಿ ಧುಮುಕಿದರು. ರಜಾಕಾರರ ದಾಳಿ ಜನರ ಮೇಲೆ ತೀವ್ರವಾದಾಗ ರಜಾಕಾರರ ವಿರುದ್ಧ ಶಾಂತಿಯುತ ಮಾರ್ಗಗಳಿಂದ ಹೋರಾಡಲು ಸಾಧ್ಯವಿಲ್ಲವೆಂದು ಸಶಸ್ತ್ರ ಹೋರಾಟಕ್ಕೆ ಅವಕಾಶಕೊಡಿ ಎಂದು ಕಾಂಗ್ರೆಸ್ ಸಭೆಯಲ್ಲಿ ಬೇಡಿಕೆ ಇಟ್ಟಾಗ ಕಾಂಗ್ರೆಸ್ ಆ ಬೇಡಿಕೆಯನ್ನು ತಿರಸ್ಕರಿಸಿತು. ಆದರೂ ಈ ಕಾರ್ಯವನ್ನು ಬಿಡದೆ ರಮಾನಂದ ತೀರ್ಥರ ಸಲಹೆ ಮೇರೆಗೆ ಗಡಿಗಳಲ್ಲಿ ಶಿಬಿರವನ್ನು ಸ್ಥಾಪನೆ ಮಾಡಿ ರಜಾಕಾರರೊಂದಿಗೆ ಉಗ್ರ ಹೋರಾಟ ಕೈಗೊಂಡರು. ಇವರು ಸಿಂದಗಿ ಶಿಬಿರದ ಶಿಬಿರಾಧಿಪತಿಗಳಾಗಿದ್ದರು. ರಜಾಕಾರರ ಮೇಲೆ ದಾಳಿ ಮಾಡಿ ಗ್ರಾಮಗಳನ್ನು, ಗ್ರಾಮದ ಜನರನ್ನು ರಜಾಕಾರರ ದಾಳಿಯಿಂದ ಮುಕ್ತಗೊಳಿಸಿದರು. ಪೊಲೀಸ್ ಕಾರ್ಯಾಚರಣೆಯ ಸಮಯದಲ್ಲಿ ಭಾರತದ ಸೈನ್ಯಕ್ಕೆ ಸಹಾಯ ಮಾಡಿ ರಜಾಕಾರರನ್ನು ಈ ಭಾಗಗಳಿಂದ ಪಲಾಯನ ಮಾಡಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ (ಸಂದರ್ಶನ:ಸರ್ದಾರ ಶರಣಗೌಡ, ೨೩.೦೧.೨೦೦೬).

೧೧. ರಮಾನಂದ ತೀರ್ಥರು ಬಿಜಾಪುರ ಜಿಲ್ಲೆಯ ಸಿಂದಗಿಯಲ್ಲಿ ೩ ನವೆಂಬರ್ ೧೯೦೩ರಂದು ಜನಿಸಿದರು. ನಂತರ ಜನತಂತ್ರದ ವಿಕಾಸ ಎಂಬ ವಿಷಯದ ಬಗ್ಗೆ ಪ್ರೌಢ ಪ್ರಬಂಧ ಬರೆದು ಎಂ.ಎ.ಡಿಗ್ರಿ ಪಾಸಾದರು. ೧೯೩೮ರಲ್ಲಿ ರಮಾನಂದ ತೀರ್ಥರು ಮಹಾರಾಷ್ಟ್ರ ಪರಿಷತ್ತಿನ ಕಾರ್ಯದರ್ಶಿಯಾಗಿ ಆಯ್ಕೆಯಾದರು. ೧೯೪೭ರಲ್ಲಿ ಹೈದ್ರಾಬಾದ್ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ರಜಾಕಾರರ ದಬ್ಬಾಳಿಕೆ ಹೆಚ್ಚಾದಾಗ ರಮಾನಂದ ತೀರ್ಥರು ಗಡಿಗಳಲ್ಲಿ ಶಿಬಿರಗಳನ್ನು ಸ್ಥಾಪಿಸಲು ಹೋರಾಟಗಾರರಿಗೆ ಕರೆ ನೀಡಿದರು. ಇವರ ಸಲಹೆ ಮೇರೆಗೆ ಹೋರಾಟಗಾರರು ಗಡಿಶಿಬಿರಗಳ ಮೂಲಕ ಹೋರಾಟ ಕೈಗೊಂಡರು. ಭಾರತ ೧೫ ಆಗಸ್ಟ್ ೧೯೪೭ರಂದು ಸ್ವತಂತ್ರವಾದಾಗ ಹೈದರಾಬಾದ ಸಂಸ್ಥಾನ ಸ್ವತಂತ್ರವಾಗಿರಲಿಲ್ಲ. ನಂತರ ರಮಾನಂದ ತೀರ್ಥರ ಆಜ್ಞೆಯ ಮೇರೆಗೆ ೧೯೪೭ ಸೆಪ್ಟೆಂಬರ್ ೨ರಂದು 'ಧ್ವಜ ಸತ್ಯಾಗ್ರಹ' ಆರಂಭವಾಯಿತು. ಈ ಸತ್ಯಾಗ್ರಹದಲ್ಲಿ ಭಾಗಿಯಾದವರನ್ನು ಪೊಲೀಸ್‌ರು ಬಂಧಿಸಿದರು. ನಿಜಾಂ ಸರ್ಕಾರದ ವಿರುದ್ಧ ಕೈಗೊಂಡ ಹೋರಾಟದ

ಫಲವಾಗಿ 'ಪೊಲೀಸ್ ಕಾರ್ಯಾಚರಣೆ' ಆರಂಭವಾಗಿ ಹೈದರಾಬಾದ ಸಂಸ್ಥಾನ ಭಾರತದೊಳಗೆ ವಿಲೀನವಾಯಿತು. ಹೀಗೆ ಭಾರತದೊಳಗೆ ಹೈದರಾಬಾದ ಸಂಸ್ಥಾನ ವಿಲೀನವಾಗುವಲ್ಲಿ ರಮಾನಂದ ತೀರ್ಥರು ಕಾರ್ಯನಿರ್ವಹಿಸಿದ ರೀತಿ ಶ್ಲಾಘನೀಯವಾಗಿದೆ.

೧೨. ಕರೋಡಗಿರಿ ನಾಕಾಯೆಂದರೆ ತೆರಿಗೆಯನ್ನು ಸಂಗ್ರಹಿಸುವ ಕಚೇರಿಯಾಗಿದೆ. ಈ ಕರೋಡಗಿರಿ ನಾಕಾಗಳು ನಿಜಾಂ ಸರ್ಕಾರದ ವಶದಲ್ಲಿದ್ದವು. ಪ್ರತಿಯೊಂದು ಗ್ರಾಮಕ್ಕೂ ಕರೋಡಗಿರಿ ನಾಕಾ ಇರುತ್ತಿತ್ತು. ಇದರಲ್ಲಿ ಜನತೆಯಿಂದ ವಸೂಲಿ ಮಾಡಿದ ಹಣವನ್ನು ಕರೋಡಗಿರಿ ನಾಕಾದಲ್ಲಿ ಇಟ್ಟಿರಲಾಗುತ್ತಿತ್ತು. ಈ ಹೋರಾಟಗಾರರು ಈ ಕರೋಡಗಿರಿ ನಾಕಾಗಳ ಮೇಲೆ ದಾಳಿ ಮಾಡಿ ಅಲ್ಲಿಯ ಹಣವನ್ನು ಲೂಟಿ ಮಾಡಿ ಶಿಬಿರದ ಖರ್ಚಿಗಾಗಿ ಬಳಸುತ್ತಿದ್ದರು (ಪೊಲೀಸ್ ಪಾಟೀಲ್ ೨೦೦೨:೧೨೩).

೧೩. ಸುರಪುರದಲ್ಲಿ ಸ್ಥಾಪಿತವಾದ "ಕನ್ನಡ ಸಾಹಿತ್ಯ ಸಂಘ"ವು ಆರಂಭದಲ್ಲಿ ದೀಕ್ಷಾಚಾರ್ಯ ವಕೀಲ, ನಾನಪ್ಪ ದೇಸಾಯಿ, ಅಷ್ಟಾವಧಾನಿ ನರಸಿಂಹಶಾಸ್ತ್ರಿ, ರಾಘವೇಂದ್ರಾಚಾರಿ, ನರಸಿಂಹಾಚಾರ್ಯ ಡಬೀರ, ನಾಗಣ್ಣ ವಕೀಲರು ಈ ಸಾಹಿತ್ಯ ಸಂಘದ ಅಭಿವೃದ್ಧಿಗಾಗಿ ಸಲ್ಲಿಸಿದ ಸೇವೆ ಸ್ಮರಣೀಯವಾಗಿದೆ. ಇವರ ಮರಣದ ನಂತರ ಈಗ ರಾಜಾಮದನಗೋಪಾಲ ನಾಯಕ, ಜೆ.ಅಗಸ್ಟಿನ್, ಬಸವರಾಜ ಜಮದ್ರಖಾನಿ, ಶಿವಶರಣಪ್ಪ ಶಾಬಾದಿ, ಎ.ಕೃಷ್ಣಾ, ಪಾಂಡುರಂಗ ಚಿನ್ನಾಕಾರ ಅವರು ಸಂಘದ ಪದಾದಿಕಾರಿಗಳಾಗಿದ್ದಾರೆ (ಹೈದರಾಬಾದ ಕರ್ನಾಟಕದ ವಿಶೇಷ ಪುರವಣಿ, ೯.೦೩.೨೦೦೬, ಪು.೨). ಕನ್ನಡ ಭಾಷಾ, ಸಂಸ್ಕೃತಿಯ ಉಳಿವಿಗಾಗಿ ಹೋರಾಡಿ ಕನ್ನಡ ಪರವಾದ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡು ಅದರ ಮೂಲಕ ಜನರಲ್ಲಿ ಕನ್ನಡಾಭಿಮಾನವನ್ನು ಈ ಸಂಘವು ಹೆಚ್ಚಿಸಿತು. ಈ ಸಂಘದ ಕಾರ್ಯಕರ್ತರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಕನ್ನಡಿಗರ ಗಮನವನ್ನು ಸೆಳೆದರು. ಕನ್ನಡ ಸಾಹಿತ್ಯ ಸಂಘಕ್ಕೆ ಮೊದಲು ಸ್ವಂತ ಕಟ್ಟಡವಿರಲಿಲ್ಲ. ೪ ಫೆಬ್ರವರಿ ೧೯೫೫ರಂದು ಆಗಿನ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಬಿ.ಡಿ.ಜತ್ತಿಯವರು ಕಟ್ಟಡದ ಉದ್ಘಾಟನೆ ಮಾಡಿದರು. ಹೀಗೆ ನಿಜಾಂ ಅವರ ಆಳ್ವಿಕೆಯಲ್ಲಿ ಸ್ಥಾಪನೆಯಾದ ಕನ್ನಡ ಸಾಹಿತ್ಯಸಂಘವು ಇಂದಿನವರೆಗೂ ಕನ್ನಡ ಪರವಾದ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾ ಬಂದಿದೆ.

ಅಧ್ಯಾಯ ೫

# ವಿಮೋಚನಾ ಹೋರಾಟದ ರೂವಾರಿಗಳು

೫.೧. ತಿರುಮಲರಾವ ದೇಸಾಯಿ

೫.೨. ಕಿಶನರಾವ ಮಳ್ಳಿ

೫.೩. ರಾಮರಾವ್ ಹೇಜೀಬ್

೫.೪. ಕೃಷ್ಣಮಾಚಾರ ಪುಣೇಕರ್

೫.೫. ಬಸಣ್ಣ ಕಾಂಗ್ರೆಸ್

೫.೬. ಸರ್ದಾರ ಶರಣಗೌಡ ಇನಾಂದಾರ

೫.೭. ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ

೫.೮. ಅಪ್ಪಾರಾವ್ ವಕೀಲ

೫.೯. ಡಾ.ಜಿ.ಸುಬ್ಬಯ್ಯ

೫.೧೦. ವೆಂಕೋಬರಾವ್ ಪದಕಿ

೫.೧೧. ವಿರುಪಾಕ್ಷಪ್ಪಗೌಡ ರಾಜನಕೋಳೂರ

೫.೧೨. ವೆಂಕನಗೌಡ ಫಾಟೀಲ್ ರಾಜನಕೋಳೂರ

೫.೧೩. ತಿಮ್ಮಯ್ಯ ದರಬಾರಿ

೫.೧೪. ಮಹಾದೇವಪ್ಪ ಹೂಗಾರ

೫.೧೫. ಸಂಗಪ್ಪ ಉದ್ದನ್ನ

ಈ ಅಧ್ಯಾಯದಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟಗಾರರನ್ನು ಅದರಲ್ಲೂ ಸುರಪುರವನ್ನು ಕೇಂದ್ರವಾಗಿಟ್ಟುಕೊಂಡು ಹೋರಾಟ ಮಾಡಿದ ಮಹನೀಯರ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಬದುಕುಳಿದ ಕೆಲವೇ ಕೆಲವು ಹೋರಾಟಗಾರರನ್ನು ಸಂದರ್ಶನ ಮಾಡಿ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಸಂದರ್ಶನಕ್ಕಾಗಿ ತಯಾರಿಸಿದ ಪ್ರಶ್ನಾವಳಿಗಳ ಮಾದರಿಯು ಹೀಗಿದೆ.

## ಪ್ರಶ್ನಾವಳಿ

೧. ಹೋರಾಟಗಾರರ ಹೆಸರು, ಜನನ ಮತ್ತು ವಿದ್ಯಾಭ್ಯಾಸದ ವಿವರಗಳು

೨. ಹೈದರಾಬಾದ ರಾಜ್ಯದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆಗೆ ಕಾರಣವಾದ ಅಂಶಗಳು ಯಾವುವು ಮತ್ತು ವ್ಯಕ್ತಿಗಳು ಯಾರು?

೩. ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಪಾಲ್ಗೊಳ್ಳಲು ನಿಮ್ಮ ಮೇಲೆ ಪ್ರಭಾವ ಬೀರಿದ ಘಟನೆ ಅಂಶ ಮತ್ತು ವ್ಯಕ್ತಿಗಳ ವಿವರ

೪. ಹೈದರಾಬಾದ ವಿಮೋಚನೆಯಲ್ಲಿ ಸಂಘ ಸಂಸ್ಥೆಗಳು ಎಷ್ಟರಮಟ್ಟಿಗೆ ಪ್ರಭಾವ ಬೀರಿವೆ?

೫. ರಾಷ್ಟ್ರೀಯತೆಯ ಭಾವನೆಯನ್ನು ಬೆಳೆಸುವಲ್ಲಿ ಯಾವ ಪತ್ರಿಕೆಗಳು ಕಾರ್ಯ ನಿರ್ವಹಿಸಿವೆ?

೬. ಭಾರತ ಸ್ವಾತಂತ್ರ್ಯವಾದಾಗ ಈ ಭಾಗದ ಪರಿಸ್ಥಿತಿ ಹೇಗಿತ್ತು?

೭. ನೀವು ಗಡಿ ಶಿಬಿರಗಳ ನಾಯಕರಾಗಿದ್ದೀರಾ?

೮. ನೀವು ಯಾವ ಉದ್ದೇಶವಿಟ್ಟುಕೊಂಡು ಶಿಬಿರವನ್ನು ಸ್ಥಾಪನೆ ಮಾಡಿದಿರಿ?

೯. ಶಿಬಿರಗಳ ಕಾರ್ಯಚಟುವಟಿಕೆಗಳೇನು?

೧೦. ಶಿಬಿರಗಳ ಕಾರ್ಯಕರ್ತರಾಗಿ ನೀವು ಮಾಡಿದ ಕ್ರಾಂತಿಕಾರಿ ಹೋರಾಟಗಳಾವುವು?

i. ಯಾವ ಯಾವ ಊರುಗಳನ್ನು ವಶಪಡಿಸಿಕೊಂಡಿದಿರಿ

ii. ಎಷ್ಟು ಪ್ರದೇಶಗಳಲ್ಲಿ ಸ್ವತಂತ್ರ ಆಡಳಿತ ನಡೆಸಿದಿರಿ

೧೧. ನೀವು ಭಾಗವಹಿಸಿದ ಪ್ರಮುಖ ಸಭೆ ಸಮಾವೇಶಗಳು ಯಾವುವು?

೧೨. ಹೋರಾಟದಲ್ಲಿ ನಿಮ್ಮ ನಾಯಕರು ಮತ್ತು ಸಂಗಡಿಗರು ಯಾರಾಗಿದ್ದರು?

೧೩. ಈ ಹೋರಾಟದಲ್ಲಿ ನಿಮ್ಮ ಮನೆಯವರು ಯಾವ ರೀತಿಯ ಸಹಕಾರ ನೀಡಿದ್ದಾರೆ?

೧೪. ಮನೆಯ ಆರ್ಥಿಕ ಪರಿಸ್ಥಿತಿ ಹೇಗಿತ್ತು?

೧೫. ಪೊಲೀಸ್ ಕಾರ್ಯಾಚರಣೆಯಲ್ಲಿ ನಿಮ್ಮ ಪಾತ್ರವೇನು?

೧೬. ಹೈದರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನವಾದಾಗ ನಿಮಗೆ ಹೇಗೆ ಅನಿಸಿತು?

೧೭. ಸರ್ಕಾರದಿಂದ ಇಂದು ನಿಮಗೆ ದೊರಕುತ್ತಿರುವ ಸೌಲಭ್ಯಗಳೇನು?

೧೮. ನಿಮ್ಮ ಸಮುದಾಯದ ವಿವರಗಳೇನು?

೧೯. ದಲಿತ ಮತ್ತು ಕೆಳವರ್ಗದ ಜನರು ಹೋರಾಟದ ಸಂದರ್ಭದಲ್ಲಿ ಏನು ಮಾಡುತ್ತಿದ್ದರು?

೨೦. ಇದು ಯಾವ ವರ್ಗದ ಹೋರಾಟವಾಗಿದೆ.

i. ಭೂ ಮಾಲೀಕರ ಹೋರಾಟ ಅಥವಾ

ii. ಮಧ್ಯಮ ವರ್ಗದವರ ಹೋರಾಟ ಅಥವಾ

iii. ಕೆಳವರ್ಗದವರ ಹೋರಾಟ

೨೧. ಕೆಳವರ್ಗ ಮತ್ತು ಮೇಲ್ವರ್ಗದವರ ನಡುವೆ ಸಾಮಾಜಿಕ ಸಂಬಂಧ ಯಾವ ರೀತಿಯಾಗಿತ್ತು?

೨೨. ಮಹಿಳೆಯರು ಈ ಹೋರಾಟದಲ್ಲಿ ಭಾಗವಹಿಸಿದ್ದಾರೆಯೇ?

೨೩. ಹೋರಾಟದ ಸಂದರ್ಭದಲ್ಲಿ ದಲಿತ ಮತ್ತು ಕೆಳಜಾತಿಗಳ ಜನರು ಭಾಗವಹಿಸಿದ್ದಕ್ಕೆ ವಿವರಗಳಿವೆಯೆ?

೨೪. ನಿಮ್ಮ ಕಲ್ಪನೆಯ ಸ್ವಾತಂತ್ರ್ಯ ಅಥವಾ ವಿಮೋಚನೆ ಎಂದರೆ ಏನು? ವಿಮೋಚನೆ ಆದ ಮೇಲೆ ಈ ಭಾಗದ ಪರಿಸ್ಥಿತಿ ಹೇಗಿರಬಹುದೆಂದು ಊಹಿಸಿದ್ದೀರಿ? ಅದು ಯಶಸ್ವಿಯಾಗಿದೆಯೆ?

ಮೇಲಿನ ಪ್ರಶ್ನಾವಳಿಗಳಲ್ಲಿ ಕೆಲವೊಂದಕ್ಕೆ ಮಾತ್ರ ವಿವರಗಳು ಸಿಕ್ಕಿವೆ. ಅಲ್ಲಲ್ಲಿ ಸಿಕ್ಕ ಪೂರಕ ಮಾಹಿತಿಗಳನ್ನು ಈ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ.

*****

ಹೈದರಾಬಾದ ವಿಮೋಚನೆಗೆ ಸಂಬಂಧಿಸಿದಂತೆ ನಡೆದ ಹೋರಾಟದಲ್ಲಿ ಅನೇಕರು ಜೀವನದ ಹಂಗು ತೊರೆದು ಹೋರಾಡಿ ಹೈದರಾಬಾದ ಸಂಸ್ಥಾನವನ್ನು ಭಾರತದೊಂದಿಗೆ ವಿಲೀನ ಮಾಡಲು ಶ್ರಮಿಸಿದ್ದಾರೆ. ಇದಕ್ಕೆ ಸುರಪುರದ ಜನತೆಯು ಕೂಡಾ ಹೊರತಾಗಿಲ್ಲ. ಸುರಪುರದಲ್ಲಿ ಹೈದರಾಬಾದ ವಿಮೋಚನೆಗಾಗಿ ಹೋರಾಡಿದ ಹೋರಾಟಗಾರರನ್ನು ಎರಡು ರೀತಿಯಾಗಿ ವರ್ಗೀಕರಿಸಬಹುದು.

೧. ೧೫ ಆಗಸ್ಟ್ ೧೯೪೭ರಂದು ಭಾರತ ಸ್ವಾತಂತ್ರ್ಯವಾದಾಗ, ಹೈದರಾಬಾದ ಸಂಸ್ಥಾನ ಸ್ವಾತಂತ್ರ್ಯವಾಗಿರಲಿಲ್ಲ. ಭಾರತ ಸ್ವಾತಂತ್ರ್ಯವಾದ ಸಂದರ್ಭದಲ್ಲಿ ಹೈದರಾಬಾದಿನ ನಿಜಾಂ ಅವರು ಭಾರತದ ರಾಷ್ಟ್ರಧ್ವಜವನ್ನು ತನ್ನ ಆಳ್ವಿಕೆಗೆ ಒಳಗಾದ ಪ್ರದೇಶಗಳಲ್ಲಿ ಹಾರಿಸಬಾರದೆಂದು ಆಜ್ಞೆ ಹೊರಡಿಸಿದರು. ನಿಜಾಂ ಅವರ ಆಜ್ಞೆಯನ್ನು ಧಿಕ್ಕರಿಸಿ ಸುರಪುರದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಿ, ಧ್ವಜ ಮೆರವಣಿಗೆಯನ್ನು ಕೈಗೊಂಡು ಜೈಲುವಾಸಿಗಳಾದ ಹೋರಾಟಗಾರರು ಇದ್ದಾರೆ. ತಿರುಮಲರಾವ್ ದೇಸಾಯಿ, ಮಳ್ಳಿಕಿಶನರಾವ್, ರಾಮರಾವ ಹೇಜೀಬ್, ಕೃಷ್ಣಮಾಚಾರ್ಯ ಪುಣೇಕರ್ ಮತ್ತು ಕಾಂಗ್ರೆಸ್ ಬಸಣ್ಣ ಮೊದಲಾದವರು ಈ ವರ್ಗದಲ್ಲಿ ಬರುತ್ತಾರೆ.

೨. ಭಾರತ ಸ್ವಾತಂತ್ರ್ಯವಾಗಿದ್ದರೂ 'ಹೈದರಾಬಾದ ಸಂಸ್ಥಾನ'ವನ್ನು ಭಾರತದೊಳಗೆ ವಿಲೀನ ಮಾಡದೆ ಹೈದರಾಬಾದಿನ ನಿಜಾಂ ಮೀರ್ ಉಸ್ಮಾನ ಅಲಿಖಾನರು ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಇದರಿಂದ ಹೈದರಾಬಾದ ಸಂಸ್ಥಾನದಲ್ಲಿ ಜನರು ಈ ಪ್ರದೇಶವನ್ನು ಭಾರತದೊಳಗೆ ವಿಲೀನ ಮಾಡುವುದಕ್ಕಾಗಿ ಗಡಿಶಿಬಿರಗಳ ಸ್ಥಾಪನೆಯ ಮೂಲಕ ಹೋರಾಟ ಕೈಗೊಂಡರು. ಅಂದರೆ ನಿಜಾಂ ಅವರ ಸೈನಿಕರಾದ ರಜಾಕಾರರೊಂದಿಗೆ ಮುಖಾಮುಖಿಯಾಗಿ ಹೋರಾಡಿದ್ದಾರೆ. ಈ ಪ್ರಾಂತ್ಯದ ಹೋರಾಟಕ್ಕಾಗಿ ಜೀವನವನ್ನು ಬಲಿಗೈದವರಲ್ಲಿ ವಿರುಪಾಕ್ಷಗೌಡ, ಮಹಾಂತಪ್ಪಗೌಡರ ಹೆಸರು ಚಿರಸ್ಮರಣೀಯವಾಗಿದೆ. ಸರ್ದಾರ ಶರಣಗೌಡ ಇನಾಂದಾರ್, ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕ, ಅಪ್ಪಾರಾವ್ ವಕೀಲ, ಡಾ.ಜಿ.ಸುಬ್ಬಯ್ಯ, ವೆಂಕೋಬರಾವ್ ಪದಕಿ, ವಿರುಪಾಕ್ಷಗೌಡ ರಾಜನಕೋಳೂರ, ವೆಂಕನಗೌಡ ಪಾಟೀಲ್, ತಿಮ್ಮಯ್ಯ ದರಬಾರಿ, ಮಹಾದೇವಪ್ಪ ಹೂಗಾರ ಮತ್ತು ಸಂಗಪ್ಪ ಉದ್ದನ್ನ ಮೊದಲಾದವರು ಈ ವರ್ಗದಲ್ಲಿ ಬರುತ್ತಾರೆ.

ಈ ಹೋರಾಟಗಾರರು ನಿಸ್ವಾರ್ಥ ಮನೋಭಾವದಿಂದ ಹೋರಾಟ ಮಾಡಿ ಇತಿಹಾಸದ ಪುಟಗಳಲ್ಲಿ ತಮ್ಮ ಹೆಸರನ್ನು ಚಿರಸ್ಥಾಯಿಯಾಗಿ ನಿಲ್ಲುವಂತೆ ಮಾಡಿದ್ದಾರೆ. ಈ ಹೋರಾಟಗಾರರಿಗೆ ಮುಂಬೈ ಕರ್ನಾಟಕದ ಪೋಲೀಸರು ಕೂಡ ಹೆಚ್ಚಿನ ರೀತಿಯಲ್ಲಿ ಸಹಕಾರ ನೀಡಿದ್ದಾರೆ. ಹೋರಾಟಗಾರರು ರಜಾಕಾರರೊಂದಿಗೆ ಕೈಗೊಳ್ಳುವ ಪ್ರತಿಯೊಂದು ಹೋರಾಟದಲ್ಲಿ ಹೋರಾಟಗಾರರಿಗೆ ಬಂದೂಕು, ಮದ್ದು, ಪೋಲೀಸ್ ವಾಹನಗಳನ್ನು ನೀಡಿ ಇವರ ಹೋರಾಟವನ್ನು ಯಶಸ್ವಿಗೊಳಿಸಿರುವುದು ಹೋರಾಟಗಾರರ ಸಂದರ್ಶನದಿಂದ ತಿಳಿದುಬಂದಿದೆ. ವಿಮೋಚನಾ ಹೋರಾಟಗಾರರ ಹೋರಾಟದ ಫಲವಾಗಿ ಈ ಪ್ರಾಂತ್ಯವು ನಿಜಾಂ ಅವರ ಆಳ್ವಿಕೆಯಿಂದ ಮುಕ್ತವಾಗಿ ಸ್ವತಂತ್ರ ಭಾರತದಲ್ಲಿ ವಿಲೀನವಾಗಲು ಸಹಾಯಕವಾಯಿತು.

ಹೋರಾಟಗಾರರಿಗೆ ಸಂಬಂಧಿಸಿದಂತೆ ಹೋರಾಟದಲ್ಲಿ ನೇರವಾಗಿ ಪಾಲ್ಗೊಂಡ ಹೋರಾಟಗಾರರನ್ನು ಸಂದರ್ಶನ ಮಾಡುವುದರ ಮೂಲಕ, ಹೋರಾಟದಲ್ಲಿ ಮಡಿದವರ ಕುರಿತಾದ ವಿವರಗಳಿಗೆ ಅವರ

ಸಂಬಂಧಿಕರ, ಸಹವರ್ತಿಗಳನ್ನು ಸಂಪರ್ಕಿಸಿ ಅವರಿಂದ ಲಭ್ಯವಿರುವ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇದಲ್ಲದೆ ಈ ಹೋರಾಟಗಾರರನ್ನು ಕುರಿತು ಬಂದಿರುವ ಕೃತಿಗಳನ್ನು ಅಧ್ಯಯನ ಮಾಡಲಾಗಿದೆ. ಸೂರ್ಯನಾಥ ಕಾಮತ್‌ರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೨ ಮತ್ತು ೩(೧೯೭೭, ೧೯೮೦), ಎ.ಕೃಷ್ಣ ಅವರ 'ಸ್ವಾತಂತ್ರ್ಯ ಹೋರಾಟಗಾರ ಶ್ರೀ ಕಾಂಗ್ರೆಸ್ ಬಸಣ್ಣನವರು'(೧೯೯೨), ವಸಂತ ಕುಷ್ಟಗಿಯವರ 'ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ'(೨೦೦೩), ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ'(೨೦೦೬) ಈ ಕೃತಿಗಳಲ್ಲದೆ, ಹೋರಾಟಗಾರರ ಕುರಿತಾದ ಲೇಖನಗಳು, ಪತ್ರಿಕೆಗಳನ್ನು ಕೂಡ ಅವಲೋಕನ ಮಾಡಲಾಗಿದೆ.

****

ಈಗಾಗಲೇ ತಿಳಿಸಿರುವಂತೆ ಮೊದಲನೆಯ ವರ್ಗಕ್ಕೆ ಸಂಬಂಧಿಸಿದ ಹೋರಾಟಗಾರರ ಚಿತ್ರವನ್ನು ಅಧ್ಯಯನದ ಈ ಭಾಗದಲ್ಲಿ ನೀಡಲಾಗಿದೆ.

## ೫.೧. ತಿರುಮಲರಾವ್ ದೇಸಾಯಿ

ತಿರುಮಲರಾವ್ ಅವರು ಸುರಪುರ ತಾಲೂಕಿನ ಹುಣಸಗಿಯವರು. ಇವರ ವಿದ್ಯಾಭ್ಯಾಸವು ಸುರಪುರದಲ್ಲಿಯೇ ಆಯಿತು. ನಂತರ ಸುರಪುರ ತಾಲೂಕು ಕಛೇರಿಯಲ್ಲಿ ದ್ವಿತೀಯ ದರ್ಜೆಯ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತಿದ್ದರು. ತಿರುಮಲರಾವ್ ಅವರು ಕಲಬುರ್ಗಿಯ ರಾಷ್ಟ್ರೀಯ ಶಾಲೆ ನೂತನ ವಿದ್ಯಾಲಯದ ವಿದ್ಯಾರ್ಥಿಯಾಗಿದ್ದರಿಂದ ರಾಷ್ಟ್ರೀಯ ಭಾವನೆವುಳ್ಳವರಾಗಿದ್ದರು. ಹೈದರಾಬಾದ 'ರಾಜ್ಯ ಕಾಂಗ್ರೆಸ್ಸಿನ' ಚಟುವಟಿಕೆಗಳಿಂದ ರಾಜಕೀಯ ಗುರುಗಳಾದ ಭಾವುರಾವ್ ದೇವುಳಗಾಂವಕರ್ ಪ್ರಭಾವ ದಿಂದ ಇವರು ಚಳುವಳಿಯ ಕಡೆ ಆಕರ್ಷಿತರಾಗಿದ್ದರು (ಕಾಮತ್ ೧೯೭೭ ೯೦೦-೯೦೧). ಸುರಪುರ ತಾಲೂಕ್ ಕಾಂಗ್ರೆಸ್‌ನ ಸಂಘಟಕರಾದ ವೆಂಕೋಬರಾವ್ ಪದಕಿ ಯವರು ಭೂಗತರಾಗಿ ಹೋರಾಟಕ್ಕಿಳಿದಾಗ ಚಳುವಳಿಯ ಜವಾಬ್ದಾರಿಯನ್ನು ಪ್ರೊ.ವಿ.ಪಿ.ದೇವುಳಗಾಂವಕರರು ತಿರುಮಲರಾವ್ ಅವರಿಗೆ ವಹಿಸಿದರು.



೧೯೪೭ ಅಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ವಾದಾಗ ನಿಜಾಂ ಅವರ ಸರ್ಕಾರವು ಭಾರತದ ಧ್ವಜವನ್ನು ಹಾರಿಸಬಾರದೆಂದು ಆಜ್ಞೆ ಹೊರಡಿಸಿದರು. ಒಂದು ವೇಳೆ

ಆಜ್ಞೆ ಮುರಿದು ರಾಷ್ಟ್ರಧ್ವಜವನ್ನು ಹಾರಿಸಿದರೆ ಅವರನ್ನು ಸೆರೆಮನೆಗೆ ತಳ್ಳಿ ಉಗ್ರ ಶಿಕ್ಷೆಯನ್ನು ಕೊಡಲಾಗುತ್ತಿತ್ತು. ೧೯೪೭ ಆಗಸ್ಟ್ ೧೫ರಂದು ಸುರಪುರದಲ್ಲಿ ವಿದ್ಯಾರ್ಥಿಗಳು ಧ್ವಜ ಮೆರವಣಿಗೆಯನ್ನು ತಿರುಮಲರಾವ್ ದೇಸಾಯಿಯವರ ಮಾರ್ಗದರ್ಶನದಲ್ಲಿ ಕೈಗೊಂಡರು. ಈ ಧ್ವಜ ಮೆರವಣಿಗೆ ಸುರಪುರದಿಂದ ರಂಗಂಪೇಟೆಯವರೆಗೆ ನಡೆಯಿತು. ರಜಾಕಾರರು ಮತ್ತು ನಿಜಾಂ ಅವರ ಪೋಲೀಸರು ಅಲ್ಲಲ್ಲಿ ಬಂದೂಕುಗಳನ್ನು ಹಿಡಿದು ಕೊಂಡು ಇವರ ಕಾರ್ಯಚಟುವಟಿಕೆಗಳನ್ನು ಗಮನಿಸುತ್ತಿದ್ದರು. ರಂಗಂಪೇಟೆಯಿಂದ ಮರಳಿ ಸುರಪುರಕ್ಕೆ ಈ ಧ್ವಜ ಮೆರವಣಿಗೆ ಮರಳಿ ಹೋಗುವಾಗ ಕಿಶನರಾವ್ ಮಳ್ಳಿ, ರಾಮರಾವ್ ಹೇಜೀಬ್ ಮತ್ತು ಕೃಷ್ಣಮಾಚಾರ ಪುಣೇಕರನ್ನು ಒಳಗೊಂಡಂತೆ ಒಟ್ಟು ೩೪ ವಿದ್ಯಾರ್ಥಿಗಳನ್ನು ಬಂಧಿಸಿದರು. ಅದೇ ದಿನ ಸಂಜೆ ಧ್ವಜ ಮೆರವಣಿಗೆಯ ನಾಯಕರಾದ ಶಿವನಾರಾಯಣ ವರ್ಮಾ, ಮಾಧವರಾವ್ ಬಾಸುತ್ಕರ ಮತ್ತು ತಿರುಮಲರಾವ್ ದೇಸಾಯಿ ಇವರನ್ನು ಬಂಧಿಸಿ ಕಲಬುರ್ಗಿಯ ಜಿಲ್ಲಾ ಕೇಂದ್ರ ಕಾರಾಗೃಹಕ್ಕೆ ಕಳುಹಿಸಿದರು. ಈ ಸಂದರ್ಭದಲ್ಲಿ ಸುರಪುರ ತಾಲೂಕಿನ ೧೯೮ ಹಳ್ಳಿಗಳಲ್ಲಿ ಧ್ವಜ ಮೆರವಣಿಗೆಯ ಭಿತ್ತಿ ಚಿತ್ರಗಳನ್ನು ಅಂಟಿಸಿದ್ದರು. ಇದೊಂದು ಅವಿಸ್ಮರಣೀಯ ಘಟನೆಯಾಗಿದೆ.

ನಿಜಾಂ ಸರ್ಕಾರದ ನಿರಂಕುಶ ಆಡಳಿತದ ಮತ್ತು ರಜಾಕಾರರ ದಬ್ಬಾಳಿಕೆಯ ಅಂಶಗಳನ್ನೊಳಗೊಂಡ ಪತ್ರಿಕೆಯನ್ನು ತಿರುಮಲರಾವ್ ದೇಸಾಯಿಯವರು 'ಸುರಪುರ ಸಮಾಚಾರ' ಎಂಬ ಹೆಸರಿನಿಂದ ಪ್ರಕಟಿಸುತ್ತಿದ್ದರು. ಈ ಪತ್ರಿಕೆಯನ್ನು ತಾಳಿಕೋಟೆಯಿಂದ ಮುದ್ರಿಸಿ ತರುತ್ತಿದ್ದರು. ಈ ಪತ್ರಿಕೆಯು ಮುಖಪುಟದಲ್ಲಿ 'ನಿಜಾಂ ಸಂಸ್ಥಾನವು ಭಾರತದಲ್ಲಿ ಸೇರುವ ತನಕ ಚಳುವಳಿ ಮಾಡುವುದು, ಸರ್ಕಾರಿ ನೌಕರರು, ಶಾನುಭೋಗರು ರಾಜೀನಾಮೆ ನೀಡುವುದು, ಕರಗಳ ನಿರಾಕರಣೆ, ಸೇಂದಿ ಮರಗಳ ನಾಶ' ಮುಂತಾದ ವಿಷಯಗಳನ್ನು ಒಳಗೊಂಡಿತ್ತು. ಹೀಗೆ ತಿರುಮಲರಾವ್ ದೇಸಾಯಿಯವರು ಸುರಪುರದಲ್ಲಿ ಭಾರದ ಸ್ವಾತಂತ್ರ್ಯ ಪಡೆದ ದಿನದಂದು ಈ ರೀತಿಯ ಕಾರ್ಯವನ್ನು ನಿರ್ವಹಿಸಿದ್ದಾರೆ . ತಿರುಮಲರಾವ್ ಭಾರತ ಸ್ವಾತಂತ್ರ್ಯ ಪಡೆದ ದಿನದಂದು ತಾವೇ ನಾಯಕತ್ವ ವಹಿಸಿ ಧ್ವಜ ಮೆರವಣಿಗೆ ಕಾರ್ಯಕ್ರಮವನ್ನು ಕೈಗೊಂಡಿರುವುದು ನಿಜಕ್ಕೂ ಮೆಚ್ಚುವಂತಹ ಕಾರ್ಯವಾಗಿದೆ (ಕುಷ್ಟಗಿ ೨೦೦೩: ೧೭೫).

## ೫.೨. ಮಳ್ಳಿ ಕಿಶನರಾವ್

ಕಿಶನರಾವರು ಜೇವರ್ಗಿ ತಾಲ್ಲೂಕಿನ ಮಳ್ಳಿ ಗ್ರಾಮದವರು. ಇವರು ಸುರಪುರದಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸಿದರು. ಇವರು ಹತ್ತನೇ ತರಗತಿಯಲ್ಲಿದ್ದಾಗ ವಿದ್ಯಾರ್ಥಿ ಸಂಘಟನಾ ಕಾರ್ಯದರ್ಶಿಯಾಗಿದ್ದರು. ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಇವರ ವಿವಾಹವು ಕಪಟರಾಳ ಕೃಷ್ಣರಾಯರ ಮಗಳಾದ ರುಕ್ಮಿಣಿಬಾಯಿಯವರೊಂದಿಗೆ ಆಯಿತು. ಯಾದಗಿರಿಯಲ್ಲಿ ನಡೆದ ನಿಜಾಂ ಕರ್ನಾಟಕ ಪರಿಷತ್ತಿನ ಅಧಿವೇಶನದಲ್ಲಿ ಮಳ್ಳಿ ಕಿಶನರಾವ್ ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಿದ್ದಾರೆ. ಈ ಸಮಯದಲ್ಲಿ ನಿಜಾಂ ಸರ್ಕಾರವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿತ್ತು ಎಂದು ಕಿಶನರಾವ್ ಅವರ ಸಂದರ್ಶನದಲ್ಲಿ ತಿಳಿಸಿದ್ದಾರೆ. ೧೯೪೭ ಅಗಸ್ಟ್ ೧೫ರಂದು ಭಾರತ ಸ್ವತಂತ್ರ್ಯವಾಯಿತು. ಈ ಸಮಯದಲ್ಲಿ ಕಿಶನರಾವ್ ಮಳ್ಳಿ, ರಾಮರಾವ್ ಹೇಜಿಬ್ ಮುಂತಾದ ವಿದ್ಯಾರ್ಥಿ ಮುಖಂಡರು ವಿದ್ಯಾರ್ಥಿಗಳ ಸಮೂಹದೊಡನೆ ೩೦-೩೫ ತಿರಂಗಾ ಧ್ವಜದೊಡನೆ ಮೆರವಣಿಗೆ ಹೊರಟರು. ಧ್ವಜ ಮೆರವಣಿಗೆಗೆ ಬೇಕಾದ ಧ್ವಜಗಳನ್ನು ಕಿಶನರಾವರ ಪತ್ನಿ ರುಕ್ಮಿಣಿಬಾಯಿಯವರು ಹೊಲಿದು ಕೊಟ್ಟಿರುವುದು ಕಂಡುಬರುತ್ತದೆ. ಪ್ರತ್ಯಕ್ಷವಲ್ಲದಿದ್ದರೂ, ಅಪ್ರತ್ಯಕ್ಷವಾಗಿ ನಮ್ಮ ಯಜಮಾನರಿಗೆ ಸಹಾಯಕಳಾಗಿ ಕಾರ್ಯನಿರ್ವಹಿಸಿದ್ದೇನೆ ಎಂದು ಸ್ವತಃ ರುಕ್ಮಿಣಿಬಾಯಿಯವರು ಹೇಳಿದ್ದಾರೆ.(ಸಂದರ್ಶನ: ರುಕ್ಮಿಣಿಬಾಯಿ ಮಳ್ಳಿ, ೨೩-೧೧-೨೦೦೬). ವಿದ್ಯಾರ್ಥಿಗಳ ಈ ಸಾಮೂಹಿಕ ಚಟುವಟಿಕೆಗಳು ಜನರನ್ನು ದಂಗುಬಡಿಸಿದವಲ್ಲದೇ ಪೋಲೀಸರ ಕೋಪಕ್ಕೂ ಗುರಿಯಾದರು.



೧೯೪೭ ಅಗಸ್ಟ್ ೧೫ರಂದು ವಿದ್ಯಾರ್ಥಿಗಳು ಧ್ವಜ ಮೆರವಣಿಗೆಗೆ ಹೊರಟರು. ಸುರಪುರ ಮತ್ತು ರಂಗಂಪೇಟೆ ಬೀದಿಗಳಲ್ಲಿ 'ಝುಂಡಾ ಉಂಚಾ ರಹೇ ಹಮಾರಾ', 'ಕದಂ ಕದಂ ಬಡಾಯೇ ಜಾ, ಖುಷಿಕಾ ಗೀತ ಗಾಯೇ ಜಾ' ಎಂಬ ರಾಷ್ಟ್ರಗೀತೆಗಳನ್ನು ಹೇಳುತ್ತ ಮೆರವಣಿಗೆ ನಡೆಸಿದರು. ವಿದ್ಯಾರ್ಥಿಗಳಲ್ಲಿ ಪ್ರಮುಖರಾಗಿದ್ದವರೆಂದರೆ ಕಿಶನರಾವ್ ಮಳ್ಳಿ, ರಾಮರಾವ್ ಹೇಜೀಬ್, ಮಾಣಿಕರಾವ್ ಆದವಾನಿ, ಗೋಪಾಲರಾವ್ ಆದವಾನಿ ಮತ್ತು ಪರ್ವತರೆಡ್ಡಿ ರೊಟ್ನಡಗಿ ಮುಂತಾದವರು. ಈ ಮೆರವಣಿಗೆ ರಂಗಪೇಟೆಯಿಂದ ಸುರಪುರಕ್ಕೆ ಬರುವಾಗ ಮದರಸಾ ದರ್ಗಾದ ಹತ್ತಿರ ಪೋಲೀಸರು ಮೆರವಣಿಗೆಯನ್ನು ತಡೆದು ವಿದ್ಯಾರ್ಥಿಗಳನ್ನು ಬಂಧಿಸಿದರು. ಮರುದಿನ ಎಲ್ಲರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದರು.

ವ್ಯಾಜ್ಯ ನಡೆಯಿತು, ಸಾಕ್ಷಿಗಳು ಸರಿಯಾಗಿ ಇರದಿದ್ದಕ್ಕೆ ಇವರೆಲ್ಲರು ವಿದ್ಯಾರ್ಥಿಗಳಿದ್ದಾರೆ ಎಂದು ವ್ಯಾಜ್ಯ ಅಲ್ಲಿಗೆ ಮುಗಿದು ಹೋಯಿತು.

ವೆಂಕೋಬರಾವ್ ಪದಕಿಯವರು ವಿದ್ಯಾರ್ಥಿಗಳ ಈ ಕಾರ್ಯವನ್ನು ಅಭಿನಂದಿಸಿ ಮುಂದಿನ ಕಾರ್ಯಕ್ರಮದ ಬಗ್ಗೆ ವಿಚಾರಿಸಲು ಕಿಶನರಾವ್ ಮಳ್ಳಿಯವರನ್ನು ಗದಗನಲ್ಲಿರುವ ಕಾಂಗ್ರೆಸ್ ಕಛೇರಿಗೆ ಪತ್ರ ಬರೆದು ಅವರನ್ನು ಅಲ್ಲಿಗೆ ಕಳುಹಿಸಿದರು. ಕಿಶನ್‌ರಾವರು ಹುಟಗಿ, ವಿಜಾಪುರಗಳ ಮುಖಂಡರನ್ನು ಭೇಟಿಯಾಗಿ ಸಾವಿರಾರು ಕರಪತ್ರಗಳನ್ನು ಮತ್ತು ಧ್ವಜಗಳನ್ನು ತಂದರು. ಶ್ರೀ ಭೀಮಾಚಾರ್ಯ ಕೆಂಭಾವಿಯವರೊಡಗೂಡಿ ತಾಳಿಕೋಟೆಯಿಂದ ಸುರಪುರಕ್ಕೆ ಬಂದರು. ಮುಖ್ಯ ಹಳ್ಳಿಗಳಲ್ಲಿ ಕರಪತ್ರ ಮತ್ತು ಧ್ವಜಗಳನ್ನು ಹಂಚುತ್ತ ಬಂದಿದ್ದರಿಂದ ಸುರಪುರದಲ್ಲಿರುವ ರಜಾಕಾರರನ್ನು ಈ ಕಾರ್ಯಚಟುವಟಿಕೆಗಳು ಕಂಗೆಡಿಸಿದವು. ಈ ರಜಾಕಾರರು ಪೋಲೀಸ್‌ರಿಗೆ ಕಿಶನ್‌ರಾವ್ ಮಳ್ಳಿಯವರ ಕಾರ್‍ಯಚಟುವಟಿಕೆಗಳ ಕುರಿತು ಮಾಹಿತಿ ನೀಡಿದ್ದರ ಪರಿಣಾಮವಾಗಿ ಇವರೆಲ್ಲರು ಸುರಪುರದಲ್ಲಿ ಪೋಲೀಸರ ಕೈಯಲ್ಲಿ ಬಂಧಿಯಾದರು. ನಂತರ ಇವರೆಲ್ಲರನ್ನು ಗುಲಬರ್ಗಾ ಜೈಲಿಗೆ ಹಾಕಿದರು. ಗುಲಬರ್ಗಾದಲ್ಲಿ 'ಸಿ' ದರ್ಜೆಯ ಕೈದಿಯಾಗಿ,೧೪ನೇ ವಾರ್ಡನಲ್ಲಿದ್ದರು. ಒಟ್ಟು ೬ ತಿಂಗಳು ೧೫ ದಿನ ಜೈಲಿನಲ್ಲಿದ್ದರು. ಕಿಶನ್‌ರಾವ್ ಅವರು ಜೈಲಿನಲ್ಲಿದ್ದಾಗ ಕವನವೊಂದನ್ನು ರಚಿಸಿ ಹೋರಾಟಗಾರರ ಗಮನ ಸೆಳೆದರು.

ಸ್ವಾತಂತ್ರ್ಯವೇ ಸ್ವರ್ಗವೈ
ಕಹಳೆಯೂದಿರೈ
ಪಾರತಂತ್ರ್ಯ ನರಕದಿಂದ
ಮುಕ್ತಿ ಪಡೆದೆವೈ
ನಾವು ನೀವು ಎಂಬ ಭೇದ
ಭಾವ ದೂಡಿರೈ
ಮಹಾನುಭಾವ ಗಾಂಧಿಯನ್ನು
ನಿತ್ಯ ಸ್ಮರಿಸಿರೈ
ಕೇಸರಿ ಹಸಿರು ಬಿಳಿಯ ಬಣ್ಣದ
ನಮ್ಮ ಧ್ವಜವು ನೋಡಿರೈ
ದಿಲ್ಲಿಯ ಕಿಲೆಯ ಮೇಲೆ
ನೆಟ್ಟು ನಡೆಯಿರೈ

ಭಾರತ ಸ್ವಾತಂತ್ರವಾದ ಸಮಯದಲ್ಲಿ ರಜಾಕಾರರ ಕಾರ್ಯಚಟುವಟಿಕೆಗಳು ಹೆಚ್ಚಾದವು. ಹಿಂದುಗಳನ್ನು ಪೀಡಿಸುವುದು, ಹಿಂಸಿವುದು. ಕುರಿ, ಕೋಳಿಗಳನ್ನು ದೋಚುತ್ತಿದ್ದರು. ದಲಿತರನ್ನು ಮತ್ತು ಸರ್ಕಾರಿ ನೌಕರರನ್ನು ರಜಾಕಾರ ಆಗಿರಿ ಎಂದು ಪೀಡಿಸುತ್ತಿದ್ದರೆಂದು ಕಿಶನರಾವ್ ಮಳ್ಳಿಯವರು ಸಂದರ್ಶನದಲ್ಲಿ ಮಾಹಿತಿ ನೀಡಿದ್ದರು.

ಮಳ್ಳಿ ಗ್ರಾಮವು ಬಿಜಾಪುರ ಸರಹದ್ದಿಗೆ ಹೊಂದಿಕೊಂಡು ಇರುವುದರಿಂದ ಅಲ್ಲಿ ಮೊದಲು ನಿಜಾಂ ಅವರ ಸೈನ್ಯವಿತ್ತು. ಆ ಸಂದರ್ಭದಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಮಳ್ಳಿಗೆ ಬಂದು ಹೋಗುತ್ತಿದ್ದರು. ಮಳ್ಳಿ ಗ್ರಾಮದವರಾದ ಸಿದ್ರಾಮಯ್ಯ ಹೊನ್ನಳ್ಳಿ ಅವರು ಮಳ್ಳಿಯಲ್ಲಿ ೪ ಮನೆ ಲೂಟಿ ಮಾಡಿದ್ದಾರೆಂದು ಕಿಶನ್‌ರಾವ್ ಮಳ್ಳಿಯವರಿಗೆ ಸುದ್ದಿ ಮುಟ್ಟಿಸಿದರು. ರಜಾಕಾರರು ಸುರಪುರದ ಮಹಮ್ಮದ್ ಅಲಿ ಗುತ್ತೇದಾರ ಇವರ ನೇತೃತ್ವದಲ್ಲಿ ೧೫೦ ಜನರೊಂದಿಗೆ ಮಳ್ಳಿ ಗ್ರಾಮದ ಮೇಲೆ ದಾಳಿ ಮಾಡಿದರು. ರಜಾಕಾರರು ಮಳ್ಳಿ ಗ್ರಾಮದ ಮೇಲೆ ದಾಳಿ ಮಾಡಿ ಕಿಶನ್‌ರಾವ್ ಅವರ ಮನೆಯವರ ಮೇಲೆ ಹಲ್ಲೆ ನಡೆಸಿ ಕೊಲೆ ಮಾಡಿದಾಗ ಕಿಶನ್‌ರಾವ್ ಅವರು ಊರಲ್ಲಿರಲಿಲ್ಲ. ಈ ಘಟನೆ ೯ನೇ ಸೆಪ್ಟೆಂಬರ್ ೧೯೪೮ರಲ್ಲಿ ನಡೆಯಿತು. ಕಿಶನ್‌ರಾವ್ ಅವರ ತಂದೆ ಮಹಿಪತಿರಾವ್, ಚಿಕ್ಕಪ್ಪ ರಾಮರಾವ್, ಅಣ್ಣ ಗುರುರಾವ್, ಅಣ್ಣ ನಾರಾಯಣರಾವ್‌ರನ್ನು ರಜಾಕಾರರು ಕೊಂದು ಹಾಕಿದರು. ಇದೊಂದು ಅಮಾನವೀಯ ಕಾರ್ಯವಾಗಿದೆ. ಈ ಘಟನೆಯಲ್ಲಿ ಇವರ ಮನೆಯ ಕೆಲಸದಾಳುಗಳಾದ ದನಕಾಯುವವರು ರಜಾಕಾರರ ಜೊತೆ ಸೇರಿಕೊಂಡು ಇಂತಹ ಕಾರ್ಯವೆಸಗಿದರು. ಇದಲ್ಲದೇ ಬಂಗಾರದಾಭರಣ, ಮಂಗಳಸೂತ್ರಗಳನ್ನು ಸ್ತ್ರೀಯರಿಂದ ಕಸಿದುಕೊಂಡರಲ್ಲದೆ ಅವರ ಊರಿನವರಾದ ಸಿದ್ರಾಮಪ್ಪ ಲಕ್ಕುಂಡಿ, ಮಲ್ಲಪ್ಪ ಕೆಂಭಾವಿ, ಆಶಣ್ಣ ಅವರ ಮಗನನ್ನು ಕೂಡ ಕೊಲೆ ಮಾಡಿರುವುದು ಸಂದರ್ಶನದಿಂದ ಕಂಡುಬಂದಿದೆ.

ಈ ಘಟನೆಗೆ ಸಂಬಂಧಿಸಿದಂತೆ ಮುಂದೆ ನ್ಯಾಯಾಲಯದಲ್ಲಿ ಮೊಕದ್ದಮೆ ನಡೆದು ಫಾಯಲ್ ನಂ : ಸೇಷನ್ಸ್ ಕೋರ್ಟ್ ತೀರ್ಪಿನ ಪ್ರಕಾರ ವೀ. No.೩೧ ೧/೨ ೧೯೫೦ ಗುಲಬರ್ಗಾ ೨೨ ಜನ ರಜಾಕಾರರಿಗೆ ೬ ವರ್ಷ ಶಿಕ್ಷೆಯಾಯಿತು. ಹೈದಾರಾಬಾದ್ ವಿಮೋಚನಾ ಹೋರಾಟದಲ್ಲಿ ಈ ಘಟನೆಯು ರಜಾಕಾರರ ಹೀನ ಕೃತ್ಯಕ್ಕೆ ಸಾಕ್ಷಿಯಾಗಿದೆ.

ಹೈದರಾಬಾದ್ ವಿಮೋಚನೆಯಾಗಿ ೫೮ ವರ್ಷಗತಿಸಿದರೂ ದೇಶದ ರಾಜಕೀಯದಲ್ಲಿ ಒಡಕು, ಅಶಾಂತಿ, ದೇಶದ ತುಂಬ ನಕ್ಸಲರು, ಭಯೋತ್ಪಾದನೆ, ಕೊಲೆ, ಸುಲಿಗೆ, ಮಕ್ಕಳನ್ನು ಕೊಲ್ಲುವುದು, ದುರ್ಬಲರ ಮೇಲೆ ಸಬಲರ ದೌರ್ಜನ್ಯ ಇವು ನಿರಂತರವಾಗಿ ನಡೆದಿವೆ. ಅಂದ ಮೇಲೆ ಸ್ವಾತಂತ್ರ್ಯ ಗಳಿಸಿದ್ದು ಯಾರ ಕಲ್ಯಾಣಕ್ಕಾಗಿ, ಯಾರ ಹಿತಕ್ಕಾಗಿ? ಎಂಬುದು ಕಿಶನ್‌ರಾವ್ ಅವರ ಪ್ರಶ್ನೆಯಾಗಿದೆ.

ಇವರು ಸರ್ಕಾರದಿಂದ ಬರುವ ಪಿಂಚಣಿಯನ್ನು ಪಡೆಯುತ್ತಾರೆ. ಹೈದರಾಬಾದ್ ವಿಮೋಚನಾ ಚಳುವಳಿಯಲ್ಲಿ ನನಗಾದಷ್ಟು ಹಾನಿ ಯಾವ ಸ್ವಾತಂತ್ರ್ಯ ಹೋರಾಟಗಾರನಿಗೂ ಆಗಿಲ್ಲ. ಅಂದು ಆದ ಜೀವಹಾನಿ, ಆರ್ಥಿಕ ಹಾನಿ ಹಾಗೂ ಶೈಕ್ಷಣಿಕ ಹಾನಿಗಳಿಂದ ನಮ್ಮ ಕುಟುಂಬ ಇನ್ನು ಚೇತರಿಸಿಲ್ಲ ಎಂದು ಕಿಶನರಾವ್ ಮಳ್ಳಿಯವರು ಹೇಳಿದ್ದಾರೆ (ಸಂದರ್ಶನ : ರುಕ್ಮಿಣಿಬಾಯಿ ಮಳ್ಳಿ, ೨೩.೦೧.೨೦೦೬, ಕಾಮತ್ ೧೯೭೭:೯೦೨-೯೦೫, ಪೊಲೀಸ್ ಪಾಟೀಲ್ ೨೦೦೨:೩೨೫-೩೨೬).

## ೫.೩. ಶ್ರೀರಾಮರಾವ್ ಪಾಂಡುರಂಗರಾವ್ ಹೇಜಿಬ್

ರಾಮರಾವ್ ಅವರು ಸುರಪುರದಲ್ಲಿ ೧೯೩೨ರಲ್ಲಿ ಜನಿಸಿದರು. ಇವರು ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಸುರಪುರದಲ್ಲಿ ಮಾಡಿದರು. ೧೯೪೬ರಲ್ಲಿ Higher Secondry ಪಾಸಾದರು. ಸುರಪುರದಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ಸಭೆ ಸಮಾರಂಭಗಳಲ್ಲಿ ರಾಮರಾವ್ ಅವರು ತಪ್ಪದೇ ಭಾಗವಹಿಸುತ್ತಿದ್ದರು. ಆ ಸಭೆಗಳಲ್ಲಿ ಉಪನ್ಯಾಸಗಳನ್ನು ಹೇಳುತ್ತಿದ್ದರು. ಮ್ಯಾಟ್ರಿಕ್ ಓದುವಾಗಲೇ ಕಾಂಗ್ರೆಸ್ ಬಗ್ಗೆ ಒಲವು ಮಾಡಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಇವರು ವಿದ್ಯಾರ್ಥಿ ಸಂಘಟನಾ ಕಾರ್ಯದರ್ಶಿಯಾಗಿದ್ದರು. ಭಾರತ ಸ್ವಾತಂತ್ರ್ಯವಾದಾಗ ಧ್ವಜ ಮೆರವಣಿಗೆ ಮಾಡುವುದರ ಮೂಲಕ ಸ್ವಾತಂತ್ರ್ಯ ಹೋರಾಟದಲ್ಲಿ ಪಾದಾರ್ಪಣೆ ಮಾಡಿದರು.



ಭಾರತವು ೧೫ ಆಗಸ್ಟ್ ೧೯೪೭ರಂದು ಭಾರತ ಸ್ವಾತಂತ್ರ್ಯ ವಾಯಿತು. ಈ ಸಮಯದಲ್ಲಿ ೨೦-೨೫ ವಿದ್ಯಾರ್ಥಿಗಳು ಭಾರತದ ರಾಷ್ಟ್ರಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಮೆರವಣಿಗೆ ಮಾಡಿದರು. ರಾಷ್ಟ್ರಗೀತೆಗಳನ್ನು ಹಾಡುತ್ತಾ ಮೆರವಣಿಗೆ ಸಾಗಿತ್ತು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಅವರಲ್ಲಿ ರಾಷ್ಟ್ರಾಭಿಮಾನದ ಭಾವನೆ ಆಳವಾಗಿ ಬೇರೂರಿತ್ತು. ಇದು ಕೇವಲ ವಿದ್ಯಾರ್ಥಿಗಳ ಚಳುವಳಿಯಾಗಿತ್ತು. ಈ ಮೆರವಣಿಗೆಯಲ್ಲಿ ವಿದ್ಯಾರ್ಥಿಗಳೆಲ್ಲರು 'ವಂದೇ ಮಾತರಂ', 'ಭಾರತ ಮಾತಾ ಕೀ ಜೈ' ಎಂಬ ಘೋಷಣೆಯನ್ನು ಕೂಗುತ್ತಿದ್ದರು.

ರಾಮರಾವ್ ಅವರು ಧ್ವಜ ಮೆರವಣಿಗೆಯಲ್ಲಿ ಭಾಗಿಯಾಗಿದ್ದರಿಂದ ರಾಮರಾವ್ ಅವರ ತಂದೆಗೆ ಮುಸ್ಲಿಂ ಮುಖಂಡರು "ನಿಮ್ಮ ಮಗನಿಗೆ ಸರಿಯಾಗಿ ಬುದ್ಧಿ ಹೇಳಿ ಶಾಲೆಯನ್ನು ಬಿಟ್ಟು ಚಳುವಳಿಯಲ್ಲಿ ಭಾಗವಹಿಸಬಾರದೆಂದು" ಹೇಳಿದರು. ಸುರಪುರದ ಮುನ್ಸಿಫ್ ನ್ಯಾಯಾಲಯದ ಸಿಪಾಯಿಯಾದ ಸಲೀಮಸಾಬನು ಚಳುವಳಿಯಲ್ಲಿ ಇನ್ನು ಭಾಗವಹಿಸಬಾರದೆಂದರು. ಕಾಂಗ್ರೆಸ್ ಬಸ್ಸಣ್ಣನವರು ರಾಮರಾವ್ ಅವರ ಆತ್ಮೀಯ ಸ್ನೇಹಿತರಾಗಿದ್ದರು. ಅವರು ರಾಮರಾವ್ ಅವರಿಗೆ "ನಿನ್ನ ಹಿಂದೆ ಪೋಲೀಸರು ಬೆನ್ನು ಹತ್ತಿದ್ದಾರೆ. ಇನ್ನು ಮುಂದೆ ಸತ್ಯಾಗ್ರಹದಲ್ಲಿ ಭಾಗವಹಿಸಬಾರದು" ಎಂದು ಎಚ್ಚರಿಕೆ ನೀಡುತ್ತಿದ್ದರು. ಆದರೆ ಯಾರ ಮಾತಿಗೂ ಕಿವಿಗೊಡದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಭಾರತ ಬ್ರಿಟಿಷರ ಆಳ್ವಿಕೆಯಿಂದ ಮುಕ್ತವಾದರೂ ಹೈದರಾಬಾದ್ ಸಂಸ್ಥಾನ ನಿಜಾಂ ಆಳ್ವಿಕೆಯಿಂದ ಇನ್ನು ಮುಕ್ತವಾಗಿರಲಿಲ್ಲ. ಹೈದರಾಬಾದ್‌ದಿಂದ ಈ ಕನ್ನಡ ಪ್ರದೇಶವನ್ನು ಮುಕ್ತಗೊಳಿಸಬೇಕೆಂದು, ಎಲ್ಲರೂ ಒಂದುಗೂಡಿ ನಿಜಾಂ ಅವರ ವಿರುದ್ಧ ಮತ್ತು ರಜಾಕಾರರ ವಿರುದ್ಧ ಉಗ್ರ ಚಳುವಳಿಯನ್ನು ಕೈಗೊಳ್ಳಬೇಕೆಂಬ ಮನೋಭಾವ

ಹೊಂದಿದ್ದರು. ಈ ಸಮಯದಲ್ಲಿ ರಮಾನಂದ ತೀರ್ಥರ ಸಂಪರ್ಕವಾಯಿತು. ಅದರಿಂದಲೂ ದೇಶಾಭಿಮಾನದ ಬಗ್ಗೆ ಪ್ರೇರಣೆ ದೊರೆಯಿತು.

ಕಾಂಗ್ರೆಸ್ ಸಭೆ ಮತ್ತು ಆರ್ಯ ಸಮಾಜದ ಸಭೆ-ಸಮಾರಂಭಗಳು ಸುರಪುರದ ಗೋಪಾಲಸ್ವಾಮಿಯ ದೇವಾಲಯದ ಪ್ರಾಂಗಣದಲ್ಲಿ ನಡೆಯುತ್ತಿದ್ದವು. ರಾಮರಾವ್ ಅವರು ಇಂತಹ ಸಭೆ ಸಮಾರಂಭಗಳಲ್ಲಿ ತಪ್ಪದೇ ಭಾಗವಹಿಸುತ್ತಿದ್ದರು. ಅಕ್ಷರಶಃ ಅದರಲ್ಲಿ ಹೇಳಿದಂತಹ ನಿಯಮಗಳನ್ನು ಪಾಲಿಸಲಿಕ್ಕೆ ಪ್ರಯತ್ನಿಸುತ್ತಿದ್ದರು. ಸಭೆ-ಸಮಾರಂಭಗಳು ಪ್ರಾರಂಭವಾಗುವ ಮೊದಲು ಇವರು 'ವಂದೇ ಮಾತರಂ' ಗೀತೆಯನ್ನು ಹೇಳುತ್ತಿದ್ದರು.

ರಾಮರಾವ್ ಅವರು ವಿದ್ಯಾರ್ಥಿ ದೆಸೆಯಲ್ಲಿದ್ದುದರಿಂದಲೇ ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಅಷ್ಟೊಂದು ಗಮನಾರ್ಹವಾದ ಪಾತ್ರವಹಿಸಲಿಲ್ಲ. ರಾಮರಾವ್ ಅವರು ಕೇವಲ ಕರಪತ್ರಗಳನ್ನು ಹಂಚುವುದು ಮತ್ತು ಧ್ವಜ ಮೆರವಣಿಗೆ ಮಾಡುವುದರ ಮೂಲಕ ಸ್ವಾತಂತ್ರ್ಯ ಹೋರಾಟದಲ್ಲಿ ಈ ರೀತಿಯ ಕೆಲಸ ನಿರ್ವಹಿಸಿದ್ದಾರೆ. ಈ ಕಾರಣದಿಂದ ಒಮ್ಮೆ ಗದಗಿನಿಂದ ಕರಪತ್ರಗಳನ್ನು ತರುವಾಗ ಮಾಳನೂರಿನಲ್ಲಿ ಪೋಲೀಸರ ಕೈಗೆ ಸಿಕ್ಕಿಬಿದ್ದರು. ಕರ ನಿರಾಕರಣೆ, ಸೇಂದಿ ಗಿಡ ಕಡಿಯಬಾರದು, ಕರೋಡಗಿರಿ ಬಂದ್ ಈ ವಿಷಯಗಳು ಕರಪತ್ರ ಒಳಗೊಂಡಿರುವ ವಿಷಯಗಳಾಗಿದ್ದವು. ಪೋಲೀಸರು ಇವರ ಕೈಯಲ್ಲಿದ್ದ ಕರಪತ್ರಗಳನ್ನು ಕಸಿದುಕೊಂಡು ಇವರನ್ನೊಳಗೊಂಡಂತೆ ೧೩ ಜನರನ್ನು ೬ ಜನ ಪೋಲೀಸರೊಂದಿಗೆ ಲಾರಿಯಲ್ಲಿ ಕಲಬುರ್ಗಿಯ ಕೇಂದ್ರ ಜೈಲಿಗೆ ಹಾಕಿದರು. ರಾಮರಾವ್ ಅವರು ಆ ಜೈಲಿನಲ್ಲಿ ೬ ತಿಂಗಳ ೧೫ ದಿನಗಳವರೆಗೆ 'ಸಿ' ದರ್ಜೆಯ ಕೈದಿಯಾಗಿ ೧೪ ವಾರ್ಡಿನಲ್ಲಿ ಬಂಧಿಯಾಗಿದ್ದರು. ಮೇಲಿನ ಎಲ್ಲ ಘಟನೆಗಳನ್ನು ಸ್ವಾತಂತ್ರ್ಯ ನಂತರದಲ್ಲಿ ಕೈಗೊಂಡಿರುವ ಕಾರ್ಯಚಟುವಟಿಕೆಗಳಾಗಿವೆ ಎಂದು ಗೋಪಾಲರಾವ್ ಹೇಜೀಬ್ ಅವರು ಸಂದರ್ಶನದಲ್ಲಿ ತಿಳಿಸಿದ್ದಾರೆ.

ರಾಮರಾವ್ ಅವರಿಗೆ ಪತ್ರಿಕೆ ಓದುವುದೆಂದರೆ ಎಲ್ಲಿಲ್ಲದ ಆಸಕ್ತಿ. ಆಗ ಸುರಪುರಕ್ಕೆ ಬರುತ್ತಿರುವ ಪತ್ರಿಕೆಗಳೆಂದರೆ ಉರ್ದುವಿನ 'ಶಿಯಾಸತ್', 'ಇಮರೋಜ್' ಕನ್ನಡದ 'ಸಂಯುಕ್ತ ಕರ್ನಾಟಕ', ಇಂಗ್ಲೀಷಿನ 'The Hindu' ಪತ್ರಿಕೆಗಳು ಬರುತ್ತಿದ್ದವು (ಸಂದರ್ಶನ : ಗೋಪಾಲರಾವ್ ಹೇಜಿಬ್, ೨೩-೦೧, ೨೦೦೬).

## ೫.೪. ಶ್ರೀ ಕೃಷ್ಣಮಾಚಾರ್ಯ ಪುಣೇಕರ್

ಕೃಷ್ಣಮಾಚಾರ್ಯರು ೧೯೨೦ರಲ್ಲಿ ಸುರಪುರದ ಶ್ರೀವೈಷ್ಣವ ಮನೆತನದಲ್ಲಿ ಜನಿಸಿದರು. ಇವರ ಪೂರ್ವಜರು ಪುಣೆಯಿಂದ ಸುರಪುರಕ್ಕೆ ಬಂದಿದ್ದರಂತೆ ಆದ್ದರಿಂದ ಇವರ ಮನೆತನದ ಅಡ್ಡ ಹೆಸರು ಪುಣೇಕರ್ ಎಂದಿದೆ. ಇವರು ಸುರಪುರದಲ್ಲಿಯೇ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದರು. Higher Secondry Certificate ಪಾಸಾದ ನಂತರ ಕಲಬುರ್ಗಿಯ ನೂತನ ವಿದ್ಯಾಲಯದಲ್ಲಿ ಶಿಕ್ಷಣವನ್ನು ಮುಂದುವರಿಸಿದರು. ವಿನೋಬಾಭಾವೆಯವರ 'ಭೂದಾನ ಚಳುವಳಿ'ಯಿಂದ ಆಕರ್ಷಿತರಾಗಿ ಭೂದಾನದ ಕಾರ್ಯಕರ್ತರಾಗಿಯು ಕೆಲವು ದಿನಗಳವರೆಗೆ ಕೆಲಸ ಮಾಡಿದರು. ನಂತರ ಖಾದಿ ಗ್ರಾಮೋದ್ಯೋಗದಲ್ಲಿ ಕೆಲಸ ನಿರ್ವಹಿಸಿದರು. ನಿಷ್ಠಾವಂತರಾಗಿ ಕೆಲಸ ಮಾಡುತ್ತಾ ಕೊನೆಯವರೆಗೆ ಖಾದಿಯನ್ನೇ ಧರಿಸಿದ್ದರು. ಕೃಷ್ಣಮಾಚಾರ್ಯರು ಆಗಾಗ ಕಲಬುರ್ಗಿಯಿಂದ ಸುರಪುರಕ್ಕೆ ಬರುತ್ತಿದ್ದರು. ಕೃಷ್ಣಮಾಚಾರ್ಯರು ಸುರಪುರಕ್ಕೆ ಬಂದ ಸಂದರ್ಭವೆಂದರೆ ೧೯೪೭ ಅಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಪಡೆದ ದಿನವಾಗಿತ್ತು. ಈ ಸಮಯದಲ್ಲಿ ಸುರಪುರದ ಶಾಲಾ ವಿದ್ಯಾರ್ಥಿಗಳು ಭಾರತದ ರಾಷ್ಟ್ರಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಊರಿನ ಸುತ್ತೆಲ್ಲಾ ಮೆರವಣಿಗೆ ಮಾಡಿದರು. ವಿದ್ಯಾರ್ಥಿಗಳು ರಾಷ್ಟ್ರಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಮೆರವಣಿಗೆ ಮಾಡುತ್ತಾರೆಂದರೆ ಇದರ ಹಿಂದೆ ಕೃಷ್ಣಮಾಚಾರ್ಯರ ಕೈವಾಡವಿರಬಹುದೆಂದು ಪೊಲೀಸರಿಗೆ ಅನುಮಾನ ಬಂದಿತು. ಕೃಷ್ಣಮಾಚಾರ್ಯರ ಜೊತೆ ಶಿವನಾರಾಯಣ ಸೇಠ, ಮಾಧವರಾವ್ ಬಾಸುತ್ಕರ, ತಿರುಮಲರಾವ್ ದೇಸಾಯಿ ಮೊದಲಾದ ಹಿರಿಯರು ವಿದ್ಯಾರ್ಥಿಗಳಿಗೆ ಚಳುವಳಿಯ ಮಾರ್ಗದರ್ಶನ ನೀಡುತ್ತಿದ್ದರು. ಆದ್ದರಿಂದ ಇವರೆಲ್ಲರನ್ನು ಪೊಲೀಸರು ಬಂಧಿಸಿ ಕಲಬುರ್ಗಿಯ ಕೇಂದ್ರ ಸೆರೆಮನೆಗೆ ಕರೆದೊಯ್ದರು. ಅವರ ಮೇಲೆ ಪೊಲೀಸರು ಸರ್ಪಗಾವಲು ಹಾಕಿ ಯಾರಿಗೂ ಕಾಣದಂತೆ ಇವರನ್ನು ಬಂಧಿಸಿಟ್ಟರು. ಇದನ್ನು ನಜರಬಂದ್ ಎಂದು ಕರೆಯುತ್ತಾರೆ.

ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವುದರ ಮೂಲಕ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ವಿದ್ಯಾರ್ಥಿಗಳನ್ನು ಧ್ವಜ ಮೆರವಣಿಗೆ ಕೈಗೊಳ್ಳಲು ಪ್ರೇರೇಪಿಸಿದರು. ಆದರೆ ಇವರು ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಯಾವುದೇ ರೀತಿಯ ಹೋರಾಟವನ್ನು ಕೈಗೊಳ್ಳಲಿಲ್ಲ. ಇವರು ಕೇವಲ ಭಾರತ ಸ್ವಾತಂತ್ರ್ಯವಾದ ಸಮಯದಲ್ಲಿ ಧ್ವಜಾರೋಹಣ ಮಾಡಿದವರಾಗಿದ್ದಾರೆ. ಕೃಷ್ಣಮಾಚಾರ್ಯರು ಶಿಸ್ತಿನ ಸಿಪಾಯಿಗಳು, ಆಗಿದ್ದರು. ಭಾರತ ದೇಶ ಮತ್ತು ಹೈದರಾಬಾದ್‌ದ ವಿಮೋಚನೆಯಿಂದ ಇವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ ಬಹಳ ಸಂತೋಷಪಟ್ಟರು. ದೇಶ ಸ್ವಾತಂತ್ರ್ಯ ಹೊಂದಿದಾಗ ಮಾತ್ರ ನೆಮ್ಮದಿಯ ಜೀವನ ನಡೆಸಲು ಸಾಧ್ಯವಾಗುತ್ತದೆ ಎಂದಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಪಡಬಾರದ ಕಷ್ಟ ಪಟ್ಟು, ಪೋಲೀಸರಿಂದ ದೌರ್ಜನ್ಯಕ್ಕೆ ಒಳಗಾಗಿ ಜೀವನವನ್ನು ಸವೆಸಿದರು (ಸಂದರ್ಶನ : ಕಿಶನ್‌ರಾವ್ ಮಳ್ಳಿ, ೨೩.೦೧.೨೦೦೬).

## ೫.೫. ಕಾಂಗ್ರೆಸ್ ಬಸ್ಸಣ್ಣ

ಹೈದರಾಬಾದ್ ವಿಮೋಚನಾ ಹೋರಾಟದ ಸಂದರ್ಭದಲ್ಲಿ ರಜಾಕಾರರ ಅಥವಾ ನಿಜಾಂ ಸರ್ಕಾರದ ಸಾರ್ವಭೌಮತ್ವದ ವಿರುದ್ಧ ಹೋರಾಟ ನಡೆಯಿತು. ಈ ಹೋರಾಟದಲ್ಲಿ ಎಲೆಮರೆಯ ಕಾಯಿಯಂತೆ ಕಾರ್ಯನಿರ್ವಹಿಸಿದವರಲ್ಲಿ ಕಾಂಗ್ರೆಸ್ ಬಸಣ್ಣನವರ ಹೆಸರು ಎದ್ದುಕಾಣುತ್ತದೆ. ಬಸಣ್ಣನವರ ಮನೆತನದ ಹೆಸರು ಬಾರಿ. ಇವರು ೩-೧೦-೧೯೧೭ರಂದು ಸುರಪುರದಲ್ಲಿ ಜನಿಸಿದರು. ಶಿಕ್ಷಣದಲ್ಲಿ ಇವರಿಗೆ ಆಸಕ್ತಿಯಿರಲಿಲ್ಲ. ೨೫ ವರ್ಷದವರಿದ್ದಾಗ ಇವರು 'ರಾಜ್ಯ ಕಾಂಗ್ರೆಸ್'ನ್ನು ಸೇರಿದರು. ಈ ಸಮಯದಲ್ಲಿ ಭಾರತದಲ್ಲಿ ಕ್ರಾಂತಿಯಕಾಲ ಬ್ರಿಟಿಷರ ವಿರುದ್ಧ ನಡೆಸಿದ ಚಳುವಳಿ ತೀವ್ರ ಮತ್ತು ಉಗ್ರರೂಪ ತಾಳಿತ್ತು. ಇವರು ಕಾಂಗ್ರೆಸ್ ಕಾರ್ಯಕರ್ತರಾಗಿದ್ದರಿಂದ ಕಾಂಗ್ರೆಸ್ ಸಮಿತಿಯ ಕಾರ್ಯಗಳನ್ನು ಮಾಡುತ್ತಿದ್ದರು. ಇವರು ಕಾಂಗ್ರೆಸ್ ಸೇರಿದಾಗ ಸ್ವಾಮಿ ರಮಾನಂದ ತೀರ್ಥರು ಹೈದರಾಬಾದ್ ರಾಜ್ಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಸುರಪುರದ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ನಾಗಣ್ಣ ವಕೀಲ. ಉಪಾಧ್ಯಕ್ಷರು ತುಳಜಾರಾಮಸಿಂಗ್ ವಕೀಲರಾಗಿದ್ದರು.



ನಿಜಾಂ ಕರ್ನಾಟಕ ಪರಿಷತ್ತಿನ ಮೂರನೇ ಅಧಿವೇಶನ ೧೯೩೭ರಲ್ಲಿ ಸುರಪುರದಲ್ಲಿ ನಡೆಯಿತು. ಯಾವುದೇ ಅಡೆತಡೆಗಳಿಲ್ಲದೆ ಈ ಅಧಿವೇಶನ ನಡೆಯಿತು. ಈ ಸಮಯದಲ್ಲಿ ಸ್ವಾಮಿ ರಮಾನಂದ ತೀರ್ಥರು ಹೈದರಾಬಾದಿನಲ್ಲಿ ಒಂದು ಘೋಷಣೆ ಹೊರಡಿಸಿದರು. ಅದೇನೆಂದರೆ ಸತ್ಯಾಗ್ರಹ ಮಾಡಲು ಹೈದರಾಬಾದಿಗೆ ಕಾಂಗ್ರೆಸ್ ಕಾರ್ಯಕರ್ತರೆಲ್ಲರು ಬರಬೇಕೆಂದು ಹೇಳಿದರು. ಇದರಲ್ಲಿ ೪೦೦೦-೫೦೦೦ ಜನ ಸೇರಿದರು. ಈ ಭಾಗದ ಜನಜಾಗೃತಿಯಾಗಲು ನೀವು ನಿಮ್ಮ ಸ್ಥಳಗಳಿಗೆ ಹೋಗಿ ಸಾಧ್ಯವಾದಷ್ಟು ಜನ ಸಂಪರ್ಕ ಮಾಡಿ ಸಮುದ್ರದಲೆಯಂತೆ ಹಾಯ್ದುಬರಲು ಸರ್ವಸಿದ್ಧತೆಯನ್ನು ಮಾಡಿಕೊಳ್ಳಬೇಕೆಂದರು. ಬಸ್ಸಣ್ಣನವರು ಹೈದರಾಬಾದಿಗೆ ಹೋದ ವಿಷಯ ಸುರಪುರದ ಪೊಲೀಸ್ ಇನ್ಸ್‌ಪೇಕ್ಟರ್ ಸಲೀಮುಲ್ಲಾರಿಗೆ ಗೊತ್ತಾಗಿ ಇವರನ್ನು ವಿಚಾರಿಸಿದರು. ಆದರೆ ಇವರು ಏನನ್ನು ಹೇಳದೇ ಕೆಲಸವಿದ್ದರಿಂದ ವಕೀಲರ ಜೊತೆ ಹೋಗಿದ್ದೆ ಎಂದು ಹೇಳಿರುವುದನ್ನು ಎ.ಕೃಷ್ಣರವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ.

ಕಾಸಿಂ ರಜ್ವಿಯು ರಜಾಕಾರರ ಮುಖ್ಯಸ್ಥನಾಗಿದ್ದನು. ಮುಸ್ಲಿಂರೇತರರನ್ನು ಅತ್ಯಂತ ಕ್ರೂರವಾಗಿ ಪೀಡಿಸಿ ಅವರು ಮತಾಂತರ ಹೊಂದುವಂತೆ ಮಾಡುತ್ತಿದ್ದನು. ಸುರಪುರದಲ್ಲಿ ಕಾಂಗ್ರೆಸ್ ಸದಸ್ಯರು ಜನಜಾಗೃತಿ ಮತ್ತು ದೇಶಾಭಿಮಾನವನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಇವರ ಜೊತೆ ವಿದ್ಯಾರ್ಥಿಗಳು ಕೂಡಾ ಪರೋಕ್ಷವಾಗಿ ಚಳುವಳಿಯಲ್ಲಿ ಭಾಗವಹಿಸಿದ್ದರು. ಇವರೊಡನೆ ಶಿವನಾರಾಯಣ

ಸಾಹುಕಾರ, ಲಚಮಪ್ಪ ಸನ್ಯಾಸಿ, ಮಾಧವರಾಯ ಬಾಸುತ್ಕರ, ಕೃಷ್ಣಮಾಚಾರ್ಯ ಪುಣೇಕರ ಮತ್ತು ವೆಂಕೋಬರಾವ್ ಪದಕಿಯವರು ಸೇರಿಕೊಂಡಿದ್ದರು. ವಿದ್ಯಾರ್ಥಿಗಳ ಗುಂಪಿನಲ್ಲಿ ಕಿಶನ್‌ರಾವ್ ಮಳ್ಳಿ, ಗೋಪಾಲರಾವ್ ಆದೋನಿ, ರಾಮರಾವ್ ಹೇಜೀಬ್, ಪಿ.ಕೃಷ್ಣಮಾಚಾರ್ಯರು ಮೊದಲಾದವರು ಈ ಧ್ವಜ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಸ್ವಾತಂತ್ರ್ಯ ದಿನದಂದು ಬೆಳಗಾಗುವುದರೊಳಗೆ ಊರಿನಲ್ಲೆಲ್ಲ ಭಿತ್ತಿ ಪತ್ರಗಳನ್ನು ಪ್ರಮುಖ ಸ್ಥಳಗಳಲ್ಲಿ ಅಂಟಿಸಿ ಜನರ ಲಕ್ಷ್ಯ ಸೆಳೆಯುವಂತೆ ಮಾಡಿದರು. ಗುಲಬರ್ಗಾದ ಕಾಂಗ್ರೆಸ್ ಕಾರ್ಯಕರ್ತರಾದ ಜಗನ್ನಾಥ ಚಂಡ್ರಿಕಿಯವರ ಸುರಪುರದ ವೆಂಕಟರಮಣ ದೇವಾಲಯದಲ್ಲಿ ವಿದ್ಯಾರ್ಥಿಗಳನ್ನು ಸಂಘಟಿಸಿ ಮಾರ್ಗದರ್ಶನವಿತ್ತರು.

ಸ್ವಾತಂತ್ರ್ಯೋತ್ಸವ ಆಚರಣೆ ಮಾಡಿಯೇ ತೀರಬೇಕೆಂಬ ಛಲ ಎಲ್ಲರಲ್ಲೂ ಮೂಡಿತ್ತು. ಬಸ್ಸಣ್ಣನವರು ಕೈಯಲ್ಲಿ ರಾಷ್ಟ್ರಧ್ವಜಗಳನ್ನು ಹಿಡಿದುಕೊಂಡು ಮೆರವಣಿಗೆ ಮಾಡಬೇಕು ಎಂಬ ಆಸೆ ಹೊಂದಿದ್ದರು. ಇವರು ದರ್ಜಿಯಾಗಿದ್ದರಿಂದ ಒಂದೇ ದಿನದಲ್ಲಿ ೧೧೫ ರಾಷ್ಟ್ರಧ್ವಜಗಳನ್ನು ಹೊಲಿದಿದ್ದರು ಎಂದು ಕಿಶನ್‌ರಾವ್ ಮಳ್ಳಿಯವರು ತಮ್ಮ ಸಂದರ್ಶನದಲ್ಲಿ ಹೇಳಿದ್ದಾರೆ (ಸಂದರ್ಶನ : ಕಿಶನ್‌ರಾವ್ ಮಳ್ಳಿ ೨೩.೦೧.೨೦೦೬). ಧ್ವಜ ಮೆರವಣಿಗೆಯಲ್ಲಿ ವಿದ್ಯಾರ್ಥಿಗಳು ಶಿವನಾರಾಯಣ ಸೇಠ, ಮಾಧವರಾವ್ ಭಾಸುತ್ಕರ ಇವರ ಮುಂದಾಳತ್ವದಲ್ಲಿ ಭಾಗವಹಿಸಿದರು. ಇದರಲ್ಲಿ ಬಸಣ್ಣನವರು ಈ ಧ್ವಜ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಇವರನ್ನು ಸೆರೆಮನೆಗೆ ಹಾಕಿದಾಗ ರಾಮಕರಣಸೇಠ, ಶೇಖ ಇಮಾಮ್ ಸಾಬ ಉಸ್ತಾದ ಬಂದು ಬಿಡಿಸಿದರು. ನಂತರ ಇವರು ಮದ್ರಾಸ್ಸಿನಿಂದ ಮುಂಬೈಗೆ ಹೋಗುತ್ತಿದ್ದ ರೈಲುಗಾಡಿಯನ್ನು ಹತ್ತಿ ಹುಟಗಿ ಮಾರ್ಗವಾಗಿ ತಾಳಿಕೋಟೆ ತಲುಪಿದರು ಎಂದು ಕಾಂಗ್ರೆಸ್ ಬಸ್ಸಣ್ಣನವರ ಆತ್ಮಚರಿತ್ರೆಯನ್ನು ಬರೆದ ಎ.ಕೃಷ್ಣರವರು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ.

ರಾಜಾ ವೆಂಕಟಪ್ಪನಾಯಕರ ನಾಯಕತ್ವದಲ್ಲಿದ್ದ ಬಂಟನೂರ, ನಾಗರಬೆಟ್ಟ ಮತ್ತು ಸಾಲವಾಡಗಿ ಶಿಬಿರಗಳು ಚೆನ್ನಾಗಿ ಕಾರ್ಯನಿರ್ವಹಿಸುವಂತೆ ನೋಡಿಕೊಳ್ಳುತ್ತಿದ್ದರು. ಬಸ್ಸಣ್ಣನವರು ತಾಳಿಕೋಟೆ ಶಿಬಿರಕ್ಕೆ ಬಂದಾಗ ರಾಜಾ ವೆಂಕಟಪ್ಪ ನಾಯಕರು ಇವರನ್ನು ಸಾಲವಾಡಗಿ ಶಿಬಿರಕ್ಕೆ ಕಳಿಸಿದರು. ಈ ಶಿಬಿರದಲ್ಲಿ ಬಸ್ಸಣ್ಣನವರನ್ನು ಶಿಬಿರದ ಉಗ್ರಾಣದ ಜೊತೆಗೆ ಪಾಕಶಾಲೆಯ ವ್ಯವಸ್ಥಾಪಕರನ್ನಾಗಿ ನೇಮಿಸಿದರು. ಇವರು ರಾತ್ರಿಯಲ್ಲೆಲ್ಲಾ ಸುತ್ತಮುತ್ತಲಿನ ಗ್ರಾಮಗಳಲ್ಲಿ ಅಲೆದಾಡುವುದು, ಅಲ್ಲಿ ಮಾಹಿತಿ ಸಂಗ್ರಹಿಸಿ ಶಿಬಿರಕ್ಕೆ ತಲುಪಿಸುವ ಕಾರ್ಯವನ್ನು ಮಾಡುತ್ತಿದ್ದರು. ಅಂದರೆ ಆ ಗ್ರಾಮಗಳ ಮುಖಂಡರನ್ನು, ಜನರನ್ನು ಭೇಟಿ ಮಾಡಿ ಎಲ್ಲ ರೀತಿಯ ಸುದ್ದಿಗಳನ್ನು ಸಂಗ್ರಹಿಸಿ ಕೇಂದ್ರಕ್ಕೆ ಮಾಹಿತಿಯನ್ನು ನೀಡುತ್ತಿದ್ದರು. ಸುತ್ತಮುತ್ತಲಿನ ಹಳ್ಳಿಗಳಿಂದ ಜನರು ಬಂದು ಶಿಬಿರದಲ್ಲಿ ಸೇರುತ್ತಿದ್ದರಿಂದ ಆಹಾರದ ಸಮಸ್ಯೆ ಹೆಚ್ಚಾಯಿತು. ಆಹಾರ ಧಾನ್ಯಗಳ ಸಂಗ್ರಹದ ಜೊತೆ ಕಂತಿ ಭಿಕ್ಷೆ ಆರಂಭವಾಯಿತೆಂದು ಇವರ ಜೊತೆ ಹೋರಾಟ ನಡೆಸಿದ ಹೋರಾಟಗಾರರಾದ ವೆಂಕನಗೌಡರು ಹೇಳಿದ್ದಾರೆ (ಸಂದರ್ಶನ :

ವೆಂಕನಗೌಡ ೨೪.೦೨.೨೦೦೬). ಗಡಿ ಕಾವಲಿಗಾಗಿ ರಜಾಕಾರರ ಸೈನ್ಯವಿತ್ತು. ಈ ಸೈನ್ಯದಲ್ಲಿ ರೋಹಿಲ್ಲರು, ಪಠಾಣರು, ರಜಾಕಾರರು, ಅರೆ ತರಬೇತಿ ಪಡೆದ ಮತ್ತು ಒತ್ತಾಯವಾಗಿ ಸೇರಿಸಲ್ಪಟ್ಟ ಮುಸ್ಲಿಂರು ಇದ್ದರು.

ಶಿಬಿರದ ಕಾರ್ಯಕರ್ತರು ಮಾಡುತ್ತಿರುವ ಕಾರ್ಯಗಳಿಗೆ ಸ್ಪಂದಿಸಿ ಜನರು ಉದಾರ ಮನಸ್ಸಿನಿಂದ ಧಾನ್ಯ, ಹಣ ಹಾಗೂ ಆಂತರಿಕ ಬೆಂಬಲ ನೀಡುತ್ತಿದ್ದರು. ರಜಾಕಾರರ ದಬ್ಬಾಳಿಕೆ ಮಿತಿ ಮೀರಿದಾಗ ಶಿಬಿರದ ಕಾರ್ಯಕರ್ತರು ರಜಾಕಾರರೊಂದಿಗೆ ಮುಖಾಮುಖಿಯಾದ ಹೋರಾಟವನ್ನು ಕೈಗೊಂಡು ಅವರನ್ನು ಸೋಲಿಸುತ್ತಿದ್ದರು. ೧೯೪೮ ಮೇ ತಿಂಗಳಲ್ಲಿ ರಾಜನ ಕೋಳೂರಿನ ಹತ್ತಿರವಿರುವ ಮೂಕಾರ್ತಿ ಗುಡ್ಡದಲ್ಲಿ ಪಠಾಣರು ರಹಸ್ಯವಾಗಿ ಅಡಗಿದ್ದರು. ತಾಳಿಕೋಟೆ ಶಿಬಿರದ ಶಿಬಿರಾರ್ಥಿಗಳು ಮಾಳನೂರ ಕಡೆ ಹೋಗಲು ಹೊಂಚುಹಾಕಿ ಕುಳಿತಿದ್ದರು. ನಂತರ ರಜಾಕಾರರು ಮತ್ತು ಶಿಬಿರಾರ್ಥಿಗಳ ನಡುವೆ ಸಂಭವಿಸಿದ ಘರ್ಷಣೆಯಲ್ಲಿ ವಿರೂಪಾಕ್ಷಪ್ಪಗೌಡ, ಮಹಾಂತಪ್ಪ ಹಗರಟಗಿ ಮರಣ ಹೊಂದಿದ್ದರು. ಪೋಲೀಸ್ ಕಾರ್ಯಾಚರಣೆಯ ನಂತರ ರಾಜಾ ವೆಂಕಟಪ್ಪನಾಯಕರ ನೇತೃತ್ವದಲ್ಲಿ ಎಲ್ಲ ಶಿಬಿರಾರ್ಥಿಗಳು ಸುರಪುರವನ್ನು ಪ್ರವೇಶಿಸುವ ಸಲುವಾಗಿ ದೇವಾಪುರದ ಮಾರ್ಗವಾಗಿ ಹೋಗಬೇಕಾಗಿತ್ತು, ದಾರಿಯಲ್ಲಿ ಜನರು ಇವರನ್ನು ಆತ್ಮೀಯತೆಯಿಂದ ಬರಮಾಡಿಕೊಂಡು ಇವರಿಗೆ ಊಟದ ವ್ಯವಸ್ಥೆ ಮಾಡಿದರು. ೧೯೪೮ ಸೆಪ್ಟೆಂಬರ್ ೧೮ ರಂದು ಹೈದರಾಬಾದ್ ಸಂಸ್ಥಾನ ಭಾರತದೊಂದಿಗೆ ವಿಲೀನವಾಯಿತು. ಹೈದರಾಬಾದ್ ಸಂಸ್ಥಾನ ಭಾರತದೊಂದಿಗೆ ವಿಲೀನವಾದ ನಂತರ ಮುಸ್ಲಿಂ ಜನರು ಭಯದಿಂದ ಭೂಗತರಾಗಿ ಬಿಟ್ಟಿದ್ದರು. ಈ ಶಿಬಿರಾರ್ಥಿಗಳೆಲ್ಲರು ೧೯೪೮ ಸೆಪ್ಟೆಂಬರ್ ೨೪ರಂದು ಸುರಪುರವನ್ನು ಪ್ರವೇಶಿಸಿದರು. ರಜಾಕಾರರ ಮತ್ತು ನಿಜಾಂ ಅವರ ಪೋಲೀಸ್ ಸೈನ್ಯ ಸುರಪುರದಿಂದ ನಿರ್ಗಮಿಸಿತ್ತು.

ಬಸ್ಸಣ್ಣನವರು ಕೊನೆಯವರೆಗೂ ಕಾಂಗ್ರೆಸ್ಸನ್ನು ಬಿಡದೆಯಿರುವುದರಿಂದ ಕಾಂಗ್ರೆಸ್ ಬಸ್ಸಣ್ಣರೆಂದೇ ಹೆಸರು ವಾಸಿಯಾದರು. ಬಸ್ಸಣ್ಣನವರು ೧೯೭೨ ರಿಂದ ಮಾಸಾಶನ/ಸರ್ಕಾರದಿಂದ ಪಿಂಚಣಿ ಪಡೆಯುತ್ತಿದ್ದರು. ೧೯೯೪ ಮಾರ್ಚ್ ೨೫ ರಂದು ಇವರು ಮರಣ ಹೊಂದಿದ್ದರು. ಬಸ್ಸಣ್ಣನವರು 'ದರ್ಜಿ ಬಸ್ಸಣ್ಣ', 'ಕಾಂಗ್ರೆಸ್ ಬಸ್ಸಣ್ಣ' ಎಂದು ಕೂಡ ಗುರ್ತಿಸಲ್ಪಡುತ್ತಿದ್ದರು (ಸಂದರ್ಶನ : ಕಿಶನ್‌ರಾವ್ ಮಳ್ಳಿ, ೨೩.೦೧.೨೦೦೬, ಕೃಷ್ಣಮಾಚಾರ್ಯ, ೧೯೯೨ : ೧-೩೮).

ಮೊದಲು ತಿಳಿಸಿದಂತೆ ಎರಡನೇ ವರ್ಗಕ್ಕೆ ಸಂಬಂಧಿಸಿದ ಹೋರಾಟಗಾರರ ಚಿತ್ರಣವನ್ನು ಅಧ್ಯಯನದ ಈ ಭಾಗದಲ್ಲಿ ನೀಡಲಾಗಿದೆ.

## ೫.೬. ಶರಣಗೌಡ ಇನಾಂದಾರ

ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಅನೇಕ ಜನರು ಭಾಗವಹಿಸಿದ್ದಾರೆ. ಅವರಲ್ಲಿ ಸರ್ದಾರ ಶರಣಗೌಡರು ಒಬ್ಬರಾಗಿದ್ದಾರೆ. ಇವರು ಜೇವರ್ಗಿ ತಾಲ್ಲೂಕಿನ ದುಮ್ಮದ್ರಿಯವರು. ೧೯೨೦ರಲ್ಲಿ ಜನಿಸಿದ ಇವರು ಪ್ರಾಥಮಿಕ ಶಿಕ್ಷಣವನ್ನು ಅಲ್ಲಿಯೇ ಮುಗಿಸಿ ಪ್ರೌಢಶಾಲೆ ಅಭ್ಯಾಸವನ್ನು ಗುಲಬರ್ಗಾದ ಸರ್ಕಾರಿ ಪ್ರೌಢಶಾಲೆಯಲ್ಲಿ ಮುಂದುವರೆಸಿದರು. ಇವರಿಗೆ 'ದೀನಯಾತ' ಎಂಬ ಧಾರ್ಮಿಕ ಭೋದನೆಯ ಪಿರಿಯಡ್ ಇರುತ್ತಿತ್ತು. 'ವಂದೇ ಮಾತರಂ' ಚಳುವಳಿಗೆ ಮಾರು ಹೋದ ಇವರು ಈ ವಿಮೋಚನೆ ಚಳುವಳಿಯಲ್ಲಿ ಧುಮುಕಿದರು.



ಪ್ರಾರಂಭದಿಂದಲೂ ಸ್ವಾತಂತ್ರ್ಯ ಹೋರಾಟದ ಬಗ್ಗೆ ಆಗಾಧ ಕುತೂಹಲ ಹೊಂದಿದ್ದರು. ೧೯೩೯ರ ಸುಮಾರಿನಲ್ಲಿ ಸುಭಾಸಚಂದ್ರ ಭೋಸರು ಮದ್ರಾಸಿಗೆ ಬಂದಾಗ ಶರಣಗೌಡರು ಅವರನ್ನು ಭೇಟಿ ಮಾಡಿದರು. 'ವಂದೇ ಮಾತರಂ' ಚಳುವಳಿಯ ಕುರಿತು ಅವರೊಂದಿಗೆ ಚರ್ಚೆ ಮಾಡಿದಾಗ ಸುಭಾಸರು "ಅದೊಂದು ರಾಷ್ಟ್ರೀಯ ಚಳುವಳಿ, ಜಾತಿಯ ಚಳುವಳಿಯಲ್ಲ ಅದನ್ನು ಮುಂದುವರೆಯಿಸಿ" ಎಂದು ಧೈರ್ಯ ಹೇಳಿದರು. ಈ ಎಲ್ಲ ಕಾರ್ಯಚಟುವಟಿಕೆಗಳಿಂದ ಶರಣಗೌಡರನ್ನು ಸಂಸ್ಥಾನದ ಶಾಲೆಯಿಂದ ಹೊರಹಾಕಿದಾಗ ಶರಣಗೌಡರು ನಾಗಪುರದಲ್ಲಿ ಇಂಟರ್ ಮೀಡಿಯಟ್‌ವರೆಗೂ ಶಿಕ್ಷಣ ಪಡೆಯಲು ಸಾಧ್ಯವಾಯಿತು. ೧೯೪೨ರಲ್ಲಿ ಅಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ಸುರಪುರದಲ್ಲಿ ನಡೆದ ನಿಜಾಂ ಪರಿಷತ್ತಿನ ಅಧಿವೇಶನದಲ್ಲಿ ಶರಣಗೌಡರು ಭಾಗವಹಿಸಿದ್ದರು. ನಿಜಾಂ ಅವರ ಆಳ್ವಿಕೆಯಿಂದ ಈ ಪ್ರದೇಶಗಳನ್ನು ಮುಕ್ತಗೊಳಿಸಲು ಮತ್ತು ರಜಾಕಾರರ ವಿರುದ್ಧ ಹೋರಾಟ ಮಾಡಲು ನಿಜಾಂ ಪ್ರದೇಶದ ಗಡಿಗಳಲ್ಲಿ ಅಂಟಿಕೊಂಡಿರುವ ಪ್ರದೇಶದಲ್ಲಿ ಶಿಬಿರಗಳನ್ನು ಸ್ಥಾಪಿಸಿದರು. ಅದರಲ್ಲಿ ಸಿಂದಗಿ ಶಿಬಿರವು ಪ್ರಮುಖವಾಗಿದೆ. ಸರ್ದಾರ ಶರಣಗೌಡರು ಸಿಂದಗಿ ಶಿಬಿರದ ಶಿಬಿರಾಧಿಪತಿಗಳಾಗಿದ್ದರು.

ಶರಣಗೌಡರು ರಜಾಕಾರರ ವಿರುದ್ಧ ಹೋರಾಟವನ್ನು ಸಿಂದಗಿ ಶಿಬಿರದಿಂದ ಕೈಗೊಂಡರು. ಸುರಪುರ ತಾಲ್ಲೂಕಿನ ಕೆಂಭಾವಿ ಎಂಬ ಪ್ರದೇಶವು ರಜಾಕಾರರಿಂದ ದೌರ್ಜನ್ಯಕ್ಕೊಳಗಾಗಿದೆ ಎಂಬ ಸುದ್ಧಿ ತಿಳಿದ ಕೂಡಲೇ ಶಿಬಿರಾರ್ಥಿಗಳ ಸಹಾಯದಿಂದ ಶರಣಗೌಡರು ಆ ಪ್ರದೇಶಕ್ಕೆ ಬಂದರು. ಭಾರತದ ಪೊಲೀಸರು (ಸೈನ್ಯ) ಇವರಿಗೆ ಯಾವಾಗಲೂ ರಕ್ಷಣೆ ಮಾಡಲು ಇವರನ್ನು ಹಿಂಬಾಲಿಸುತ್ತಿದ್ದರು. ಶರಣಗೌಡರು ಭಾರತದ ಮಿಲಿಟರಿ ಅಧಿಕಾರಿಗಳೊಂದಿಗೆ ಮಾತಾಡಿ ಅವರನ್ನು ಒಪ್ಪಿಸಿ ಅವರಿಂದ ಒಂದು ಶಸ್ತ್ರ ಸಜ್ಜಿತ ಟ್ಯಾಂಕನ್ನು ತರಿಸಿದರು. ಕೆಂಭಾವಿ, ಮಲ್ಲಾ ಈ ಪ್ರದೇಶಗಳಲ್ಲಿ ರಜಾಕಾರರ ಜೊತೆ ಘರ್ಷಣೆ

ಆರಂಭವಾಯಿತು. ಶರಣಗೌಡರು ರಜಾಕಾರರ ಜೊತೆ ಗುಂಡಿನ ಚಕಮಕಿ ನಡೆಸಿದರಲ್ಲದೆ ಶಸ್ತ್ರಸಜ್ಜಿತ ಟ್ಯಾಂಕ್ ರಜಾಕಾರರ ಮೇಲೆ ಹಾರಿಸಿದರು. ಅಲ್ಲಿಂದ ಉಮರ್ಗಾದಲ್ಲಿ ಸುಮಾರು ೩ ತಾಸುಗಳವರೆಗೆ ರಜಾಕಾರರೊಡನೆ ಹೋರಾಟ ನಡೆಯಿತು. ಇವರು ರಜಾಕಾರರ ಮೇಲೆ ದಾಳಿ ಮಾಡಿ ಅವರ ಕುದುರೆಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಮಾಳನೂರಿನಲ್ಲಿ ಅರಬರು, ಪಠಾಣರು ಬಹಳ ಸಂಖ್ಯೆಯಲ್ಲಿದ್ದಾರೆ ಎಂದು ಸುದ್ದಿ ತಿಳಿದ ಸರ್ದಾರ ಶರಣಗೌಡರ ನಂತರ ಮಾಳ್ನೂರಿಗೆ ಹೋದರು. ಅಗ್ನಿ ಎಂಬ ಪ್ರದೇಶದಲ್ಲಿ ಪೊಲೀಸ ಠಾಣೆಯಿತ್ತು. ಅಲ್ಲಿ ೫-೬ ಪೋಲೀಸರು ಪಕ್ಕದ ಹಳ್ಳಿಯ ಗೌಡರನ್ನು ಠಾಣೆಯಲ್ಲಿ ಕಲೆ ಹಾಕಿದ್ದರು. ಸರ್ದಾರ ಶರಣಗೌಡರು ಪೋಲೀಸ್ ಠಾಣೆಯನ್ನು ಸುತ್ತುವರೆದು ಪೋಲೀಸರ ಮೇಲೆ ಗುಂಡು ಹಾರಿಸಿ ಹಿಡಿದಿಟ್ಟ ಗೌಡರನ್ನು ಬಿಡುಗಡೆ ಮಾಡಿಸಿದರು.

ಸರ್ದಾರ ಶರಣಗೌಡರು ಮತ್ತು ಅವರ ಸಂಗಡಿಗರು ಹಗರಟಗೆಗೆ ಬಂದಿದ್ದಾರೆಂಬ ಮಾಹಿತಿ ತಿಳಿದ ಕೂಡಲೇ ಕೊಡೇಕಲ್ಲದಿಂದ ನಿಜಾಂ ಅವರ ಪೋಲೀಸರು ಬಂದರು. 'ಶಿಕಾರ ಆಯಾ ಹೈ, ಡೂಂಡನೇಕೆ ಲಿಯೇ ಆಯೇ ಹೈ' ಎಂದು ಹೇಳಿದರು. ಪೋಲೀಸರ ಕೈಗೆ ಸಿಗದೆ ಶರಣಗೌಡರು ಪಾರಾದರು. ನಾರಾಯಣಪುರದಿಂದ ಕೊಡೇಕಲ್ ಮಧ್ಯ ಬರುವ ಎಲ್ಲಾ ಕರೋಡಗಿರಿ ನಾಕಾಗಳನ್ನು ಸುಟ್ಟು ಹಾಕಿದರು. ಪ್ರತಿ ಕರೋಡಗಿರಿ ನಾಕಾಕ್ಕೆ ಇಬ್ಬರು ಪೋಲೀಸರು ಇರುತ್ತಿದ್ದರು. ಏಕೆಂದರೆ ಅಲ್ಲಿ ಹಣದ ಸಂಗ್ರಹವಿರುತ್ತಿತ್ತು. ಶರಣಗೌಡರು ಬ್ರಿಟಿಷ್ ಸರ್ಕಾರದ ಸುತ್ತಮುತ್ತಲಿನ ಹಳ್ಳಿಗಳ ಜನರಿಂದ ಹಪ್ತಗಳನ್ನು ವಸೂಲಿ ಮಾಡಿ ಶಿಬಿರಕ್ಕಾಗಿ ಖರ್ಚು ಮಾಡುತ್ತಿದ್ದರು ಹಾಗೆಯೇ ಅದರ ಜಮಾ, ಖರ್ಚಿನ ಲೆಕ್ಕವನ್ನಿಟ್ಟಿದ್ದರು. ಹೈದರಾಬಾದ್ ಸಂಸ್ಥಾನವು ಸ್ವಾತಂತ್ರ್ಯವಾಗಬೇಕೆಂದು ೧೯೪೮ರ ಮುಂಬೈ ಕಾಂಗ್ರೆಸ್ ಅಧಿವೇಶನದಲ್ಲಿ ಜನಾರ್ಧನರಾವ್ ದೇಸಾಯಿ, ಕಂಠಿಯವರೊಂದಿಗೆ ಸರ್ದಾರ ಪಟೇಲರನ್ನು ಕಂಡು ಪೊಲೀಸ ಕಾರ್ಯಚರಣೆಯ ಅಗತ್ಯವನ್ನು ತಿಳಿಸಿದರು. ಪೋಲೀಸ್ ಕಾರ್ಯಚರಣೆಯ ಫಲವಾಗಿ ನಿಜಾಂ ಸಂಸ್ಥಾನ ಭಾರತದ ಸೈನ್ಯಕ್ಕೆ ಶರಣಾಗತವಾಯಿತು. ೧೯೪೮ ಸೆಪ್ಟೆಂಬರ್ ೧೭ರಂದು ನಿಜಾಂ ಸಂಸ್ಥಾನ ಭಾರತದೊಂದಿಗೆ ವಿಲೀನವಾಯಿತು.

ಈ ಭಾಗದ ಸ್ವಾತಂತ್ರ್ಯಕ್ಕಾಗಿ, ರಜಾಕಾರರ ದಬ್ಬಾಳಿಕೆಯಿಂದ ಈ ಪ್ರದೇಶದ ಜನರನ್ನು ರಕ್ಷಿಸಲು, ಗಡಿ ಭಾಗದ ಜನರ ರಕ್ಷಣೆಗಾಗಿ ಇಂತಹ ಹಲವಾರು ಸಂದರ್ಭಗಳಲ್ಲಿ ಶರಣಗೌಡರು ಜೀವನದ ಹಂಗು ತೊರೆದು ಹೋರಾಡಿರುವುದು ಅವರು ಮಾಡಿದ ಹೋರಾಟಗಳಿಂದ ತಿಳಿದುಬರುತ್ತದೆ (ಸಂದರ್ಶನ : ಸರ್ದಾರ ಶರಣಗೌಡ ೨೩.೦೧.೨೦೦೬, ಪೊಲೀಸ್ ಪಾಟೀಲ್ ೨೦೦೨ : ೩೦೭-೩೧೦).

## ೫.೭. ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕ

ವೆಂಕಟಪ್ಪನಾಯಕರು ೧೯೦೫ರಲ್ಲಿ ಸುರಪುರದಲ್ಲಿ ಜನಿಸಿದರು. ರಾಜ ಮನೆತನದವರಾದ ರಾಜಾಕೃಷ್ಣಪ್ಪನಾಯಕ ಮತ್ತು ರಾಣಿ ಶೇಷಮ್ಮ ಇವರ ತಂದೆ-ತಾಯಿಯವರಾಗಿದ್ದಾರೆ. ಚಿಕ್ಕವರಿದ್ದಾಗ ಇವರನ್ನು ಶಾಲೆಗೆ ಕಳಿಸದೆ ಹೈದ್ರಾಬಾದಿನಲ್ಲಿ ಮಿಶಾ ಎನ್ನುವ ಬ್ರಿಟಿಷ್ ಪಾದ್ರಿಯ ಹತ್ತಿರ ಟ್ಯೂಶನ್‌ಗೆ ಕಳಿಸುತ್ತಿದ್ದರು. ಅಲ್ಲಿಂದ ಲಂಡನ್ನಗೆ ಹೋಗಿ ಅಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಮಾಧ್ಯಮದಲ್ಲಿ ಅಭ್ಯಾಸ ಮುಂದುವರಿಸಿದರು. ಅಲ್ಲಿಂದ ಲಂಡನಿಗೆ ಹೋಗಿ ಬಾರ್-ಆ್ಯಟ್-ಲಾ ೧೯೩೮ರಲ್ಲಿ ಪದವಿಯನ್ನು ಮುಗಿಸಿಕೊಂಡು ಹೈದ್ರಾಬಾದಿಗೆ ಬಂದರು. ಅಲ್ಲಿ ೨-೩ ವರ್ಷಗಳ ಕಾಲ ವಕೀಲ ವೃತ್ತಿಯನ್ನು ಆರಂಭಿಸಿದರು. ಇವರು ಲಂಡನ್ನಿಗೆ ಬಾರ-ಆ್ಯಟ್ಸ್-ಲಾ ಓದಲು ಹೋದಾಗ ನಿಜಾಂ ಸರ್ಕಾರ ವಿದ್ಯಾರ್ಥಿ ವೇತನವನ್ನು ನೀಡಿದ ಸಂಗತಿ ಗಮನಾರ್ಹವಾದುದು.



ಭಾರತವು ೧೯೪೭ ಅಗಸ್ಟ್ ೧೫ಕ್ಕೆ ಸ್ವತಂತ್ರವಾಯಿತು. ಆದರೆ ನಿಜಾಂ ಅವರಿಂದ ಈ ಭಾಗ ಇನ್ನು ಸ್ವತಂತ್ರವಾಗಿರಲಿಲ್ಲ. ಈ ಭಾಗವನ್ನು ಅಥವಾ ಪ್ರದೇಶವನ್ನು ನಿಜಾಂ ಅವರಿಂದ ಮುಕ್ತಿಗೊಳಿಸಬೇಕೆನ್ನುವ ಹೆಬ್ಬಯಕೆಯಿಂದ ಹೈದ್ರಾಬಾದ್ ವಿಮೋಚನಾ ಚಳುವಳಿಯಲ್ಲಿ ಧುಮುಕಿದರು. ತಂದೆ ತಾಯಿಗಳ ಪ್ರೋತ್ಸಾಹ ಮತ್ತು ಪ್ರೇರಣೆ, ಸರ್ದಾರ ವಲ್ಲಭಬಾಯಿ ಪಟೇಲ್‌ರ ನಿಕಟ ಸಂಪರ್ಕ ಹಾಗೂ ಸಲಹೆ ಸೂಚನೆಯಿಂದ ಸ್ವತಂತ್ರನಾಗಿರಬೇಕೆಂಬ ಛಲ ಇವರಲ್ಲಿ ಮೂಡಿತು. ಅಷ್ಟಾವಧಾನಿ ನರಸಿಂಹ ಶಾಸ್ತ್ರಿಗಳಿಂದ ಕನ್ನಡವನ್ನು ಓದಲು, ಬರೆಯಲು ಕಲಿತರು. ಇವರು ಪಟೇಲರನ್ನು ಕಾಣಲು ಹೋದಾಗ ಪಟೇಲರೇ ಇವರಿಗೆ ತಿಳಿಸಿ ಹೇಳಿದರು. "ನೀವು ಬಾರ-ಆ್ಯಟ್-ಲಾ ಓದುವಾಗ ನಿಜಾಂ ಸರ್ಕಾರದ ವಿದ್ಯಾರ್ಥಿ ವೇತನ ಪಡೆದಿದ್ದೀರಿ. ಅವರ ವಿರುದ್ಧ ಚಳುವಳಿ ಹೂಡಿದರೆ ಹೇಗೆ? ನೀವು ನಮ್ಮ ಹತ್ತಿರ ಬಂದು ಹೋದ ಸುದ್ದಿ ನಿಜಾಂ ಅವರಿಗೆ ಗೊತ್ತಾದರೆ ಮುಂದೆ ನಿಮ್ಮ ಜೀವನಕ್ಕೆ ಗಂಡಾಂತರವೆಂದು" ತಿಳಿ ಹೇಳಿದರು. ಈ ಚಳುವಳಿಯಲ್ಲಿ "ನಾವು ಭಾಗಿಗಳಾಗುತ್ತೇವೆ ನಮಗೆ ನಿಮ್ಮಿಂದ ಸರ್ಕಾರದ ಸವಲತ್ತುಗಳು ಬೇಕು. ನೀವು ಕೂಡ ನಿಮ್ಮ ಸರ್ಕಾರದಿಂದ ಹೈದ್ರಾಬಾದಿಗೆ ಪೋಲೀಸರನ್ನು ಕರೆಸಿ ಕಾರ್ಯಚರಣೆ ತೆಗೆದುಕೊಳ್ಳುವಂತೆ" ಪ್ರಾರಂಭಿಸಬೇಕೆಂದು ಕೇಳಿಕೊಂಡರು.

ಇವರು ರಾಜ್ಯ ಕಾಂಗ್ರೆಸ್‌ನೊಂದಿಗೆ ತಮ್ಮನ್ನು ಗುರುತಿಸಿಕೊಂಡರು. ಸ್ವಪೇರಣೆಯಿಂದ ತಾಳಿಕೋಟೆ ಶಿಬಿರವನ್ನು ಪ್ರವೇಶಿಸಿದರು. ಈ ಶಿಬಿರದಲ್ಲಿ ಸುಮಾರು ೨೫-೩೦ ಜನರಿದ್ದರು. ಈ ಜನರಿಗೆ ಯಾವ

ಯಾವ ಕೆಲಸಗಳನ್ನು ಕೊಡಬೇಕು, ಯಾರು ಯಾವ ಕೆಲಸಕ್ಕೆ ಯೋಗ್ಯರೆಂಬುದನ್ನು ಅರಿತು ಅವರವರಿಗೆ ತಕ್ಕಂತೆ ಜವಾಬ್ದಾರಿಯನ್ನು ಕೊಡುತ್ತಿದ್ದರು. ಸುತ್ತಮುತ್ತಲಿನ ಹಳ್ಳಿಗಳು ಇವರಿಗೆ ಸಹಕಾರ ನೀಡುತ್ತಿದ್ದವು. ಯಾರಿಗಾದರೂ ರಜಾಕಾರರಿಂದ ದೌರ್ಜನ್ಯವಾಗುತ್ತಿದ್ದರೆ ಅಲ್ಲಿ ಹೋಗಿ ಪ್ರತಿಭಟನೆ ಮಾಡುತ್ತಿದ್ದರು. ಈ ಶಿಬಿರದಲ್ಲಿ ಅವರ ಆಪ್ತರಾದ ವಕೀಲರು ಇದ್ದರು. ಅವರು ಕಮಾಂಡರ್ ಇನ್ ಚೀಫ್ ಹುದ್ದೆಯನ್ನು ಹೊಂದಿದ್ದರು. ಅವರು ಶಸ್ತ್ರಾಸ್ತ್ರಗಳ ತರಬೇತಿ ಪಡೆದು ಬಂದಿದ್ದರು. ಶಿಬಿರದ ಜನರಿಗೂ ಈ ತರಬೇತಿ ನೀಡಿದರು. ಇವರಲ್ಲಿದ್ದ ಶಸ್ತ್ರಾಸ್ತ್ರಗಳ ಸಂಖ್ಯೆ ಕಡಿಮೆಯಿದ್ದವು. ಬಾಂಬುಗಳನ್ನು ಬಿಜಾಪುರದಿಂದ ಗುಪ್ತವಾಗಿ ತರಿಸಿಕೊಳ್ಳುತ್ತಿದ್ದರು. ರಾಜಾ ವೆಂಕಟಪ್ಪನಾಯಕರ ಬಲಗೈ ಬಂಟನಾಗಿ ನೆರಳಿನಂತೆ ತಿಮ್ಮಯ್ಯ ದರಬಾರಿಯವರು ಹಿಂಬಾಲಿಸುತ್ತಿದ್ದರು ಎಂದು ಸಂದರ್ಶನದಲ್ಲಿ ರಾಜಾ ವೆಂಕಟಪ್ಪಾಯಕರ ಕುರಿತು ತಿಮ್ಮಯ್ಯ ದರಬಾರಿ ಬಗ್ಗೆ ಅವರು ಮಾಹಿತಿ ನೀಡಿದ್ದಾರೆ.

ಒಮ್ಮೆ ನಿಜಾಂ ಸರ್ಕಾರ ಇವರನ್ನು ಹಿಡಿಯಬೇಕೆಂದು ನಿರ್ಧರಿಸಿದ್ದ ಸುದ್ದಿ ತಿಳಿದ ಒಬ್ಬ ಮುಸ್ಲಿಂನು ರಾಜಾ ವೆಂಕಟಪ್ಪನಾಯಕರಿಗೆ ಬಂದು ಸುದ್ದಿ ತಿಳಿಸಿದರು. ಇವರು ವಿಜಾಪುರಕ್ಕೆ ಹೋಗಬೇಕೆಂದಾಗ ಹೋದರು. ಇವರ ತಮ್ಮನಾದ ರಾಜಾ ಪಿಡ್ಡನಾಯಕರೇ ಬಂಡಿಯಲ್ಲಿ ಘೋಷಾಹಾಕಿ ಗಡಿ ದಾಟಿಸಿ ಬಂದರು. ರಸ್ತೆಯಲ್ಲಿ ಇವರನ್ನು ವಿಚಾರಿಸಿದವರಿಗೆ ಬೇಟೆಯಾಡಲು ಹೊರಟಿದ್ದವೆಂದು ತಿಳಿಸಿದರು. ರಾಜಾ ವೆಂಕಟಪ್ಪನಾಯಕರನ್ನು ಹಿಡಿದವರಿಗೆ ನಿಜಾಂ ಸರ್ಕಾರ ಇನಾಮು ಕೊಡುವುದಾಗಿ ಘೋಷಿಸಿದರು. ಆದರೆ ಅದು ಪ್ರಯೋಜನವಾಗಲಿಲ್ಲ.

ತಾಳಿಕೋಟೆ ಶಿಬಿರವು ಮುಖ್ಯ ಶಿಬಿರವಾಗಿತ್ತು. ಈ ಶಿಬಿರದ ಕೈಕೆಳಗೆ ಬಂಟನೂರು ಮತ್ತು ನಾಗರಬೆಟ್ಟ ಶಿಬಿರಗಳು ಇದ್ದವು. ರಾಜಾ ವೆಂಕಟಪ್ಪನಾಯಕರು ತಾಳಿಕೋಟೆ ಶಿಬಿರದ ನಾಯಕರಾಗಿದ್ದರು. ಈ ಶಿಬಿರದಲ್ಲಿ ರಜಾಕಾರರನ್ನು ಎದುರಿಸುವ ಜನರು, ಸುದ್ದಿ ಸಮಾಚಾರಗಳನ್ನು ತರುವ ಮತ್ತು ತಲುಪಿಸುವ ಜನ ಮತ್ತು ಉಳಿದ ಕೆಲಸ ಮಾಡುವ ಜನ ಈ ಪ್ರಕಾರ ಶಿಬಿರದಲ್ಲಿ ೩ ಪ್ರಕಾರದ ಜನರನ್ನು ಕಾಣುತ್ತೇವೆ. ಮುಂಬೈ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ಅವುಗಳಿಂದ ತೆರಿಗೆ ಪಡೆದು ಶಿಬಿರದ ಖರ್ಚಿಗಾಗಿ ಈ ಹಣವನ್ನು ಬಳಸುತ್ತಿದ್ದರು. ಇದರ ಲೆಕ್ಕಪತ್ರವನ್ನು ಸಗರಬಸ್ಸಣ್ಣ ಅವರು ಬರೆಯುತ್ತಿದ್ದರು. ಶಿಬಿರದ ನಾಯಕರು ಮತ್ತು ಹೋರಾಟಗಾರರು ಹಳ್ಳಿ ಹಳ್ಳಿ ತಿರುಗಾಡಿ ಜನರಿಗೆ ಧೈರ್ಯ ಹೇಳುತ್ತಿದ್ದರು. ಇವರು ಹೋರಾಟಗಾರರನ್ನು ಚಿಕ್ಕ ಚಿಕ್ಕ ಗುಂಪುಗಳನ್ನಾಗಿ ಮಾಡುತ್ತಿದ್ದರೆ, ತಾಳಿಕೋಟೆ, ಬಂಟನೂರ, ನಾಗರಬೆಟ್ಟಗಳನ್ನು ಶಿಬಿರಗಳನ್ನಾಗಿ ಮಾಡಿಕೊಂಡು ಅಲ್ಲಿಯ ಜನರ ಪ್ರೀತಿ ವಿಶ್ವಾಸ ಪಡೆದರು. ಇವರು ಕುಳಿತಲ್ಲಿಯೇ ಯೋಜನೆ ಹಾಕಿಕೊಡುತ್ತಿದ್ದರು. ಎಲ್ಲವೂ ಇವರು ಹಾಕಿಕೊಟ್ಟ ಯೋಜನೆಗಳಂತೆ ನಡೆಯಬೇಕು. ಉಳಿದವರು ಅದರಂತೆಯೇ ಚಾಚೂತಪ್ಪದೇ

ನಡೆದುಕೊಳ್ಳುತ್ತಿದ್ದರು. ಕಾರಣ ಅವರಿಗೆ ಯಾವ ತೊಂದರೆಗಳಾಗಲಿಲ್ಲ. ರಜಕಾರರು ಇವರು ಬರುವ ಸುದ್ದಿ ತಿಳಿದರೆ ಸಾಕು ಜಾಗ ಖಾಲಿ ಮಾಡುತ್ತಿದ್ದರು.

ಕೊನೆಗೂ ೧೯೪೮ ಸೆಪ್ಟೆಂಬರ್ ೧೭ಕ್ಕೆ ನಿಜಾಂ ಅವರು ಭಾರತ ಸರ್ಕಾರಕ್ಕೆ ಶರಣಾದರು. ಈ ಪ್ರಾಂತ್ಯವು ಕೂಡ ನಿಜಾಂ ಅವರಿಂದ ಮುಕ್ತಿ ಪಡೆಯಿತು. ತಾಳಿಕೋಟೆಯಿಂದ ಶಿಬಿರದ ಕಾರ್ಯಕರ್ತರೆಲ್ಲರು ಸುರಪುರ ಪ್ರವೇಶ ಮಾಡಲು ಪಾದಯಾತ್ರೆ ಕೈಗೊಂಡರು. ದಾರಿಯಲ್ಲಿ ಗ್ರಾಮಗಳ ಜನರು ಇವರೊಡನೆ ಸೇರಿಕೊಂಡರು. ಆ ಜನಜಂಗುಳಿಯನ್ನು ನೋಡಿ ಹಳ್ಳಿಗಳ ಜನರು ಆವಾಕ್ಕಾದರು. ಶಿಬಿರದ ಹೋರಾಟಗಾರರು ದೇವಾಪುರದವರೆಗೆ ಬಂದರು. ದೇವಾಪುರ ಗ್ರಾಮದ ಕುಲಕರ್ಣಿಯವರು ಶಿಬಿರದ ನಾಯಕ ಹಾಗೂ ಬಳಗದವರಿಗೆ ವಿನಂತಿಯಿಂದ ಕೇಳಿ ಊಟ ಮಾಡಿಸಿ, ಮುಂದೆ ಬಿಡಲಿಲ್ಲ. ಇವರ ಬಲಗೈ ಬಂಟ ತಿಮ್ಮಯ್ಯನು ಸುರಪುರ ಪ್ರವೇಶಿಸಿ ಮಾಹಿತಿ ಪಡೆದುಕೊಂಡು ಪುನಃ ದೇವಪುರಕ್ಕೆ ಬಂದು ಶಿಬಿರದ ನಾಯಕರಿಗೆ ಮತ್ತು ಹೋರಾಟಗಾರರಿಗೆ ಸಮಾಚಾರ ತಲುಪಿಸಿದರು. ಆಗ ಎಲ್ಲರೂ ನಿರ್ಭಯವಾಗಿ ಸುರಪುರ ಪ್ರವೇಶಿಸಿದರು. ಅಷ್ಟೊತ್ತಿಗೆ ಸುರಪುರದ ಮುಸ್ಲಿಂ ನಾಯಕ ಅಬ್ದುಲ್ ಖಾದಿರನೆಂಬುವರು ಅಲ್ಲಿಂದ ಜಾಗ ಬಿಟ್ಟರು. ಪರಿಣಾಮವಾಗಿ ಹೋರಾಟದ ಜಯದಿಂದ ಉನ್ಮತರಾದ ಜನರು ಊರ ನಡುವಿರುವ ಮಸೀದಿಯನ್ನು ಬಾಂಬ್ ಹಾಕಿ ಸ್ಫೋಟಿಸಿದರು. ಇವರ ಕುಲದೇವರಾದ ವೇಣುಗೋಪಾಲ ಜಾತ್ರೆಗೆ ಹೊರಡುವ ವಾಲಗವು ಮಸೀದಿಯ ಮುಂದೆ ಸ್ತಬ್ಧವಾಗಿರಬೇಕಾಗುತ್ತಿತ್ತು. ವಾದ್ಯ ಬಾರಿಸುವಂತಿರಲಿಲ್ಲ. ಇದು ಇವರಿಗೆ ಬಹಳ ಸಮಸ್ಯೆಯಾಗಿತ್ತು. ಪರಿಣಾಮವಾಗಿ, ಇವರು ಬಂದಿದ್ದರಿಂದ ಮಸೀದಿ ನಿರ್ನಾಮ ಮಾಡಿದರು. ನಂತರ ಜನರು ಇವರನ್ನು ಆದರದಿಂದ ಅತ್ಯಂತ ಸಂಭ್ರಮದಿಂದ ಬರಮಾಡಿಕೊಂಡರು.

ಹೈದ್ರಾಬಾದ್ ರಾಜ್ಯ 'ಸ್ವತಂತ್ರಗೊಂಡ' ಮೇಲೆ ಚುನಾವಣೆಗಳು ನಡೆದವು. ಇವರದು ಸ್ವತಂತ್ರ ಪಕ್ಷ ಕಾಂಗ್ರೆಸ್ ಆಗಿತ್ತು. ಸಿ.ರಾಜಗೋಪಾಲರ ಪಕ್ಷದಿಂದ ಚುನಾವಣೆಗೆ ನಿಂತು ಶಹಾಪುರ ಕ್ಷೇತ್ರದಿಂದ ಶಾಸಕರಾಗಿ, ರಾಯಚೂರ ವಿಭಾಗದಿಂದ ಲೋಕಸಭಾ ಸದಸ್ಯರಾಗಿ ಆರಿಸಿ ಬಂದರು. ಇವರಿಗೆ ಬೇಟೆ ಮತ್ತು ಸಂಗೀತದಲ್ಲಿ ಆಸಕ್ತಿಯಿತ್ತು, ಅರಮನೆಯಲ್ಲಿ ಪ್ರತಿ ಶನಿವಾರ ಬೇರೆ ಬೇರೆ ರಾಜ್ಯಗಳಿಂದ ಸಂಗೀತಗಾರರು ಬಂದು ಸಂಗೀತ ಸಭೆಯನ್ನು ನಡೆಸಿಕೊಡುತ್ತಿದ್ದರು. ಇವರು ಉತ್ತಮ ತಬಲಾಪಟುವಾಗಿದ್ದರು. ಒಮ್ಮೆ ಉತ್ತರ ಭಾರತದ ನೃತ್ಯಗಾರ್ತಿ ನೃತ್ಯ ಮಾಡುತ್ತಿದ್ದಾಗ ಇವರು ತಬಲಾ ಬಾರಿಸ ಹತ್ತಿದರು. ಕೊನೆಗೆ ನೃತ್ಯಗಾರ್ತಿಯು ಕುಣಿದು ಕುಣಿದು ಕಾಲು ಸೋತರೂ ಬಾರಿಸಿ ಕೈ ಸೋಲಲಿಲ್ಲ ಎನ್ನುವ ವಿಚಾರವು ಜನಜನಿತವಾಗಿದೆ. ೧೯೩೩ರಲ್ಲಿ ಇವರಿಗೆ Middle Templeನಿಂದ ಪ್ರಮಾಣಪತ್ರ ದೊರಕಿತು. ಕೊನೆಯವರೆಗೂ ಇಂಗ್ಲೀಷ್ ಪತ್ರಿಕೆ, ಪುಸ್ತಕಗಳನ್ನು ಓದುತ್ತಿದ್ದರು, ಬರ್ಟೆಂಡರಸೆಲ್ ಇವರ ಅಚ್ಚುಮೆಚ್ಚಿನ ಸಾಹಿತಿ. ಹಿಂದು-ಮುಸ್ಲಿಂರನ್ನು ಸಮಾನವಾಗಿ ಕಾಣುತ್ತಿದ್ದರು.

ಹೈದ್ರಾಬಾದ್ ವಿಮೋಚನೆಗೊಂಡ ಮೇಲೆ ಮುಸ್ಲಿಂ ಓಣಿಗಳಲ್ಲಿ ದಂಗೆಗಳಾಗಬಾರದೆಂದು ತನ್ನ ಜನರನ್ನು ರಕ್ಷಣೆಗಾಗಿ ನೇಮಿಸುತ್ತಿದ್ದರು ಎಂದು ಅವರ ಮಗ ಸೀತಾರಾಮನಾಯಕರ ಸಂದರ್ಶನದಲ್ಲಿ ಮಾಹಿತಿ ನೀಡಿದ್ದಾರೆ. ಆದರೆ, ನಾಯಕರ ಶಿಷ್ಯರು ವಿಮೋಚನಾ ಹೋರಾಟದ ಜಯದ ನಂತರ ಮಸೀದಿಯನ್ನು ಧ್ವಂಸಗೊಳಿಸಿದ ಘಟನೆ ಈ ಮೇಲಿನ ಹೇಳಿಕೆಗೆ ಅಪವಾದವಾಗಿದೆ. ಸುರಪುರದ ಮಧ್ಯಭಾಗದಲ್ಲಿರುವ ಮಸೀದಿಯನ್ನು ಕೆಡವಿ ಸರ್ದಾರ ವಲ್ಲಭಬಾಯಿ ಪಟೇಲರ ಮೂರ್ತಿಯನ್ನು ಸ್ಥಾಪಿಸಿದರು. ಆ ಮೂರ್ತಿಗೆ ಹಾರ ಹಾಕಬೇಕೆಂಬುದು ಅವರ ಕೊನೆಯ ಆಸೆಯಾಗಿತ್ತು. ಆದರೆ ಆ ಆಸೆ ಕೊನೆಗೂ ಕೈಗೊಡಲಿಲ್ಲ ಎನ್ನುವುದು  ವಿಪರ್ಯಾಸವಾಗಿದೆ.

ಒಮ್ಮೆ ನಿಜಾಂ ಅವರ ಮಂತ್ರಿಯು ಮತ್ತು ಅವರ ಸಂಗಡಿಗರು ಸುರಪುರಕ್ಕೆ ಬಂದಾಗ ಕೆಂಪು ರತ್ನಗಂಬಳಿ ಹಾಸಿ ಅವರಿಗೆ ಭವ್ಯ ಸ್ವಾಗತ ನೀಡಿದರು. ಅಲ್ಲದೆ ಅವರ ಆದರಾತಿಥ್ಯದಲ್ಲಿ ಯಾವ ಕುಂದುಕೊರತೆಗಳಾಗದಂತೆ ನೋಡಿಕೊಂಡರು. ವಲ್ಲಭಬಾಯಿ ಪಟೇಲರ ಮೇಲೆ ಬಹಳ ನಿಷ್ಠೆಯನ್ನು ಹೊಂದಿದ್ದ ಇವರು  ಲಂಡನ್ನಿನಲ್ಲಿ ಬಾರ ಆ್ಯಟ ಲಾ ಓದುವಾಗ ನೆಹರು ಮತ್ತು ಪಟೇಲರು ಇವರಿಗಿಂತಲೂ ಹಿರಿಯರು. ಅದರ ನಾಯಕರಿಗೆ ನೆಹರೂರವರಿಗಿಂತ ಪಟೇಲರೇ ಅಚ್ಚುಮೆಚ್ಚು. ಅವರೊಡನೆ ಸಂಪರ್ಕ ಹಾಗೇ ಮುಂದುವರಿಯಿತು. ಇವರು ಪ್ರಚಾರ ಪ್ರಿಯರಲ್ಲ, ಯಾರೇ ಏನಾದರೂ ಇವರ ಬಗ್ಗೆ ಕೇಳಲು ಬಂದರೆ, ನಿಮ್ಮ ಬಗ್ಗೆ ಏನಾದರೂ ಬರೆಯುತ್ತೇವೆಂದು ಹೇಳಿದರೆ ಅವರಿಗೆ ಏನು ಹೇಳುತ್ತಿರಲಿಲ್ಲ. ನಾನು ನಿಮ್ಮಂತೆಯೇ ಸಾಮಾನ್ಯ ಮನುಷ್ಯ. ನಾನು ಮಾಡಬೇಕಾದ ಸೇವೆಯನ್ನು ದೇಶಕ್ಕಾಗಿ ಮಾಡಿದ್ದೇನೆ. ಇದರಲ್ಲಿ ನನ್ನದೇನಿದೆ ಎಂದು ಹೇಳುತ್ತಿದ್ದರು. ಭಾಸ್ಕರರಾವ್ ಮೂಡಬೂಳರು 'ಮರೆತು ಹೋದ ಸುರಪುರದ ಇತಿಹಾಸ' ಎಂಬ ಪುಸ್ತಕವನ್ನು ರಾಜಾ ವೆಂಕಟಪ್ಪನಾಯಕರಿಂದಲೇ ಅವರ ಮನೆಯಲ್ಲಿ ಬಿಡುಗಡೆ ಮಾಡಿಸಿದರು ಎಂದು ರಾಜಾ ವೆಂಕಟಪ್ಪನಾಯಕರ ಮಗ ಸೀತಾರಾಮ ನಾಯಕರು ಸಂದರ್ಶನವೊಂದರಲ್ಲಿ ಈ ಅಂಶಗಳ ಬಗ್ಗೆ ಮಾಹಿತಿ ನೀಡಿದ್ದಾರೆ (ಸಂದರ್ಶನ : ಸೀತಾರಾಮನಾಯಕ ೨೮.೦೧.೨೦೦೬). ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸುರಪುರದ ಅರಸ ವೆಂಕಟಪ್ಪನಾಯಕನ ನಾಯಕತ್ವವಿತ್ತು. ಅದರಂತೆ ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ರಜಾಕಾರರ ವಿರುದ್ಧದ ಹೋರಾಟಕ್ಕೂ ವೆಂಕಟಪ್ಪನಾಯಕನ ವಂಶಸ್ಥರಾದ ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕರ ನೇತೃತ್ವವಿತ್ತು. ಸ್ವಾತಂತ್ರ್ಯಕ್ಕಾಗಿ ಈ ಪ್ರದೇಶದ ಜನರು ಎರಡು ಬಾರಿ ಹೋರಾಟ ಮಾಡಿದ್ದಾರೆ. ಈ ಎರಡು ಹೋರಾಟಕ್ಕೂ ಸುರಪುರ ಅರಸ ವಂಶಜರ ನಾಯಕತ್ವವಿದ್ದದ್ದು ಗಮನಾರ್ಹವಾಗಿದೆ (ಸಂದರ್ಶನ : ಸೀತಾರಾಮ ನಾಯಕ ೨೮.೦೧.೨೦೦೬; ತಿಮ್ಮಯ್ಯ ದರಬಾರಿ ೦೫.೦೨.೨೦೦೬; ಮಹಾದೇವಪ್ಪ ಹೂಗಾರ ೦೬.೦೨.೨೦೦೬).

# ೫.೮. ಅಪ್ಪಾರಾವ್ ವಕೀಲ

ನಿಜಾಂ ಅವರ ಆಳ್ವಿಕೆಯಲ್ಲಿ ಸುರಪುರ ಪ್ರಾಂತ್ಯದಲ್ಲಿ ನಡೆಯುತ್ತಿದ್ದ ಅನ್ಯಾಯ, ದಬ್ಬಾಳಿಕೆಯನ್ನು ತಡೆಯುವುದು, ಸುರಪುರ ಪ್ರಾಂತ್ಯವನ್ನು ನಿಜಾಂ ಅವರ ಆಳ್ವಿಕೆಯಿಂದ ಮುಕ್ತಗೊಳಿಸಿ ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸುವ ಉದ್ದೇಶವನ್ನಿಟ್ಟುಕೊಂಡವರಲ್ಲಿ ಅಪ್ಪಾರಾವ್ ವಕೀಲರು ಒಬ್ಬರು. ಅಪ್ಪಾರಾವ್ ವಕೀಲರು ಹೈದರಾಬಾದನಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಇವರ ಆರಂಭಿಕ ಜೀವನದ ಬಗ್ಗೆ ವಿವರವಾದ ಮಾಹಿತಿಗಳು ದೊರಕಿಲ್ಲವಾದ್ದರಿಂದ ಅವರ ಜನನ, ಅವರ ವಿದ್ಯಾಭ್ಯಾಸ ಇತ್ಯಾದಿ ಅಂಶಗಳ ಬಗ್ಗೆ ವಿವರಣೆ ಕಡಿಮೆಯಿದೆ.



ಭಾರತ ಸ್ವಾತಂತ್ರ್ಯ ಹೊಂದಿ ನಂತರ ಹೈದರಾಬಾದಿನ ನಿಜಾಂ ಅವರ ಆಳ್ವಿಕೆಗೊಳಪಟ್ಟ ಈ ಪ್ರದೇಶದ ಹೋರಾಟಗಾರರು ನಿಜಾಂ ಅವರ ದುರಾಡಳಿತ ಮತ್ತು ರಜಾಕಾರರ ದಬ್ಬಾಳಿಕೆಯ ವಿರುದ್ಧ ಈ ಪ್ರದೇಶದ ಜನರನ್ನು ರಕ್ಷಿಸಲು ತಾಳಿಕೋಟೆಯಲ್ಲಿ ಶಿಬಿರವನ್ನು ಸ್ಥಾಪಿಸಿದರು. ಅಪ್ಪಾರಾವ್ ವಕೀಲರು ರಾಜಾ ವೆಂಕಟಪ್ಪ ನಾಯಕರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ತಾಳಿಕೋಟೆಯು ಬ್ರಿಟಿಷ್‌ರ ವಶದಲ್ಲಿದ್ದದ್ದರಿಂದ ಈ ಹೋರಾಟಗಾರರು ತಾಳಿಕೋಟೆಯಲ್ಲಿ ಶಿಬಿರವನ್ನು ಸ್ಥಾಪಿಸಿದರು. ಆಗಲೇ ಆ ಪ್ರದೇಶವು ಸ್ವತಂತ್ರ ಭಾರತದ ಅಂಗವಾಗಿತ್ತು. ಸುರಪುರ ಸಂಸ್ಥಾನದ ಸೀಮೆಗೆ ಹತ್ತಿರವಾಗಿತ್ತು.

ಅಪ್ಪಾರಾವ ವಕೀಲರು ಈ ಶಿಬಿರವನ್ನು ಸ್ಥಾಪಿಸುವ ಮೊದಲೇ ಭಾರತೀಯ ಸೈನ್ಯದ ಅಧಿಕಾರಿಗಳಿಂದ ಸಶಸ್ತ್ರ ಚಟುವಟಿಕೆ ನಡೆಸಲು ತರಬೇತಿ ಪಡೆದು ಬಂದಿದ್ದರು. ದಿಲ್ಲಿಯಲ್ಲಿ ಬಂದೂಕು ಚಲಾಯಿಸುವ ತರಬೇತಿ ಪಡೆದಿದ್ದರು. ತಾಳಿಕೋಟೆ ಶಿಬಿರಕ್ಕೆ ರಮಾನಂದ ತೀರ್ಥರ ಮಾರ್ಗದರ್ಶನವಿತ್ತು. ಈ ಶಿಬಿರವು ಶಸ್ತ್ರ ಸನ್ನದ್ಧವಾದ ೧೧ ಜನರ ೭ ತಂಡಗಳನ್ನು ಹೊಂದಿತ್ತು. ಅಪ್ಪಾರಾವ್ ವಕೀಲರು ತಂಡದ ಸೈನಿಕರಿಗೆ ಸಶಸ್ತ್ರ ಹೋರಾಟದ ತರಬೇತಿಯನ್ನು ನೀಡಿದ್ದರು. ವೆಂಕನಗೌಡ, ತಿಮ್ಮಯ್ಯದರಬಾರಿ, ಮಹಾದೇವಪ್ಪ ಹೂಗಾರ ಮತ್ತು ವಿರುಪಾಕ್ಷಪ್ಪಗೌಡ ಇವರ ಕಾರ್ಯಚಟುವಟಿಕೆಗಳು ಅತ್ಯಂತ ಪರಿಣಾಮಕಾರಿಯಾಗಿದ್ದವು. ರಜಾಕಾರರ ಮೇಲೆ ದಾಳಿ ಮಾಡಿ ಅವರಿಂದ ವಶಪಡಿಸಿಕೊಂಡ ಸಾಮಾನುಗಳನ್ನು ಶಿಬಿರಾಧಿಪತಿಗಳ ವಿನಂತಿ ಮೇರೆಗೆ ಜನರಿಗೆ ಕೊಡುತ್ತಿದ್ದರು.

'ಪೋಲೀಸ ಕಾರ್ಯಾಚರಣೆ'ಯ ಸಮಯದಲ್ಲಿ ಸುರಪುರದ ಸ್ಥಿತಿ-ಗತಿಯನ್ನು ತಿಳಿದುಕೊಂಡು ಬರಲು ತಾಳಿಕೋಟೆ ಶಿಬಿರದ ಹೋರಾಟಗಾರರು ಅಪ್ಪಾರಾವ್ ವಕೀಲರನ್ನು ಮತ್ತು ತಿಮ್ಮಯ್ಯ ದರಬಾರಿಯವರನ್ನು ಸುರಪುರಕ್ಕೆ ಕಳುಹಿಸಿಕೊಟ್ಟರು. ೧೯೪೮ ಸೆಪ್ಟೆಂಬರ್ ೨೪ರಂದು ರಾಜಾ

ವೆಂಕಟಪ್ಪನಾಯಕರ ನೇತೃತ್ವದಲ್ಲಿ ಹೋರಾಟಗಾರರೆಲ್ಲರು ಸುರಪುರವನ್ನು ಪ್ರವೇಶಿಸಿದರು. ರಜಾಕಾರರು ಈ ಪ್ರದೇಶಗಳಿಂದ ಪಲಾಯನ ಮಾಡಿದ್ದರು. ಆ ಸಂದರ್ಭದಲ್ಲಿ ಮುಸ್ಲಿಂರ ಪ್ರಾಣ ಹಾಗೂ ಆಸ್ತಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಹಾನಿಯಾದದ್ದು ಸುರಪುರದಲ್ಲಿ ಮಾತ್ರ.

ಅಪ್ಪಾರಾವ ವಕೀಲರು ಗಡಿ ಶಿಬಿರಗಳ ಮೂಲಕ ಕೈಗೊಂಡ ಹೋರಾಟ ನಿರ್ಣಾಯಕವಾಗಿದೆ. ಈ ಹೋರಾಟಕ್ಕಾಗಿ ಅವರು ಅನುಭವಿಸಿದ ನೋವು ಅಪಾರವಾದದ್ದು ಹೈದರಾಬಾದ್ ಸಂಸ್ಥಾನ ಭಾರತದೊಂದಿಗೆ ವಿಲೀನವಾದ ನಂತರ ಹಿಂದೂ-ಮುಸ್ಲಿಂರ ನಡುವೆ ಘರ್ಷಣೆಗಳು ನಡೆಯದಂತೆ ಮುಸ್ಲಿಂರ ಓಣಿಯಲ್ಲಿ ಇವರ ನಿರ್ದೇಶನದ ಮೇರೆಗೆ ಹೋರಾಟಗಾರರು ಕಾವಲು ಕಾಯುತ್ತಿದ್ದರು.

ಅಪ್ಪಾರಾವ್ ವಕೀಲರ ಸ್ಮೃತಿಯಲ್ಲಿರುವ ಪ್ರಮುಖ ಘಟನೆಯೆಂದರೆ ಹೈದರಾಬಾದ್ ನಿಜಾಂ ಅವರು ಭಾರತೀಯ ಸೈನ್ಯಕ್ಕೆ ಶರಣಾಗಿ ಹೈದರಾಬಾದ್ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸಿದರು. ನಂತರ ಅಪ್ಪಾರಾವ್ ವಕೀಲರು ಭೂಗತ ಚಟುವಟಿಕೆಗಳನ್ನು ತೊರೆದು ಹೈದರಾಬಾದಿಗೆ ತೆರಳಿ ಅಲ್ಲಿ ತಮ್ಮ ವಕೀಲ ವೃತ್ತಿಯನ್ನು ಆರಂಭಿಸಿದರು. ಆಗ ಭಾರತ ಸರ್ಕಾರವು ರಜಾಕಾರರ ಮುಖಂಡನಾಗಿದ್ದ ಕಾಸೀಂ ರಜ್ವಿಯ ಮೇಲೆ ಕ್ರಮಕೈಗೊಳ್ಳಲು ಅಪ್ಪಾರಾವರನ್ನು ವಿಶೇಷ ಅಧಿಕಾರಿಯನ್ನಾಗಿ ನೇಮಿಸಿದರು. ಅಪ್ಪಾರಾವರು "ರಜಾಕಾರರ ಈ ಪರಿಯ ಹಾವಳಿಗೆ ಮೂಲ ಕಾರಣ ನಿಜಾಂ ಅವರ ಸ್ವಾರ್ಥವಾಗಿದೆ. ಇದರಲ್ಲಿ ಕಾಸೀಂ ರಜ್ವಿಯು ಅಸಹಾಯಕ ವ್ಯಕ್ತಿಯಾಗಿದ್ದಾನೆ. ಒಂದು ವೇಳೆ ನೀವು ಕ್ರಮ ಜರುಗಿಸುವುದಿದ್ದರೆ, ಹೈದರಾಬಾದ್ ನಿಜಾಂ ಅವರ ಮೇಲೆ ಕ್ರಮ ಜರುಗಿಸಿ ಕಾಸಿಂ ರಜ್ವಿಯ ಮೇಲಲ್ಲ" ಎಂದು ಅಪ್ಪಾರಾವ್ ಅವರು ಸರ್ಕಾರಕ್ಕೆ ವರದಿ ಕಳುಹಿಸಿದರು. ಈ ಮಾಹಿತಿಯನ್ನು ಪ್ರಜಾವಾಣಿ ಪತ್ರಿಕೆಯಲ್ಲಿ ಬಂದಿರುವ ಲೇಖನದಿಂದ ಕಲೆ ಹಾಕಲಾಗಿದೆ (ಪ್ರಜಾವಾಣಿ, ೧೪.೦೩.೧೯೯೮).

ಹೀಗೆ ಅಪ್ಪಾರಾವ ವಕೀಲರು ಸುರಪುರ ವಿಮೋಚನಾ ಹೋರಾಟದಲ್ಲಿ ಪ್ರಮುಖವಾದ ಪಾತ್ರ ನಿರ್ವಹಿಸುವುದರ ಮೂಲಕ ಜನರ ನೆನಪಿನಂಗಳದಲ್ಲಿ ಉಳಿದಿದ್ದಾರೆ (ಸಂದರ್ಶನ : ತಿಮ್ಮಯ್ಯ ದರಬಾರಿ, ೦೫.೦೨.೨೦೦೬; ವೆಂಕನಗೌಡ ಪಾಟೀಲ್, ೦೪.೦೨.೨೦೦೬; ಮಹಾದೇವಪ್ಪ ಹೂಗಾರ, ೦೬.೦೨.೨೦೦೬; ಪ್ರಜಾವಾಣಿ, ೧೪.೦೩.೧೯೯೮:೮).

## ೫೯. ಡಾ.ಜಿ.ಸುಬ್ಬಯ್ಯ

ಸುಬ್ಬಯ್ಯನವರು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯ ಗುಡೂರ ಗ್ರಾಮದಲ್ಲಿ ೧೭-೧-೧೯೨೩ ರಂದು ಜನಿಸಿದರು. ಇವರ ತಂದೆ ತಿಮ್ಮಯ್ಯ ನಾಯಿಡು ಆಯುರ್ವೇದ ವೈದ್ಯಪದ್ಧತಿಯಲ್ಲಿ ಪ್ರಖ್ಯಾತರು ಮತ್ತು ಸ್ವಾತಂತ್ರ್ಯ ಹೋರಾಟಗಾರರು ಆಗಿದ್ದರು. ಇವರು ಕರ್ನೂಲ್‌ನಲ್ಲಿಯೇ ವಿದ್ಯಾಭ್ಯಾಸ ಮುಗಿಸಿದರು. ಇಂಟರ್ ಮಿಡಿಯೆಟ್ ಓದುತ್ತಿದ್ದಾಗ ಗೆಳೆಯರಾದ ಎ.ಹನುಮಂತಪ್ಪ, ಶಂಕರನಾರಾಯಣ, ನಾಗಪ್ಪ, ನಾರಾಯಣಸ್ವಾಮಿ ಮತ್ತು ಪಿ.ವೆಂಕಟಸುಬ್ಬಯ್ಯ (ಮಾಜಿ ರಾಜ್ಯಪಾಲರು, ಕರ್ನಾಟಕ)ರೊಡಗೂಡಿ ಬ್ರಿಟಿಷ್ ಸರ್ಕಾರದ ಕಛೇರಿಯ ಟೆಲಿಫೋನ್ ತಂತಿಗಳನ್ನು ಕತ್ತರಿಸುವುದು, ಬ್ರಿಟಿಷ ಅಧಿಕಾರಿಗಳು ವಾಹನದಲ್ಲಿ ಹೋಗುವ ಮಾರ್ಗದಲ್ಲಿ ಕಬ್ಬಿಣದ ಮೊಳೆಗಳನ್ನು ಚುಚ್ಚುವ ಕೃತ್ಯ ಮಾಡುತ್ತಿದ್ದರು. ಸ್ವಾತಂತ್ರ್ಯ ಹೋರಾಟಕ್ಕೆ ತಂದೆಯವರ ಬೆಂಬಲವಿದ್ದಿತು.

ಸುಬ್ಬಯ್ಯನವರು ತಂದೆಯವರಿಂದ ಹಾಗೂ ಮುಸ್ಲಿಂ ಗುರುಗಳ ಹತ್ತಿರ ಆಯುರ್ವೇದದ ಹೆಚ್ಚಿನ ವಿದ್ಯೆಯನ್ನು ಸಂಪಾದಿಸಿದರು. ೧೯೪೨ರಲ್ಲಿ 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಶಂಕರನಾರಾಯಣ, ಎ.ಹನುಮಂತಪ್ಪ, ಪಿ.ವೆಂಕಟಸುಬ್ಬಯ್ಯ ಇವರ ಜೊತೆಗೂಡಿ ಭಾಗವಹಿಸಿದರು. ಇದಕ್ಕಾಗಿ ಬ್ರಿಟಿಷ್ ಸರ್ಕಾರ ಇವರನ್ನು ಬಂಧಿಸಿ ಬಳ್ಳಾರಿ ಜೈಲಿನಲ್ಲಿ ೪ ತಿಂಗಳವರೆಗೆ ಬಂಧನದಲ್ಲಿಟ್ಟಿದ್ದರು. ನಂತರ ಬಿಡುಗಡೆ ಹೊಂದಿದರು. ಇವರ ಸಮಸ್ತ ಆಸ್ತಿಯನ್ನು ಬ್ರಿಟಿಷ್ ಸರ್ಕಾರ ಮುಟ್ಟುಗೋಲು ಹಾಕಿತು. ಬ್ರಿಟಿಷರ ಕೆಂಗಣ್ಣಿಗೆ ಗುರಿಯಾದ ಇವರು ೧೯೪೭ರಲ್ಲಿ ಸ್ವಾತಂತ್ರ ಚಳುವಳಿಗೆ ಕುಮ್ಮಕ್ಕು ನೀಡುತ್ತಿದ್ದ ಕಾರಣ ಕಂಡಲ್ಲಿ ಇವರಿಗೆ ಗುಂಡು ಹಾಕಲು ಮಹ್ಮದ ನವಾಜಖಾನನೆಂಬ ಅಧಿಕಾರಿಯನ್ನು ಬ್ರಿಟಿಷ್ ಸರ್ಕಾರ ನೇಮಿಸಿತು. ಆಗ ಇವರು ಅಲ್ಲಿಂದ ತಪ್ಪಿಸಿಕೊಂಡು ರಾಯಚೂರಿಗೆ ಬಂದು ತಮ್ಮ ಸೋದರ ಸಂಬಂಧಿಯೊಬ್ಬರ ಮನೆಯಲ್ಲಿದ್ದರು.

೧೯೪೭ ಅಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯವಾದಾಗ ಸುಬ್ಬಯ್ಯನವರು ರಾಯಚೂರಿನಲ್ಲಿದ್ದರು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕರೂ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಕೆಲವು ಪ್ರದೇಶಗಳು ನಿಜಾಂ ಅವರ ಆಳ್ವಿಕೆಯಿಂದ ಮುಕ್ತವಾಗಿರಲಿಲ್ಲ. ಆ ಸಮಯದಲ್ಲಿ ಸಂಬಂಧಿಯೊಬ್ಬರ ಪರಿಚಯದಿಂದ ಮುದ್ದೇಬಿಹಾಳಕ್ಕೆ ಬಂದರು. ನಿಜಾಂ ಅವರ ವಿರುದ್ಧ ಹೋರಾಟ ನಡೆಸುವುದಕ್ಕಾಗಿ ತಾಳಿಕೋಟೆಯಲ್ಲಿ ಶಿಬಿರವನ್ನು ಸ್ಥಾಪಿಸಲಾಗಿತ್ತು.

ತಾಳಿಕೋಟೆ ಶಿಬಿರಕ್ಕೆ ಒಬ್ಬ ವೈದ್ಯರ ಅವಶ್ಯಕತೆಯಿತ್ತು. ಆಗ ಸುಬ್ಬಯ್ಯನವರು ತಾಳಿಕೋಟೆ ಶಿಬಿರದ ವೈದ್ಯರಾಗಿ ಶಿಬಿರದಲ್ಲಿ ಸೇರಿಕೊಂಡು ನಿಜಾಂ ಅವರ ವಿರುದ್ಧ ಹೋರಾಟ ಪ್ರಾರಂಭಿಸಿದರು. ರಮಾನಂದ ತೀರ್ಥರ ತತ್ವಗಳಿಂದ ಪ್ರೇರಣೆ ಹೊಂದಿದ್ದ ಇವರು 'ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿ'ನ

ಸಕ್ರಿಯ ಸದಸ್ಯರು ಆಗಿದ್ದರು. ಬೆಂಗಳೂರಿನಿಂದ ಶಸ್ತ್ರಾಸ್ತ್ರಗಳನ್ನು ತಂದು ಪ್ರತಿ ಶಿಬಿರಕ್ಕೆ ತಲುಪಿಸುವ ಜವಾಬ್ದಾರಿ ಹಾಗೂ ಲೆಕ್ಕಪತ್ರದ ಜವಾಬ್ದಾರಿ ಇವರ ಮೇಲಿತ್ತು.

ಒಮ್ಮೆ ಬಂಟನೂರನಲ್ಲಿದ್ದಾಗ ರಜಾಕಾರರು ಬಾಂಬ್ ಹಾಕುತ್ತಾರೆಂಬ ಸುದ್ದಿ ಹಬ್ಬಿತು. ಆಗ ಸುಬ್ಬಯ್ಯನವರು ಊರವರನ್ನೆಲ್ಲರನ್ನು ಒಂದೆಡೆ ಸೇರಿಸಿ "ನಾವು ನಿಮ್ಮೊಂದಿಗಿದ್ದೇವೆ, ಊರನ್ನು ಕಾಯುತ್ತೇವೆ ಹೆದರದಿರಿ" ಎಂದು ಧೈರ್ಯ ಹೇಳಿದರು. ಇವರು ಅಪ್ಪಾರಾವ್ ವಕೀಲರ ಜೊತೆ ೫ ತಿಂಗಳು ಇದ್ದರು. ಇವರು ರಾಜಾ ವೆಂಕಟಪ್ಪನಾಯಕರ ನೇತೃತ್ವದಲ್ಲಿ ಬಂಟನೂರ ನಾಗರಬೆಟ್ಟ, ತಾಳಿಕೋಟೆ ಶಿಬಿರಗಳ ನೇತೃತ್ವ ವಹಿಸಿ ಉಗ್ರ ಹೋರಾಟಗಳನ್ನು ಕೈಗೊಂಡಿದ್ದಾರೆ. ೮-೮-೧೯೪೭ ರಿಂದ ೧೭-೯-೧೯೪೮ರವರೆಗೆ ಅನೇಕ ಬಾರಿ ರಜಾಕಾರರಿಗೂ ಇವರಿಗೂ ಘರ್ಷಣೆಗಳಾದವು. ರಜಾಕಾರರನ್ನು ಎದುರಿಸುವಾಗ ಜನರ ರಕ್ಷಣೆಗಾಗಿ ಶಸ್ತ್ರಾಸ್ತ್ರಗಳನ್ನು ಇವರು ಬಳಸುತ್ತಿದ್ದರು. ಬಂದೂಕು, ಗುಂಡುಗಳನ್ನು ಗದಗಿನಿಂದ ತರುತ್ತಿದ್ದರು. ರಜಾಕಾರರು 'ಬನಿಯಾಕೋ ಲೂಟೋ ಬಮ್ಮನಕೋ ಕಾಟೋ ಆಪಸ್ಮೆ ಬಾಂಟೋ ಜಾನ್' ಅಂತ ಅನ್ನುತ್ತಿದ್ದರು. ಸರ್ದಾರ ಪಟೇಲರು ತೆಗೆದುಕೊಂಡ ನಿರ್ಧಾರಗಳಿಂದ ರಜಾಕಾರರು ಭಯಭೀತರಾಗಿದ್ದರು. ಇದು ಹೋರಾಟಗಾರರಿಗೆ ಹೆಚ್ಚಿನ ಹುರುಪು ತಂದಂತಾಯಿತು.

ಹೈದರಾಬಾದ ವಿಮೋಚನೆಯಾದ ನಂತರ ತಾವು ಯಾವ ಪ್ರಕಾರದ ದೇಶವನ್ನು ನೋಡಬೇಕೆಂದು ಕನಸು ಕಂಡಿದ್ದೇವೋ ಆ ಕನಸು ಸಾಕಾರವಾಗಲಿಲ್ಲ ಎಂದು ಸುಬ್ಬಯ್ಯನವರು ಹೇಳಿರುವುದು ಗಮನಾರ್ಹವಾಗಿದೆ. ಸುರಪುರ ತಾಲೂಕಿನ ಹರಿಜನ ಸೇವಾಸಂಘದ ಸಂಸ್ಥಾಪಕ ಅಧ್ಯಕ್ಷರಾಗಿಯು ಇವರು ಕಾರ್ಯನಿರ್ವಹಿಸಿದ್ದಾರೆ. ವಿನೋಬಾಭಾವೆಯವರ ಭೂದಾನ ಚಳುವಳಿಯಲ್ಲಿ ಭಾಗಿಯಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರರ ಸಂತ್ರಸ್ಥ ಕುಟುಂಬಗಳಿಗೆ ಗೌರವಧನದ ನೆರವು ದೊರಕಿಸಿಕೊಡುವಲ್ಲಿ ಮತ್ತು ನಿರುದ್ಯೋಗಿಗಳಿಗೆ ಉದ್ಯೋಗ ಅವಕಾಶ ಕಲ್ಪಿಸಿಕೊಡುವಲ್ಲಿ ಮಹತ್ವದ ಪಾತ್ರವಹಿಸಿದ್ದರು. ಇಂಜನಿಯರ್ ಆಯ್ಕೆ ಸಮಿತಿಯ ಸದಸ್ಯರೂ ಆಗಿದ್ದರು. ಸುರಪುರ ತಾಲೂಕಾ ಕಾಂಗ್ರೆಸ್ ಅಧ್ಯಕ್ಷರಾಗಿ, ಗುಲಬರ್ಗಾ ಜಿಲ್ಲಾ ಕಾಂಗ್ರೆಸ್ಸಿನ ಉಪಾಧ್ಯಕ್ಷರಾಗಿಯು ಮತ್ತು ಆಯುರ್ವೇದಿಕ್ ಬೋರ್ಡಿನ ಸದಸ್ಯರಾಗಿಯು ಕಾರ್ಯನಿರ್ವಹಿಸಿದ್ದಾರೆ (ಕುಷ್ಟಗಿ, ೨೦೦೩: ೧೬೩).

## ೫.೧೦. ವೆಂಕೋಬರಾವ್ ಭೀಮರಾವ್ ಪದಕಿ

ಸುರಪುರ ವಿಮೋಚನೆಗಾಗಿ ಹೋರಾಡಿದವರಲ್ಲಿ ವೆಂಕೋಬರಾವ್ ಪದಕಿಯವರು ಒಬ್ಬರಾಗಿದ್ದಾರೆ. ಇವರು ೧೯೦೯ರಲ್ಲಿ ಸುರಪುರದಲ್ಲಿ ಜನಿಸಿದರು. ಇವರು ಪ್ರಾಥಮಿಕ ಶಿಕ್ಷಣವನ್ನು ಸುರಪುರದಲ್ಲಿಯೇ ಮುಗಿಸಿ, ನೂತನ ವಿದ್ಯಾಲಯದಲ್ಲಿ ಎಚ್.ಎಸ್.ಸಿ. ಮಾಧ್ಯಮಿಕ, ಬಿ.ಎ. ಪರೀಕ್ಷೆ ಪಾಸಾದರು. ಆಗಿನ ನಿಜಾಂ ಸರ್ಕಾರ ಇವರಿಗೆ ತಹಸೀಲ್ದಾರ ಹುದ್ದೆಯನ್ನು ಕೊಡಲು ಮುಂದೆ ಬಂದಿತು. "ಗುಲಾಮಗಿರಿಯಲ್ಲಿ ಬದುಕುವುದು ಬೇಡ, ಸ್ವತಂತ್ರವಾಗಿಯೇ ಜೀವನ ಸಾಗಿಸಬೇಕು" ಎನ್ನುವ ಉದ್ದೇಶದಿಂದ ಈ ಹುದ್ದೆಯನ್ನು ತಿರಸ್ಕರಿಸಿದರು. ಚಿಕ್ಕಂದಿನಿಂದಲೂ ಧಾರ್ಮಿಕ ಗ್ರಂಥಗಳ ಬಗ್ಗೆ ಅವರಿಗೆ ಒಲವು ಇತ್ತು.

ವೆಂಕೋಬರಾವ್ ಅವರು ಶಿಕ್ಷಣವನ್ನು ಮುಗಿಸಿದ ನಂತರ ಹೈದರಾಬಾದ್ ಹಾಗೂ ಗುಲಬರ್ಗಾದ ರಾಷ್ಟ್ರೀಯ ಖಾದಿ ಬೋರ್ಡಿನ ಮ್ಯಾನೇಜರರಾಗಿ ಸೇವೆ ಸಲ್ಲಿಸಿದರು. ಇವರು ಗಾಂಧೀಜಿಯವರ ಅನುಯಾಯಿಗಳಾಗಿದ್ದರಿಂದ ಯಾವಾಗಲೂ ಖಾದಿಯನ್ನು ಧರಿಸುತ್ತಿದ್ದರು. ಮನೆಯಲ್ಲಿ ಎಲ್ಲರೂ ಕಡ್ಡಾಯವಾಗಿ ಖಾದಿಯನ್ನು ಧರಿಸಬೇಕಾಗಿತ್ತು. ರಮಾನಂದ ತೀರ್ಥರ ವಿಚಾರಗಳಿಂದ ಪ್ರೇರಿತರಾದ ಇವರು ಆರ್ಯ ಸಮಾಜದಲ್ಲಿ ಸೇರಿಕೊಂಡರು. ವೆಂಕೋಬರಾವ್ ಅವರು ರಮಾನಂದ ತೀರ್ಥರ ಶಿಷ್ಯರಾಗಿದ್ದರು. ರಮಾನಂದ ತೀರ್ಥರ ಉಪನ್ಯಾಸ ಹಾಗೂ ಗಾಂಧೀಜಿಯವರ ಪ್ರಭಾವದಿಂದ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು.

ವೆಂಕೋಬರಾವ್ ಅವರು ಕಪಟರಾಳ ಕೃಷ್ಣರಾವ್, ಮಾಧವರಾವ್ ಬಾಸುತ್ಕರ, ಡಾ.ಜಿ.ಸುಬ್ಬಯ್ಯ, ಯೋಗಾಜಿರಾವ್ ದಿವಟೆ ಇವರೊಡನೆ ಅತ್ಯಂತ ಸ್ನೇಹದಿಂದ್ದರು. ಭಾರತ ಸ್ವತಂತ್ರವಾದಾಗ ಇವರು ವಿದ್ಯಾರ್ಥಿಗಳ ಜೊತೆ ಧ್ವಜ ಹಿಡಿದುಕೊಂಡು ರಂಗಂಪೇಟೆಯವರೆಗೆ ಧ್ವಜ ಮೆರವಣಿಗೆಯೊಂದಿಗೆ 'ಭಾರತ ಮಾತಾ ಕೀ ಜೈ', 'ತಿರಂಗಾಝುಂಡಾ ಅಮರ ಹೈ' ಎಂದು ಘೋಷಣೆ ಮಾಡುತ್ತಾ ಸುರಪುರಕ್ಕೆ ಬರುತ್ತಿದ್ದಾಗ ಅವರನ್ನು ಪೋಲೀಸರು ಬಂಧಿಸಿದರು. ನಂತರ ಬಿಡುಗಡೆಯಾದರು. ರಮಾನಂದ ತೀರ್ಥರ ಪ್ರೇರಣೆ ಪಡೆದು ಹೈದರಾಬಾದ್ ವಿಮೋಚನಾ ಚಳುವಳಿಯಲ್ಲಿ ಭಾಗಿಗಳಾದ್ದ ಇವರು ಮುಸ್ಲಿಂರ ಜೊತೆಗೆ ಅತೀವ ಸ್ನೇಹದಿಂದ್ದರು. ಹೊಂದಿದ್ದರು.

ಮುಂದೆ ವೆಂಕೋಬರಾವ್ ಅವರು ತಾಳಿಕೋಟೆ ಶಿಬಿರದಲ್ಲಿ ಸೇರಿಕೊಂಡರು. ಅಲ್ಲಿಗೆ ಬಂದಂತಹ ಶಿಬಿರಾರ್ಥಿಗಳಿಗೆ ದೇಶದ ಬಗ್ಗೆ ಒಲವು ಮೂಡಿಸಿ ಅವರನ್ನು ತಮ್ಮೊಡನೆ ಸೇರಿಸಿಕೊಂಡರು. ಪುನಾದಲ್ಲಿರುವ ಗಾಂಧೀಜಿ, ತಿಲಕರ ಭೇಟಿಯಾಗಿ ವಾಪಸ್ಸು ಬರುವಾಗ ಮತ್ತೆ ಜೈಲಿಗೆ ಹೋದರು. ಹೀಗೆ ವೆಂಕೋಬರಾವರು ಒಟ್ಟು ಮೂರು ಸಲ ಕಲಬುರ್ಗಿ ಜೈಲು ಸೇರಿದರು. ವೆಂಕೋಬರಾವ್ ಪದಕಿಯವರ ತಂದೆ ಭೀಮರಾವ್ ಪದಕಿಯವರು ಸುರಪುರದ ತಹಸೀಲ್ ಕಛೇರಿಯಲ್ಲಿ ಕಾರಕೂನರಾಗಿ

ಕೆಲಸ ಮಾಡುತ್ತಿದ್ದರು. ಒಂದು ಸಲ ತಂದೆ ಮತ್ತು ಮಗ ಇಬ್ಬರೂ ವಿಮೋಚನಾ ಹೋರಾಟದ ಬಗ್ಗೆ ಚರ್ಚೆ ನಡೆದಾಗ ಇವರಿಬ್ಬರ ನಡುವೆ ಮಾತಿನ ವಾಗ್ವಾದ ಆರಂಭವಾಯಿತು. ಹೀಗೆ ವಾದ ಮಾಡುತ್ತಿರುವಾಗ ಸೈರಣೆ ಮೀರಿ ವೆಂಕೋಬರಾವ್ ಅವರ ತಂದೆ ಮಗನಿಗೆ ಹೊಡೆದರು. ವೆಂಕೋಬರಾವರು ಅಂದು ರಾತ್ರಿ ಮನೆಬಿಟ್ಟು ಪಾದಯಾತ್ರೆ ಮಾಡುತ್ತಾ ಜೇವರ್ಗಿ ತಲುಪಿದರು.

ಒಮ್ಮೊಮ್ಮೆ ಸುರಪುರಕ್ಕೆ ಬಂದಾಗ ಪೋಲೀಸರು ಹಿಡಿಯುತ್ತಾರೆಂಬ ಸುದ್ದಿ ಕೇಳಿ ಒಂದೆರಡು ಸಲ ರಂಗಂಪೇಟೆಯ ಗ್ರಾಮದಲ್ಲಿಯೇ ಭೂಗತರಾಗಿದ್ದರು. ಒಮ್ಮೆ ಮುಂಬೈಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆದಾಗ ಇವರಿಗೂ ಅಧಿವೇಶನದಲ್ಲಿ ಭಾಗವಹಿಸಲು ಕರೆಬಂದಿತು. ವೆಂಕೋಬರಾವ್ ಅವರು ಪೋಲೀಸರ ಕಣ್ಣುತಪ್ಪಿಸಿ ಜೋಳದಡಿಗೆಯ ಹತ್ತಿರ ನದಿ ದಾಟಿ ದೇವದುರ್ಗ ತಲುಪಿ ಅಲ್ಲಿ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾದ ಜೆ.ಕೆ.ಪ್ರಾಣೇಶಾಚಾರ್ಯರನ್ನು ಕಂಡರು. ಅವರೊಡನೆ ಮುಂಬೈ ಹೋಗಿ ಅಧಿವೇಶನದಲ್ಲಿ ಭಾಗವಹಿಸಿದರು. ಹೀಗೆ ಮೊದಲಿನಿಂದಲೂ ಇವರು ಆರ್ಯ ಸಮಾಜ ಮತ್ತು ರಾಜ್ಯ ಕಾಂಗ್ರೆಸ್‌ನ ಸಮ್ಮೇಳನ ಇವುಗಳಲ್ಲಿ ತಪ್ಪದೇ ಭಾಗಿಯಾಗುತ್ತಿದ್ದರು. ಹೈದರಾಬಾದ ವಿಮೋಚನೆಯು ಇವರಿಗೆ ಹರ್ಷವನ್ನು ತಂದುಕೊಟ್ಟಿತು. ತಾವೂ ಕೈಗೊಂಡ ಹೋರಾಟ ಸಫಲವಾಯಿತೆಂದು ಆಗಾಗ ಇತರರ ಮುಂದೆ ಹೇಳಿಕೊಳ್ಳುತ್ತಿದ್ದರು.

## ೫.೧೧. ಶ್ರೀ ವಿರೂಪಾಕ್ಷಪ್ಪಗೌಡ ರಾಜನಕೋಳೂರು

ವಿರುಪಾಕ್ಷಪ್ಪಗೌಡರು ಸುರಪುರ ತಾಲೂಕಿನ ರಾಜನಕೋಳೂರಿನಲ್ಲಿ ೧೯೨೫ರಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಇವರು ಧೈರ್ಯ, ಸಾಹಸಗಳನ್ನು ಮೈಗೂಡಿಸಿಕೊಂಡು ಬೆಳೆದವರಾಗಿದ್ದರು. ವಿರುಪಾಕ್ಷಗೌಡರು ಕೃಷಿ ಪ್ರಧಾನವಾದ ಮನೆತನದಿಂದ ಬಂದವರಾಗಿದ್ದರು. ಇವರು ಜಮೀನದ್ದಾರ ಶ್ರೀಮಂತರ ಏಕೈಕ ಪುತ್ರ. ೧೯೪೫ರಲ್ಲಿ ಇವರು ಇಂಟರ್ ಮಿಡಿಯೇಟ್ ಪಾಸಾದರು. ಇವರು ಮ್ಯಾಟ್ರಿಕದವರೆಗೆ ಕಲಬುರ್ಗಿಯಲ್ಲಿ ಓದಿದರು. ನಂತರ ಕಾಲೇಜ್ ಅಭ್ಯಾಸಕ್ಕಾಗಿ ಹೈದರಾಬಾದಿಗೆ ಹೋದರು. ಕಲಬುರ್ಗಿಯಲ್ಲಿ ಕಾಂಗ್ರೆಸ್ಸಿಗರು ಏರ್ಪಡಿಸಿದ ಸಮಾರಂಭದಲ್ಲಿ ರಾಜಕೀಯ ನಾಯಕರೊಬ್ಬರು ಮಾಡಿದ ಕ್ರಾಂತಿಕಾರಿ ಭಾಷಣವು ವಿರೂಪಾಕ್ಷಪ್ಪಗೌಡರ ಮೇಲೆ ಗಾಢವಾದ ಪರಿಣಾಮ ಬೀರಿತು. "ಯಾರಲ್ಲಿ ಎದೆಗುಂಡಿಗೆ ಇಲ್ಲವೋ, ಯಾರು ಗುಂಡಿಗೆ ಹೆದರಿ ಹಿಂಜರಿಯುವರೋ ಅವರು ಕ್ರಾಂತಿಕಾರಿಯಾಗಲು ಯೋಗ್ಯರಲ್ಲ. ಅದು ಉಪದೇಶದಿಂದ ಆಗುವ ಕಾರ್ಯವಲ್ಲ ಸ್ವಯಂ ಸ್ಫೂರ್ತಿಯಿಂದಲೇ ಸಾಧ್ಯ" ಎಂದು ಆ ನಾಯಕರಾಡಿದ ಮಾತುಗಳನ್ನು ಕೇಳಿದ ನಂತರ ವಿರುಪಾಕ್ಷಪ್ಪಗೌಡರು ಮುಂದೆ ಓದಲಿಲ್ಲ. ದೇಶಪ್ರೇಮ ಅವರಲ್ಲಿ ಬಲವಾಗಿ ಬೇರೂರಿತು. ಓದು ಬಿಟ್ಟು ಊರಿಗೆ ಮರಳಿ ಬಂದರು. ಮುಂದೆ ೧೯೪೮ರಲ್ಲಿ ಸ್ವಾಮಿ ರಮಾನಂದ ತೀರ್ಥರ ನೇತೃತ್ವದಲ್ಲಿ ನಡೆಯುತ್ತಿದ್ದ ಹೈದರಾಬಾದ್ ಮುಕ್ತಿ ಸಂಗ್ರಾಮದಲ್ಲಿ ಭಾಗಿಯಾದರು.



ನಿಜಾಂ ಅವರ ಗಡಿಗೆ ಸಮೀಪವಿದ್ದ ತಾಳಿಕೋಟೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಶಿಬಿರವು ಸುರಪುರದ ರಾಜಾ ವೆಂಕಟಪ್ಪನಾಯಕರ ನೇತೃತ್ವದಲ್ಲಿ ಸ್ಥಾಪನೆಯಾಗಿತ್ತು. ಈ ಶಿಬಿರದಲ್ಲಿ ಅಪ್ಪಾರಾವ ವಕೀಲ, ಬಸವಂತರಾಯಗೌಡ ಹಗರಟಗಿ, ವೆಂಕನಗೌಡ, ಸಂಗಪ್ಪ ಉದ್ದನ್ನ ಇನ್ನಿತರ ನಾಯಕರು ಇದ್ದರು. ಸಾಲವಾಡಿಗೆ, ಬಂಟನೂರು ಮತ್ತು ನಾಗರಬೆಟ್ಟಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದರು. ಈ ಎಲ್ಲ ಶಿಬಿರಗಳಿಗೆ ತಾಳಿಕೋಟೆ ಶಿಬಿರ ಮುಖ್ಯವಾಗಿತ್ತು. ಶಿಬಿರದ ಹೋರಾಟಗಾರರು ನಿಜಾಂ ಗಡಿಗಳ ಅಕ್ಕಪಕ್ಕದಲ್ಲಿರುವ ಹಳ್ಳಿಗಳ ಮೇಲಾಗುತ್ತಿರುವ ರಜಾಕಾರರ ದಬ್ಬಾಳಿಕೆಯನ್ನು ಸಮರ್ಥವಾಗಿ ಎದುರಿಸಿದರು. ತಾಳಿಕೋಟೆ ಶಿಬಿರದಲ್ಲಿ ವಿರುಪಾಕ್ಷಪ್ಪಗೌಡರು ಸೇರಿ ತಮ್ಮ ಹೋರಾಟ ಪ್ರಾರಂಭಿಸಿ ರಜಾಕಾರರಿಗೆ ಸಿಂಹಸ್ವಪ್ನವಾದರು. ಈ ಹೋರಾಟಕ್ಕಾಗಿ ಬಂದೂಕನ್ನು ಕೊಡಿಸಲು ತಾಯಿಯನ್ನು ಕೇಳಿದರು. ವಿರುಪಾಕ್ಷಪ್ಪಗೌಡರ ತಾಯಿಯು ಬ್ಯಾಲಾಳಗೌಡರ ಹತ್ತಿರವಿದ್ದ ಬಂದೂಕನ್ನು ೧೨೦೦ ರೂ.ಗೆ ಖರೀದಿಸಿ ಮಗನಿಗೆ ಕೊಟ್ಟರು. ಇವರ ಮನೆಯವರು ರಜಾಕಾರರ ದಬ್ಬಾಳಿಕೆಗೆ ಅಂಜಿ ರಾಜನಕೋಳೂರು ಬಿಟ್ಟು

ಮುಂಬೈ ಸರ್ಕಾರದ ಪಕ್ಕದ ಗ್ರಾಮ ಅಂದರೆ ವಿರೂಪಾಕ್ಷಪ್ಪನವರ ಹೆಂಡತಿ ಊರು ಸಾಲವಾಡಿಗೆಯಲ್ಲಿದ್ದರು. ವಿರುಪಾಕ್ಷಪ್ಪಗೌಡರು ಆಗಾಗ ತಾಳಿಕೋಟೆ ಶಿಬಿರದಿಂದ ಸಾಲವಾಡಗಿಗೆ ಬಂದು ಹೋಗುತ್ತಿದ್ದರು. ಇವರು ಸಾಲವಾಡಗಿ ಭೂಗತ ಚಟುವಟಿಕೆ ಕ್ಯಾಂಪಿನ ಮುಖ್ಯ ಕಾರ್ಯಕರ್ತರಾಗಿದ್ದರು. ಇವರು ಉಗ್ರ ಹೋರಾಟಗಳಿಂದ ರಜಾಕಾರರ ಕೋಪಕ್ಕೆ ಕಾರಣವಾಗಿದ್ದರು ಎಂದು ವೆಂಕನಗೌಡರು ಸಂದರ್ಶನದಲ್ಲಿ ಮಾಹಿತಿ ನೀಡಿದ್ದಾರೆ (ಸಂದರ್ಶನ : ವೆಂಕನಗೌಡ ೦೪.೦೨.೨೦೦೬).

ಹೇಗಾದರೂ ಮಾಡಿ ಈ ಉಗ್ರಸಿಂಹದಂತಿರುವ ವಿರುಪಾಕ್ಷಪ್ಪಗೌಡರನ್ನು 'ಮುಗಿಸಿಬಿಡಬೇಕೆಂದು' ನಿಜಾಂ ಸರ್ಕಾರ ತೀರ್ಮಾನಿಸಿತು. ಇವರನ್ನು ಹಿಡಿದುಕೊಟ್ಟವರಿಗೆ ಅಂದಿನ ಕಾಲದಲ್ಲಿ ಅತ್ಯಧಿಕ ಮೊತ್ತವಾದ ೧೦೦೦ ರೂ. ಬಹುಮಾನ ಕೊಡುವುದಾಗಿ ನಿಜಾಂ ಸರ್ಕಾರ ಘೋಷಿಸಿತು. ಇದನ್ನು ಅರಿತು ಕೊಂಡಿದ್ದ ವಿರುಪಾಕ್ಷಪ್ಪಗೌಡರು ಅಂಜದೆ ನಿಜಾಂ ಸರ್ಕಾರದ ವಿರುದ್ಧ ಕೆರಳಿ ಕೆಂಡವಾದರು(ಸಂಯುಕ್ತ ಕರ್ನಾಟಕ, ೧೫.೦೯.೨೦೦೫). ರಜಾಕಾರರರೊಡನೆ ಅನೇಕ ಸಲ ಮುಖಾಮುಖಿಯಾಗಿ ಹೋರಾಡಿದ ಘಟನೆಗಳಿವೆ. ಅವುಗಳಲ್ಲಿ ಎಣ್ಣೆವಡಗೇರಿ ಘಟನೆ, ರಾಜನಕೋಳೂರು ಘಟನೆ ಬಹುಮುಖ್ಯವಾಗಿದೆ. ವಿರುಪಾಕ್ಷಪ್ಪಗೌಡರು ಕೈಬಾಂಬುಗಳನ್ನು ತಯಾರಿಸುತ್ತಿದ್ದರು.

ಶಿಬಿರದಲ್ಲಿ ಹಣದ ಅಡಚಣೆ ಕಂಡುಬಂದಾಗ ಒಂದೊಂದು ಸಲ ಮನೆಯಿಂದ, ಅಡತಿ ಅಂಗಡಿಯಿಂದ ಹಣ ತಂದು ಶಿಬಿರವನ್ನು ನಡೆಸುತ್ತಿದ್ದರು. ವಿರುಪಾಕ್ಷಪ್ಪಗೌಡರು ರಾಜನಕೋಳೂರಿನ ಕರೋಡಗಿರಿ ನಾಕಾದ ಮೇಲೆ ಮುತ್ತಿಗೆ ಹಾಕಿ ಅಲ್ಲಿಯ ಕಾಗದ ಪತ್ರಗಳನ್ನು ಸುಟ್ಟು ಹಾಕಿದರು. ನಂತರ ಇವರು ಎಣ್ಣೆವಡಗೇರಾಕ್ಕೆ ಬಂದರು. ಅಲ್ಲಿ ಒಬ್ಬ ಮುಸ್ಲಿಂ ಮುತಾಂಧನು ರಜಾಕಾರರಿಗೆ ರಹಸ್ಯವಾಗಿ ಇವರ ಚಲನವಲನ, ಕಾರ್ಯಯೋಜನೆಗಳ ಬಗ್ಗೆ ಮಾಹಿತಿ ನೀಡುತ್ತಿದ್ದರು. ಆ ವಿಷಯ ಇವರಿಗೆ ಗೊತ್ತಾಗಿ ಅವನನ್ನು ಕೊಲೆ ಮಾಡಿದರು ಎಂದು ವೆಂಕನಗೌಡರು ಸಂದರ್ಶನದಲ್ಲಿ ತಿಳಿಸಿದ್ದಾರೆ. ಅಲ್ಲಿಂದ ಮಾರಲಬಾವಿಗೆ ಹೋದರು. ಅಲ್ಲಿ ಮಾರನಾಳ ಕುಲ್ಕರ್ಣಿ ಮತ್ತು ರಸೂಲ ಎಂಬ ಸಿಪಾಯಿ ಹತ್ತಿರ ಹಫ್ತೆ ವಸೂಲು ಮಾಡಿದ ಹಣವಿತ್ತು. ರಸೂಲ ಎಂಬ ಚಪ್ರಾಸಿಯ ಮನೆಗೆ ನುಗ್ಗಿ ಅವನು ಹಣ ಕೊಡದ ಕಾರಣ ಅವನನ್ನು ಎತ್ತಿ ಕೆಳಗೆ ಒಗೆದದ್ದರಿಂದ ಅವನು ಸತ್ತು ಹೋದನು. ಈ ವಿಷಯಕ್ಕೆ ಸಂಬಂಧಿಸಿದಂತೆ ಚಂದ್ರಗುಪ್ತಗುರೂಜಿ ಮತ್ತು ವಿರುಪಾಕ್ಷಪ್ಪಗೌಡನ ನಡುವೆ ಮಾತಿನ ಮನಸ್ತಾಪವುಂಟಾಯಿತು. ಇದರಿಂದ ತಾಳಿಕೋಟೆ ಶಿಬಿರದಲ್ಲಿ ಒಡಕುಂಟಾಗಿ ವಿರುಪಾಕ್ಷಪ್ಪಗೌಡ, ಬಸವಂತ್ರಾಯಗೌಡ ಮತ್ತು ಮಹಾಂತಗೌಡರು ಬಂಟನೂರ ಶಿಬಿರಕ್ಕೆ ಹೋದರು.

ವಿರುಪಾಕ್ಷಪ್ಪಗೌಡರನ್ನು ಹಿಡಿಯಲು ರಜಾಕಾರರ ಒಂದು ತುಕಡಿಯನ್ನು ಹುಣಸಗಿಯ ಕರೋಡಗಿರಿ ನಾಕೆಯಲ್ಲಿಟ್ಟಿದ್ದರು. ಮಾಳನೂರು, ಮಾರಲಬಾವಿಗಳ ಗುಡ್ಡಗಳ ಮಧ್ಯದಲ್ಲಿರುವ ಮೂಕಾರ್ತಿ ಗುಡ್ಡದ ಮದ್ಯದಲ್ಲಿ ಕೆಲವು ಜನ ಬಂದೂಕುಧಾರಿಗಳನ್ನು ಕಾಯ್ದಿರಿಸಿದ್ದರು. ೧೯೪೮ ಮೇ ತಿಂಗಳ ಕೊನೆಯ

ಶನಿವಾರವು ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಒಂದು ಐತಿಹಾಸಿಕ ದಿನವಾಗಿ ಪರಿಣಮಿಸಿದೆ. ರಾಜಕೋಳೂರ ಗ್ರಾಮದ ಒಬ್ಬ ವ್ಯಕ್ತಿಯು ವಿರುಪಾಕ್ಷಪ್ಪಗೌಡರಲ್ಲಿ ಬಂದು ಮೇವಿನ ಬಣಿವೆಗೆ ಬೆಂಕಿ ಹಚ್ಚಿದ್ದಾರೆಂದು ಹೇಳಿದರು. ವಿರುಪಾಕ್ಷಪ್ಪಗೌಡರು ಈ ಭಾಗದ ಹೋರಾಟಗಾರರ ಕಾವಲಿಗಾಗಿ ಇರಿಸಿದ್ದ ೪ ಜನ ಪೊಲೀಸರು, ಓರ್ವ ಹವಾಲ್ದಾರ ಗೌಡರ ಬಲಗೈ ಬಂಟ ಮಹಾಂತಗೌಡರ ಜೊತೆಗೂಡಿ ಮೂರ್ಕಾರ್ತಿಗುಡ್ಡದ ಸಮೀಪದಲ್ಲಿದ್ದ ಹೊಲಕ್ಕೆ ಬಂದರು. ಇವರು ಬರುವುದನ್ನೆ ಎದುರುನೋಡುತ್ತಿದ್ದ ರಜಾಕಾರರು ವಿರುಪಾಕ್ಷಪ್ಪಗೌಡರನ್ನು ಹಾಗೂ ಸಂಗಡಿಗರನ್ನು ಕಂಡ ತಕ್ಷಣವೇ ಇವರ ಮೇಲೆ ಗುಂಡಿನ ಮಳೆಗರೆದರು. ಸುಮಾರು ೨೫ ನಿಮಿಷಗಳಕಾಲ ಗುಂಡಿನ ಚಕಮಕಿ ನಡೆಯಿತು. ಆದರೆ ವಿರುಪಾಕ್ಷಪ್ಪಗೌಡರ ಅದೃಷ್ಟ ಸರಿಯಾಗಿರಲಿಲ್ಲ. ಅವರ ಬಂದೂಕಿನಲ್ಲಿದ್ದ ಗುಂಡುಗಳೆಲ್ಲವು ಮುಗಿದುಹೋಗಿದ್ದವು. ರಜಾಕಾರರಿಂದ ಬಂದ ಗುಂಡು ವಿರುಪಾಕ್ಷಪ್ಪನ ಎದೆಗೆ-ಬೆನ್ನಿಗೆ ತಗಲಿ ನೆಲಕ್ಕುರುಳಿದರು. ಇವರ ಜೊತೆಯಿದ್ದ ೪ ಜನ ಪೋಲೀಸರು, ಮಹಾಂತಪ್ಪಗೌಡರು ಮರಣ ಹೊಂದಿದ್ದರು. ಗಾಯಗೊಂಡು ಮಲಗಿದ್ದ ವಿರುಪಾಕ್ಷಪ್ಪಗೌಡರ ಸಮೀಪ ಬರಲು ರಜಾಕಾರರಿಗೆ ಭಯವಿದ್ದರಿಂದ, ರಜಾಕಾರರು ಮತ್ತಷ್ಟು ಗುಂಡಿನ ಮಳೆಗೆರೆದರು. ಹೀಗೆ ಗುಂಡೇಟಿನಿಂದ ಜರ್ಜರಿತರಾದ ವಿರುಪಾಕ್ಷಗೌಡರು ಮರಣಹೊಂದಿದರು. ಇವರು ಮರಣಹೊಂದಿದಾಗ ಕೇವಲ ೨೩ ವಯಸ್ಸಿನವರಾಗಿದ್ದರು. ಇವರು ಮರಣಹೊಂದಿದ ಮೂರುವರೆ ತಿಂಗಳಲ್ಲಿ ಅಂದರೆ ೧೮ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ್ ಸಂಸ್ಥಾನ ಭಾರತದೊಂದಿಗೆ ವಿಲೀನವಾಯಿತು. ರಜಾಕಾರರು ವಿರುಪಾಕ್ಷಪ್ಪಗೌಡರ ಹೆಣವನ್ನು ಗಾಡಿಯಲ್ಲಿ ತಂದು ಸುರಪುರದಲ್ಲಿ ಮೆರವಣಿಗೆ ವಿಜಯೋತ್ಸವ ಆಚರಿಸಿದರು. ಈ ಅಂಶವನ್ನು ಸಂಯುಕ್ತ ಕರ್ನಾಟಕ ಪತ್ರಿಕೆಯಿಂದ ಮಾಹಿತಿ ಪಡೆಯಲಾಗಿದೆ.

ಕೆಲವರು ವಿರುಪಾಕ್ಷಪ್ಪಗೌಡರಿಗೆ ಮೀಸೆ ದಾಡಿ ಏಕೆ ಬಿಟ್ಟಿದ್ದಿರೆಂದು ಕೇಳಿದರೆ 'ಜಬ್ ತಕ್ ಮುಸ್ಲಿಂಕೋ ಖತಂ ನಹೀಂ ಕರೇಂಗೆ ತಬ್ ತಕ್ ದಾಡಿ ನಹಿ ಮುಂಡಾಯೆಂಗೆ'' ಎಂದು ಹೇಳುತ್ತಿದ್ದ ಮಾತು ಈಗಲೂ ಜನರಲ್ಲಿ ಪ್ರಚಲಿತವಿದೆ. ಇವರು ಗಡ್ಡ, ಮೀಸೆ ಬಿಟ್ಟಿದ್ದರಿಂದ ಸರ್ದಾರ ಶರಣಗೌಡರ ಹಾಗೆ ಕಾಣುತ್ತಿದ್ದರು. ರಜಾಕಾರರು ಸರ್ದಾರ ಶರಣಗೌಡರೆಂದು ತಿಳಿದು ಇವರನ್ನು ಕೊಲೆ ಮಾಡಿದರೆಂದು ಸರ್ದಾರ ಶರಣಗೌಡರು ಸಂದರ್ಶನದಲ್ಲಿ ಹೇಳಿದ್ದಾರೆ (ಸಂದರ್ಶನ : ಸರ್ದಾರ ಶರಣಗೌಡ, ೨೩.೦೧.೨೦೦೬).

ಹೈದರಾಬಾದ್ ಸಂಸ್ಥಾನವು ಭಾರತದ ಒಕ್ಕೂಟದಲ್ಲಿ ಒಂದಾಯಿತು. ವಿರುಪಾಕ್ಷಪ್ಪಗೌಡರ ಕನಸು ನನಸಾಯಿತು. ಆದರೆ ಇದನ್ನು ನೋಡಲು ಇವರೇ ಇಲ್ಲದಂತಾಯಿತು. ಇವರ ಮರಣದ ನಂತರ ಸುರಪುರದ ಸರದಾರ ವಲ್ಲಭಬಾಯಿ ಪಟೇಲ ಸಮಿತಿ ೧೯೭೬ ಅಕ್ಟೋಬರ್‌ನಲ್ಲಿ ಇವರ ಹೆಂಡತಿಯನ್ನು ಸನ್ಮಾನಿಸಿದರು. ಈ ಸನ್ಮಾನ ಕಾರ್ಯಕ್ರಮದಲ್ಲಿ ಭಗತಸಿಂಗನ ತಮ್ಮ ಕುಲ್ತಾರಸಿಂಗ್ ಮತ್ತು

ಮಹಾಕ್ರಾಂತಿಕಾರಿ ರಾಜಗುರುವಿನ ಅಣ್ಣಹರಿರಾಜ ಗುರು ಭಾಗವಹಿಸಿದರು. ಇವರು ಮರಣ ಹೊಂದಿದ ಸ್ಥಳಕ್ಕಿಂತ ೩ ಕಿ.ಮೀ ದೂರದಲ್ಲಿ ಕೃಷ್ಣಾನದಿ ಹರಿದಿದೆ. ಇದಕ್ಕೆ 'ರಾಜನಕೋಳೂರು ಟನಲ್' ಎಂದು ಕರೆದಿದ್ದನ್ನು ಸ್ಥಳೀಯ ಜನರು ವಿರುಪಾಕ್ಷಪ್ಪಗೌಡರ ಹೆಸರಿಡಬೇಕೆಂದು ಸರ್ಕಾರಕ್ಕೆ ವಿನಂತಿಸಿಕೊಂಡರು. ೧೯೮೪ರಲ್ಲಿ ಅಂದಿನ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆ ಅವರು ಸರ್ಕಾರಿ ಆದೇಶದ ಸಂಖ್ಯೆ PWD ೧೫೧, GUK ೮-೩, ಪ್ರಕಾರ ೬-೩-೧೯೮೪ ರಂದು ಆ ಟನಲ್‌ಗೆ 'ವಿರುಪಾಕ್ಷಪ್ಪ ಟನಲ್' ಎಂದು ಹೆಸರಿಸಿದರು. ನಂತರ ರಾಜನಕೋಳೂರಿನ ಸರ್ಕಾರಿ ಆರೋಗ್ಯ ಪ್ರಾಥಮಿಕ ಕೇಂದ್ರದಲ್ಲಿ ವಿರೂಪಾಕ್ಷಪ್ಪಗೌಡರ ಮೂರ್ತಿಯನ್ನು ಸ್ವಾತಂತ್ರ್ಯ ಹೋರಾಟಗಾರರಾದ ವಿದ್ಯಾಧರ ಗುರೂಜಿಯವರು ಅನಾವರಣಗೊಳಿಸಿದ್ದಾರೆ (ಮೂಡಬೂಳರ ಲೇಖನ : ರಾಜನಕೋಳೂರಿನ ಮಹಾಬಲಿದಾನಿ ತರುಣ ವಿರುಪಾಕ್ಷಪ್ಪಗೌಡ).

**ವಿರೂಪಾಕ್ಷಪ್ಪಗೌಡರ ರಾಜನಕೋಳೂರ ಕುರಿತ ಲಾವಣಿ**

"ಸುತ್ತ ನಾಡಿನೊಳಗೆ ಹೆಸರಾಯ್ತು ಕೋಳೂರ ಗ್ರಾಮ
ನೀತಿವಂತ ಪಾಟೀಲ್ರ ಮನಿಯಾಗ ಹುಟ್ಟಿದ ಭೀಮ
ಜಾತಿಲಿಂದ ಲಿಂಗವಂತ್ರ ಯಾತಕೇನು ಕಡಿಮೆಯಿಲ್ಲ
ವೀರ ವಿರಪಣ್ಣಗೌಡನಂತ ಹೆಸರಿಟ್ರು ನೇಮ
ದಿಟ್ಟ ಧೀರಗೌಡ ನಟ್ಟ ನಡುವೆ ಮಾಳ್ನೂರು ಗುಡ್ಡದಾಗ
ಸಿಕ್ಕಿಕೊಂಡಾನಪ್ಪ ಹಿಂಡನಗಲಿದ ಗಂಡೆರಳಿಯರಿಗ
ರಜಾಕಾರ ಫೌಜ ಸುತ್ತವರಿದ ರಾಹು ಹಿಡಿದಂಗ ಚಂದ್ರಗ
ಮಧ್ಯಾನದಾಗ ಸೂರ್ಯ ಮುಳುಗಿದಾನ
ಏರ ಹರೆದೊಳಗೆ ಮರಿಯಾಗಿ ಹೋದನ
ಸರ್ಕಾರದಿಂದ ದಂಡಬಂತ ಗೌಡ ಮಡದಮ್ಯಾಗ
ಹಿಂದಿನಿಂದ ನಿನ ಆದರೇನ, ಕೈಯಾನ ರತ್ನ ಕಳದ್ಹೋದಾಗ"

ಲಾವಣಿಕಾರ-ಆಳ್ದಾಳ ಯಂಕಪ್ಪ
(ಬಿ.ಕೃಷ್ಣಮಾಚಾರ್ಯ, ೧೯೯೨:೨)

**ಜಾನಪದ ಹಾಡು**

ದಾರಿಯ ನೋಡಿದೆ ನಿಜ ಗುರು ದೇವನ
ಪರಮಾತ್ಮನೆಂಬ ಪಟ್ಟಣದೊಳಗಾರಿಲ್ಲ
ಕೋಳೂರೆಂಬ ಗ್ರಾಮ ನಾಕೆ ಹರವಾರಿನೇಮ
ಅಪ್ಪ ವಿರುಪಣ್ಣಗೌಡ ತಾಯಿನ ಕೇಳತಾನ

ಹಡದ ತಾಯಿ ಗೌರಮ್ಮ ಗೌಡ್ತಿ
ಲಡಾಯಿಗೆ ಹೋಗ್ತಿನಿ
ವಚನವ ಕೊಡುತಾಯಿ
ಲಡಾಯಿ ಮಾಡಿ ಬರ್ತಿನಿ ೀದಾರಿಯೇ
ಆ ಮಾತಿಗ್ಹಡ್ದವ್ಮ್ಮ ಏನಂತ ಹೇಳ್ತಾಳ
ಹೋಗಬ್ಯಾಡ ವಿರುಪಣ್ಣಗೌಡ
ಮುಂದೆ ಲಡಾಯಿ ಜೋರ ಆದ ||ದಾರಿಯ||
ಹಡದ ತಾಯಿ ಮಾತಮೀರಿ
ಸಾಲವಾಡಿಗೆ ಬಂದಾನಲ್ಲಾ
ಸಾಲವಾಡ್ಗಿ ಊರೊಳಗೆ
ಅತ್ತಿಮಾವನ ಮನೆಗೆ ಬಂದ
ಅತ್ತಿನಂದಮ್ಮ ಗೌಡ್ತಿ ನೋಡಿ
ಚರಗಿ ನೀರ ಕೊಟ್ಟಾಳಲ್ಲs
ಕಾಲ ಮಾರಿನ ತೊಳದಾನ
ಜಳಕಾ ತಾನು ಮಾಡಿದನಲ್ಲಾ
ಊಟಾನ ಮಾಡ್ತಾ ಕುಂತಾನಲ್ಲ
ಅಪ್ಪ ವಿರುಪಣ್ಣಗೌಡ ತಾನು
ಮೇಲ್ಮಟ್ಟಕ ಬಂದಾನಲ್ಲಾ
ಮಂಚಕ ತಲೆಯ ಕೊಟ್ಟು
ಜಂಪ ನಿದ್ದಿ ಮಾಡ್ತಾನಲ್ಲಾ
ಜಂಪ ನಿದ್ದಿ ಮಾಡೆದ್ದು
ಕಾಲ ಮಾರಿ ತೋಳಕೊಂಡು
ಚಹಾದ ಅಂಗಡಿಗೆ ಬಂದಾನಲ್ಲ
ಚಹಕಪ್ಪ ಕೈಯಾಗ ಹಿಡದು
ಚಹಾ ತಾನು ಕುಡದಾನ
ಮಾಳನೂರ ಸೀಮ್ಯಾಗ
ಬಣಮಿಗೆ ಬೆಂಕಿ ಹಚ್ಯಾರಂತ
ಎಂಟ ಮಂದಿ ಪೊಲೀಸರು
ಓಡಿ ಬಂದು ಹೇಳ್ತಾರ

ಚಹಾಕಪ್ಪು ತಳಗಿಟ್ಟು
ಬಂದೂಕ ಕೈಯಾಗ ಹಿಡ್ದು
ಅವಸರ್ದಿ ತಾನು ಓಡತಾನ
ಅವಸರ್ದಿ ಓಡುವಾಗ ಎಡಗಾಲ
ಎಡವಿದನಲ್ಲಾ ಅಪ್ಪವಿರುಪಣ್ಣಗೌಡ
ಅನುಮಾನ ಮಾಡಿ ಕೊಂಡಾನಲ್ಲಾ
ಗೌಡ, ಕುಲಕರ್ಣಿ ಕುಂತು ಹೇಳ್ತಾರs
ಹೋಗಬ್ಯಾಡ ವಿರುಪಣ್ಣಗೌಡs
ಮುಂದೆ ಲಡಾಯಿ ಜೋರ ಆದ
ಆ ಮಾತಿಗಿರುಪಣ್ಣ ಏನಂತ ಹೇಳ್ತಾನ
ಮುಂದಕಿಟ್ಟ ಹೆಜ್ಜೆ ಹಿಂದಕ್ಕಿಡುದಿಲ್ಲ
ಎಲ್ಲಾರ ಮಾತು ಮೀರ್‍ಯಾನಲ್ಲಾ
ಎಲ್ಲಂಿನ ಗುಡ್ಡಕ ಬಂದಾನಲ್ಲ
ಸುತ್ತ ಮುತ್ತ ಗುಡ್ಡದಾಗೆ
ಮಿಲ್ಟ್ರಿ ಮಂದಿ ಕುಂತಾರಲ್ಲ
ರಜಾಕಾರ ಕುಂತಾರಲ್ಲ ||ದಾರಿ||
ವಿರುಪಣ್ಣನ ಮುಂದ ಬಿಟ್ಟು
ಹಿಂದಿನಿಂದ ಗೋಲಿ ಹಾಕ್ಯಾರಲ್ಲ
ಅಪ್ಪ ವಿರುಪಣ್ಣಗೌಡ
ಹಿಂದಕ ತಿರುಗಿ ನೋಡ್ತಾನ
ಪಾಸಿಲಿಂದ ನೀವು ಗೋಲಿ ಹಾಕಬ್ಯಾಡ್ರಿ
ಎದುರಿಗೆ ಒಬ್ಬೊಬ್ಬರು ಬಂದು
ಲಡಾಯಿ ಮಾಡಿ ನೋಡ್ರಿ ||ದಾರಿ||
ಇಷ್ಟು ಅನ್ನುದ್ರಾಗ ಒಂದರ ಮ್ಯಾಲೊಂದು ಗೋಲಿ
ಸುತ್ತಮುತ್ತ ಬಂದಾವ ನೋಡ್ರಿ
ನಾಕು ಗೋಲಿ ಒಗದಾರ ನೋಡ ||ದಾರಿ||
ನಿಂತಲ್ಲಿ ವಿರುಪಣ್ಣ
ನೆಲಮ್ಯಾಲ ಬಿದ್ದಾನಲ್ಲ
ಕೈಯಾಗ ಬಂದೂಕ ಹಿಡ್ದಾನಲ್ಲ

ಬಂದೂಕ ಬಾರಬಾಡಿ ಐದು ಮಂದಿ ಹೊಡದಾನ
ಐದು ಮಂದಿ ಹೊಡ್ದು ನೀರಂತ ಕೇಳ್ತಾನ
ಬಾಯಾಗ ಬಂದೂಕ ಇಟ್ಟ ಅವರು
ಹುಸಿಗುಂಡು ಹೊಡ್ದಾರಲ್ಲಾ
ಅಪ್ಪ ವಿರುಪಣ್ಣಗೌಡನ ಜೀವ ಹೋಗೆದಲ್ಲಾ ||ದಾರಿ||
ಕಾಲಿನ ಬ್ಯಾಂಡಿಸ ತೆಗೆದು
ಎರಡು ಕಾಲಿಗಿ ಕಟ್ಯಾರಲ್ಲ
ಮಾಳ್ನೂರತನಕ ಎಳದಾರಲ್ಲ
ಮಾಳನೂರಾಗ ಎರಡು ಗಾಡಿ ತಂದಾರಲ್ಲ
ಒಬ್ಬವನೆ ವಿರುಪಣ್ಣಗೌಡನ
ಒಂದೇ ಬಂಡೆ ಗಾಕ್ಯಾರಲ್ಲಾ
ಐದು ಮಂದಿ ಪೋಲೀಸ್‌ರನ್ನು
ಒಂದು ಗಾಡ್ಯಾಗಾಕ್ಯಾರಲ್ಲ
ಆ ಗಾಡಿನ್ ನೋಡ್ರಿ ಹುಣಸಗಿ ಊರಾಗ ನಿಂದ್ರಿಶಾರಲ್ಲ
ಗಾಡ್ಯಾನ ಹೆಣ ತೆಳಗೆ ಹಾಕ್ಯಾರಲ್ಲಾ
ಸುತ್ತ ನಾಕಳ್ಳಿ ಮಂದಿ
ನೋಡಲಾಕ ಬಂದಾರಲ್ಲ
ತಹಸೀಲ್ದಾರ, ಅಮೀನಸ್ಸಾಬ
ಸುತ್ತ ಪೋಲೀಸರು ನಿಂತಾರಲ್ಲಾ
ಸತ್ತ ವಿರುಪಣ್ಣಗೌಡನ ಫೋಟೋ
ಅಮಿನಸಾಬ ಇಳಿಸ್ಯಾನಲ್ಲಾ
ಆ ಫೋಟೋ ಹೈದರಾಬಾದಕ್ಕೆ ಕಳಿಸ್ಯಾರ
ಹೈದರಾಬಾದ್ ಊರಾಗ ಆ ಫೋಟೋ ಮೆರೆಸ್ಯಾರ
ನಡು ಬಜಾರದಾಗ ಫೋಟೋವನ್ನು ನಿಂದಶ್ಯಾರ
ಸತ್ತಿಲ್ಲ ವಿರುಪಣ್ಣ ದೇವರಾಗಿ ನಿಂತಾನ
ದೇಶದೊಳಗ ಹೆಸರಾದ ಕೋಳೂರು
ತಂದೆ ಬಸವಂತರಾಯ ತಾಯಿ ಗೌರಮ್ಮನವರು
ತಾಯಿಗೊಬ್ಬನೆ ಮಗ ಬೋರ್ಯಾಡಿ ಆಳತಾಳ
ಸುರಪುರ ತಾಲೂಕದೊಳಗ

ಕಚಕನೂರು ಬೀಗಸ್ತನ
ತಂಗಿ ಲಗ್ನದ ದಿವಸ
ಜೀವ ಕೊಟ್ಟ ವಿರುಪಣ್ಣಗೌಡ || ದಾರಿ ||
ಆ ಬಳಿಯ ಈ ಬಳಿಯ
ಮಡದಿ ಗಂಗಾಬಾಯಿ ಬಳಿಯ
ಕೈ ಬಳೆಯ ತೆಗೆಯುವ ಮುಂದ
ತಾಯಿ ತಂದೆ ಅಳತಾರss
ಆ ಮುತ್ತು ಈ ಮುತ್ತು
ಮೂಗಬಟ್ಟ ತೆಗೆಯುವ ಮುಂದ
ಅಣ್ಣ ತಮ್ಮ ಅಳುವರಲ್ಲ || ದಾರಿ ||
ಆ ಮಣಿಯ ಈ ಮಣಿಯ
ಕೊಳ್ಳನ ಕರಿಮಣಿಯ
ಕರಿಮಣಿಯ ತೆಗೆಯುವ ಮುಂದ
ಎಲ್ಲಾ ಜನರು ಅಳುತ್ತಾರಲ್ಲ
ದಾರಿಯನೋಡಿದೆ ನಿಜಗುರುದೇವನ
ಪರಮಾತ್ಮನೆಂಬ ಪಟ್ಟಣದೊಳಗ್ಯಾರಿಲ್ಲ

(ಈ ಜನಪದ ಗೀತೆಯನ್ನು ಹಾಡಿದವರು ಶ್ರೀಮತಿ ಬಸಮ್ಮ ಲಕ್ಷ್ಮಣರಾವ್ ವೇಷ್ಯಾಗಾರ ಹುಣಸಗಿ ಮತ್ತು ಶ್ರೀಮತಿ ಕಮಲಮ್ಮ ಶಿವಣ್ಣ ವೇಷ್ಯಾಗಾರ ಹುಣಸಗಿ ತಾ. ಸುರುಪುರ ದಿನಾಂಕ ೨೪-೨-೨೦೦೬). (ಸಂದರ್ಶನ : ವೆಂಕನಗೌಡ, ೦೪.೨.೨೬; ಸರ್ದಾರ ಶರಣಗೌಡ ೨೩.೧೧.೨೦೦೬; ಪ್ರಜಾವಾಣಿ ೧೪.೦೩.೧೯೯೮ : ೮; ಸಂಯುಕ್ತ ಕರ್ನಾಟಕ, ೧೫.೦೯.೨೦೦೫ ; ಭಾಸ್ಕರರಾವ್ ಮೂಡಬೂಳರ ಲೇಖನ : ರಾಜನಕೋಳೂರಿನ ಮಹಾಬಲಿದಾನಿ ತರುಣ ವಿರುಪಾಕ್ಷಪ್ಪಗೌಡ).

## ೫.೧೨. ಶ್ರೀ ವೆಂಕನಗೌಡ ಮಾಲೀಪಾಟೀಲ್

ವೆಂಕನಗೌಡರು ರಾಜನಕೋಳೂರಿನಲ್ಲಿ ೧೯೨೯ರಲ್ಲಿ ಜನಿಸಿದರು. ರಾಜನಕೋಳೂರಿನಲ್ಲಿ ೪ನೇ ತರಗತಿಯವರೆಗೆ ಉರ್ದು ಮತ್ತು ಕನ್ನಡ ಭಾಷೆಯಲ್ಲಿ ಅಧ್ಯಯನ ಮಾಡಿದರು. ಮುಂದೆ ಕಲ್ಬುರ್ಗಿಯಲ್ಲಿ ನೂತನ ವಿದ್ಯಾಲಯದಲ್ಲಿ ಮೆಟ್ರಿಕ್‌ವರೆಗೆ ಓದಿದರು. ನೂತನ ವಿದ್ಯಾಲಯದ ಶಾಲೆಯಲ್ಲಿ ಓದುತ್ತಿದ್ದಾಗ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಕಡೆ ಒಲವಿತ್ತು. ಶಾಲೆಯಲ್ಲಿ ದಿನನಿತ್ಯ ಕವಾಯತು ಮಾಡುತ್ತಿದ್ದರು. ಹಾಗೂ ರಾಷ್ಟ್ರೀಯ ಗೀತೆಗಳನ್ನು ಹಾಡುತ್ತಿದ್ದರು. ಆರ‍್ಯ ಸಮಾಜದ ಸಭೆ, ಸಮ್ಮೇಳನಗಳಲ್ಲಿ ಭಾಗಿಯಾಗಿರುತ್ತಿದ್ದರಿಂದ ಆರ್ಯ ಸಮಾಜದ ಪ್ರಭಾವವೂ ಇವರ ಮೇಲಿತ್ತು. ಆರ್ಯ ಸಮಾಜದ ಕಾರ‍್ಯಕರ್ತರಾದ ಕಕ್ಕೇರಿ ಹಣಮಂತರಾಯರ ಪ್ರೇರಣೆಯಿಂದ, ರಾಷ್ಟ್ರೀಯ ಸ್ವಯಂ ಸೇವಕ ಸಂಘದಲ್ಲಿ ಸೇರಿ ದೇಶಸೇವೆ ಮಾಡಬೇಕೆಂಬ ಮನೋಬಯಕೆ ಮೂಡಿದುದರಿಂದ ತಮ್ಮ ೧೯-೨೦ ವಯಸ್ಸಿನಲ್ಲಿ ವಿಮೋಚನಾ ಚಳುವಳಿಯಲ್ಲಿ ಧುಮುಕಿದರು.



ಭಾರತ ದೇಶ ಸ್ವತಂತ್ರ್ಯವಾದ ಮೇಲೆ ತಿರಂಗಾಝುಂಡಾ ಕೈಯಲ್ಲಿ ಹಿಡಿದುಕೊಂಡು 'ಭಾರತ ಮಾತಾಕಿ ಜೈ' ಎಂಬ ಘೋಷಣೆಯೊಂದಿಗೆ ಗುಲ್ಬರ್ಗಾದ ನೂತನ ವಿದ್ಯಾಲಯದ ಶಾಲೆಯಿಂದ ಶರಣಬಸವೇಶ್ವರ ಗುಡಿಯವರೆಗೂ ಹೋಗಿ ಬಂದರು. ಇವರ ಈ ಕಾರ‍್ಯಚಟುವಟಿಕೆಗಳಿಂದ ಪೋಲೀಸರು ಇವರನ್ನು ಬಂಧಿಸಿ ಜೈಲಿಗೆ ಹಾಕಿದರು. ಅಂದಿನ ಸಂದರ್ಭದಲ್ಲಿ 'ಭಾರತ ಮಾತಾಕಿ ಜೈ' ಎಂದರೆ ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ಅದೊಂದು ಕುಕೃತ್ಯವೆಂಬ ಭಾವನೆ ನಿಜಾಂ ಅವರದಾಗಿತ್ತು. ಒಂದು ವಾರ ಜೈಲಿನಲ್ಲಿದ್ದರು ನಂತರ ಅವರನ್ನು ನ್ಯಾಯಾಲಯಕ್ಕೆ ಕರೆತಂದರು. ನ್ಯಾಯಾಧೀಶರು ಇವರೆಲ್ಲರಿಗೂ ತಿಳಿ ಹೇಳಿ ಮುಂದೆ ಹೀಗಾಗದಂತೆ ಎಚ್ಚರಿಕೆ ಕೊಟ್ಟು ಜೈಲಿನಿಂದ ಬಿಡುಗಡೆ ಮಾಡಿದರು. ನಂತರ ವೆಂಕನಗೌಡರು ಯಾದಗಿರಿಗೆ ಹೋದರು. ಅದೇ ಸಮಯಕ್ಕೆ ವಿರೂಪಾಕ್ಷಪ್ಪಗೌಡರು ಕೊನೆಯ ಬಿ.ಎ.ಓದುವುದನ್ನು ಬಿಟ್ಟು ಯಾದಗಿರಿಗೆ ಬಂದಿದ್ದರು. ಇಬ್ಬರು ಭೇಟಿಯಾದ ನಂತರ ಇಬ್ಬರೂ ರಾಜನಕೋಳೂರಿಗೆ ಬಂದರು. ಇವರು ನಡೆಸಿದ ಉಗ್ರ ಕಾರ‍್ಯಚಟುವಟಿಕೆಗಳಿಂದ ಮತ್ತೆ ಇವರನ್ನು ಬಂಧಿಸಲು ನಿಜಾಂ ಸರ್ಕಾರ ಮತ್ತೆ ವಾರಂಟ್ ಕಳಿಸಿತು. ಮರುದಿನ ಪೋಲೀಸರು ತಮ್ಮನ್ನು ಹಿಡಿಯಲು ಬರುತ್ತಾರೆಂಬ ಸುದ್ದಿ ತಿಳಿಯುತ್ತಲೇ ಊರನ್ನು ಬಿಟ್ಟು ಹೊಲಕ್ಕೆ ಹೋಗಿ ಅಲ್ಲಿ ಬೆಳೆಗಳ ನಡುವೆ ಅಡಗಿ ಕುಳಿತರು. ಪೋಲೀಸರು ವಾರಂಟಿನೊಂದಿಗೆ ರಾಜನಕೋಳೂರಿಗೆ ಬಂದು ಇವರಿಬ್ಬರ ಮನೆಗಳನ್ನು

ಶೋಧಿಸಿದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಇವರಿಬ್ಬರು ಬಿಳೇಭಾವಿಯ ಮೂಲಕ ತಾಳಿಕೋಟೆಗೆ ಹೋದರು. ತಾಳಿಕೋಟೆ ಮುಖ್ಯ ಶಿಬಿರವಾಗಿತ್ತು.

ಕೇವಲ ಭಾರತ ಸ್ವಾತಂತ್ರ್ಯವಾದರೆ ಸಾಲದು, ಹೈದ್ರಾಬಾದ್ ಸಂಸ್ಥಾನ ಕೂಡ ಭಾರತದೊಡನೆ ವಿಲೀನಗೊಂಡರೆ ಮಾತ್ರ ನಾವು ಸ್ವತಂತ್ರ್ಯವಾದಂತೆ ಎಂಬ ಮನೋಭಾವ ಹೊಂದಿದ್ದರು. "ಎಷ್ಟು ದಿನಗಳವರೆಗೆ ಈ ಗುಲಾಮಗಿರಿಯಲ್ಲಿರುವುದು ದೇಶಕ್ಕಾಗಿ ಹೋರಾಡೋಣ, ಮಡಿಯೋಣ" ಎಂಬ ಧೈರ್ಯದಿಂದ ನಿಜಾಂ ಅವರ ವಿರುದ್ಧ ಚಳುವಳಿ ಹೂಡಲು ತಾಳಿಕೋಟಿ ಶಿಬಿರದಲ್ಲಿ ಸೇರಿದರು. ಈ ಶಿಬಿರದಲ್ಲಿ ಸಂಗಪ್ಪ ಉದ್ದನ್ನ, ರಾಯಪ್ಪ ಮತ್ತು ವೆಂಕೋಬರಾವ್ ಪದಕಿ ಇದ್ದರು. ಖಾಸ್ಗತೇಶ್ವರ ಗುಡಿಯ ಹತ್ತಿರ ಒಂದು ರೂಮನ್ನು ೩ ರೂಪಾಯಿಗೆ ಬಾಡಿಗೆ ತೆಗೆದುಕೊಂಡರು. ಎಲ್ಲರು ಸೇರಿ ಆಲೋಚನೆ ಮಾಡಿ ಚರ್ಚಿಸಿ ನಿಜಾಂ ಅವರ ವಿರುದ್ಧ ಕೈಗೊಳ್ಳುವ ಕಾರ್ಯಚಟುವಟಿಕೆಗಳ ಯೋಜನೆಯನ್ನು ಹಾಕುತ್ತಿದ್ದರು.

ಒಟ್ಟಾರೆ ಹೈದ್ರಾಬಾದ್ ಸಂಸ್ಥಾನ ಭಾರತದೊಡನೇ ವಿಲೀನವಾಗುವತನಕ ಮನೆ ತಲುಪಬಾರದು ಎಂಬ ಆಸೆ ಹೊಂದಿದ್ದರು. ಗುಲಾಮಗಿರಿಯಿಂದ ಬಿಡುಗಡೆಯಾಗುವುದು. ನಿಜಾಂ ಸರ್ಕಾರದ ವಿರುದ್ಧ ಮತ್ತು ರಜಾಕಾರರ ವಿರುದ್ದ ಹೋರಾಡುವುದೇ ಇವರ ಉದ್ದೇಶವಾಗಿತ್ತು. ಶಿಬಿರದಲ್ಲಿ ಪ್ರತಿನಿತ್ಯ ಬೆಳಿಗ್ಗೆ ಎದ್ದು ಪರೇಡ ಮಾಡುವುದು, ವ್ಯಾಯಾಮ ಮಾಡುವುದು ನಂತರ ಬಂದೂಕನ್ನು ಹೇಗೆ ಚಲಾಯಿಸಬೇಕೆಂದು ಚಂದ್ರಗುಪ್ತ ಗುರೂಜಿ ಮತ್ತು ಅಪ್ಪಾರಾವ ವಕೀಲರು ತರಬೇತಿ ನೀಡುತ್ತಿದ್ದರು. ಚಂದ್ರಗುಪ್ತ ಗುರೂಜಿಯವರು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗಿಯಾಗಿದ್ದರು. ಇವರು ಬಿಜವಾಡದಲ್ಲಿ ಬಂದೂಕನ್ನು ಚಲಾಯಿಸುವ ತರಬೇತಿ ಪಡೆದುಕೊಂಡು ಬಂದಿದ್ದರು. ಶಿಬಿರಾರ್ಥಿಗಳಿಗೆ ಶಸ್ತ್ರಾಸ್ತ್ರಗಳನ್ನು ಹೇಗೆ ಚಲಾಯಿಸಬೇಕು, ಬಾಂಬನ್ನು ಹೇಗೆ ಉಪಯೋಗಿಸಬೇಕು ಎನ್ನುವುದರ ಕುರಿತು ಸುಮಾರು ೭ ತಿಂಗಳವರೆಗೆ ತರಬೇತಿ ನೀಡಿದ್ದರು. ಆರ್ಥಿಕ ಬಿಕ್ಕಟ್ಟಿನ ಸಮಯದಲ್ಲಿ ವಿರುಪಾಕ್ಷಪ್ಪಗೌಡ ಮತ್ತು ವೆಂಕನಗೌಡರು ತಾಳಿಕೋಟೆಯ ಅಡತಿ ಅಂಗಡಿಯ ಮಾಲೀಕರಾದ ರೇವಣಪ್ಪ ಸಗರ ಅವರಿಂದ ಕ್ರಮವಾಗಿ ೮೦೦೦ ರೂ, ೫೦೦೦ ರೂ ಕೈಗಡ ತೆಗೆದುಕೊಂಡು. ಅದೇ ಹಣದಿಂದ ಕೆಲದಿವಸಗಳವರೆಗೆ ಶಿಬಿರ ನಡೆಸಿದರು.

ಸರ್ದಾರ ಶರಣಗೌಡರು ತಾಳಿಕೋಟೆ ಶಿಬಿರಕ್ಕೆ ಬಂದು ಅಲ್ಲಿದ್ದವರ ಸಭೆ ಕರೆದು ಯೋಜನೆಗಳನ್ನು ತಯಾರಿಸಿ ಕೊಡುತ್ತಿದ್ದರು. ಅಲ್ಲದೆ ಕೊಲ್ಲೂರು ಮಲ್ಲಪ್ಪ ಮತ್ತು ಡಾ.ಕಂಠಿಯವರು ಮುಖ್ಯ ಕಚೇರಿ ಗದಗದಿಂದ ಬಂದು ಇವರಿಗೆ ಕೆಲವು ನಿಜಾಂ ಅವರ ವಿರುದ್ಧ ಕಾರ್ಯ ಯೋಜನೆಗಳ ಬಗ್ಗೆ ಮಾಹಿತಿ ನೀಡುತ್ತಿದ್ದರು.

ವೆಂಕನಗೌಡರು ಯಾವುದೇ ಶಿಬಿರಗಳ ನಾಯಕರಾಗಿರದೇ ಶಿಬಿರಾರ್ಥಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಶಿಬಿರಾಧಿಪತಿಯ ಮಾತನ್ನು ಯಾರು ಮೀರುವಂತಿರಲಿಲ್ಲ. ಭಾರತ ಸ್ವತಂತ್ರ್ಯವಾದಾಗ ಧ್ವಜಗಳನ್ನು ಎಲ್ಲಿಯೂ ಹಾರಿಸುವಂತಿರಲಿಲ್ಲ. ಇಷ್ಟೆಲ್ಲ ನಿರ್ಬಂಧಗಳಿದ್ದರೂ ಅವೆಲ್ಲವನ್ನು ಮೀರಿ ಇವರು ಮೊಟ್ಟ ಮೊದಲು ಗುಳಬಾಳದಲ್ಲಿ ಧ್ವಜ ಹಾರಿಸಿದರು. ತೀರ್ಥ ಎಂಬ ಪ್ರದೇಶದಲ್ಲಿ ಹೆಂಡದ ಅಂಗಡಿಗೆ ಬೆಂಕಿಯಿಟ್ಟರು ಮತ್ತು ರಾಜನಕೋಳೂರಿನಲ್ಲಿ ಗೌಡ, ಕುಲ್ಕರ್ಣಿಯವರ ದಫ್ತರಗಳನ್ನು ಸುಟ್ಟರು. ಕರೋಡಗಿರಿ ನಾಕಾದ ಮೇಲೆ ಮುತ್ತಿಗೆ ಹಾಕಿದರು. ಅಲ್ಲಿಂದ ಎಣ್ಣೆವಡಗೇರಾಕ್ಕೆ ಬಂದು, ಅಲ್ಲಿ ಒಬ್ಬ ಮುಸ್ಲಿಂ ಮತಾಂದನು ರಜಾಕಾರರಿಗೆ ರಹಸ್ಯವಾಗಿ ಇವರ ಚಲನವಲನ ಮತ್ತು ಕಾರ್ಯ ಯೋಜನೆಗಳ ಬಗ್ಗೆ ಮಾಹಿತಿ ನೀಡುತ್ತಿದ್ದನು. ಆ ವಿಷಯ ವೆಂಕನಗೌಡರಿಗೆ ಗೊತ್ತಾಗಿ ಅವನನ್ನು ಕೊಲೆ ಮಾಡಿ ಅವನ್ನಲ್ಲಿದ್ದ ಒಂಟೆ, ಕುದುರೆಗಳನ್ನು ತೆಗೆದುಕೊಂಡು ಹೋಗಿ ಕೊಡೇಕಲ್ ಸಂತಿಯಲ್ಲಿ ಮಾರಿ ಹಣ ಪಡೆದರು. ಅಲ್ಲಿಂದ ಹಗರಟಿಗೆಗೆ ಬಂದು, ಕುಪ್ಪಿ ಹನುಮಂತರಾಯ, ಸಲಗುಂದಿ ಮಲಕಣ್ಣ, ಗುರುಬಸಪ್ಪಗೌಡರ ಜೊತೆಗೂಡಿ ಹಗರಟಿಗೆಯ ಪೊಲೀಸ್ ಠಾಣೆಗೆ ಮುತ್ತಿಗೆ ಹಾಕಿ ಕೈಬಾಂಬನ್ನು ಬಳಸಿದರು. ಕಚೇರಿಯಲ್ಲಿರುವ ಸಾಮಾನು ಮತ್ತು ಕುಲಕರ್ಣಿಯವರ ಹತ್ತಿರವಿದ್ದ ಹಫ್ತ ಹಣವನ್ನು ದೋಚಿಕೊಂಡು ಬೆಳಗಾಗುವುದರೊಳಗಾಗಿ ತಾಳಿಕೋಟೆ ಶಿಬಿರವನ್ನು ತಲುಪಿದರು.

ಮುಂದೆ ವೆಂಕನಗೌಡರು ತಾಳಿಕೋಟೆಯಿಂದ ನಾಗರಬೆಟ್ಟ ಶಿಬಿರಕ್ಕೆ ಹೋದರು. ವಿರುಪಾಕ್ಷಪ್ಪಗೌಡ, ಬಸವಂತ್ರಾಯಗೌಡ ಮತ್ತು ಮಹಾಂತಪ್ಪ ಕೂಡಿ ಬಂಟನೂರ ಶಿಬಿರಕ್ಕೆ ಹೋದರು. ತಾಳಿಕೋಟೆ, ಬಂಟನೂರು ಮತ್ತು ನಾಗರಬೆಟ್ಟಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದ ಉದ್ದೇಶವೇನೆಂದರೆ ಅದು ಭಾರತಕ್ಕೊಳಪಟ್ಟ ಸ್ವತಂತ್ರ ಪ್ರದೇಶವಾಗಿತ್ತು. ಇವರ ರಕ್ಷಣೆಗಾಗಿ ಭಾರತ ಸರ್ಕಾರದ ಮಿಲಿಟರಿ ಇರುತ್ತಿತ್ತು. ಈ ಶಿಬಿರಗಳ ಸುತ್ತಲಿನ ಹಳ್ಳಿಗಳು ವಿಮೋಚನಾ ಹೋರಾಟಗಾರರ ನಿಯಂತ್ರಣಕ್ಕೊಳಪಟ್ಟವು. ಹೈದ್ರಾಬಾದ ನಿಜಾಂ ಅವರ ಆಡಳಿತಕ್ಕೊಳಪಟ್ಟ ಗಡಿನಾಡಿನ ಜನರು ಹೆಚ್ಚಾಗಿ ಊರು ಬಿಟ್ಟು ಗಡಿಯಾಚೆಯ ಹಳ್ಳಿಗಳಿಗೆ ಹೋಗಿ ನೆಲೆಸಿದುದು ಹೈದ್ರಾಬಾದ್ ಕರ್ನಾಟಕ ಸ್ವಾತಂತ್ರ್ಯವಾಗುವುದೋ ಇಲ್ಲವೋ? ಅದು ಎಂದು ಸ್ವತಂತ್ರವಾಗುವುದು? ಎನ್ನುವ ಕುತೂಹಲ ಎಲ್ಲರಲ್ಲಿ ಮೂಡಿತ್ತು.

೧೯೪೮ ಸೆಪ್ಟೆಂಬರ್ ೧೭ಕ್ಕೆ ಹೈದ್ರಾಬಾದ್ ಕರ್ನಾಟಕ ವಿಮೋಚನೆಗೊಂಡಾಗ ದಿ.೨೪ಕ್ಕೆ ಎಲ್ಲ ಹೋರಾಟಗಾರರು ಸುರಪುರಕ್ಕೆ ಬಂದರು. ಇವರೆಲ್ಲರೂ ಹಳ್ಳಿ ಹಳ್ಳಿಗೆ ಹೋಗಿ ಜನರಿಗೆ ಧೈರ್ಯ ಹೇಳಿ ನಾವು ಸ್ವತಂತ್ರ್ಯರಾಗಿದ್ದೇವೆ ನಿಜಾಂ ಅವರು ಶರಣಾಗತರಾಗಿದ್ದಾರೆ. ರಜಾಕಾರರು ಊರು ಬಿಟ್ಟು ಓಡಿಹೋಗಿದ್ದಾರೆ. ನಮ್ಮ ಕೈಯಲ್ಲಿ ನಮ್ಮ ಆಡಳಿತ ಬಂದಿದೆ. ಏನಾದರೂ ನಿಮಗೆ ತೊಂದರೆಯಾದರೆ ನಮ್ಮನ್ನು ಕಂಡು ಪರಿಹರಿಸಿಕೊಳ್ಳಿರೆಂದು ಹೇಳಿದರು. ಊರು ಬಿಟ್ಟು ಹೋದವರನ್ನೆಲ್ಲಾ ಕರೆಸಿದರು.

೧೯೮೫ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಹೈದ್ರಾಬಾದ್ ಕರ್ನಾಟಕ ವಿಮೋಚನಾ ಚಳುವಳಿಯಲ್ಲಿ ಭಾಗಿಗಳಾದವರಿಗೆ ಮಾಶಾಸನ ನೀಡಲು ಆದೇಶ ಮಾಡಿದರು. ರಾಜ್ಯದಿಂದ ಇವರಿಗೆ ಮಾಶಾಸನ ಬರುತ್ತದೆ. ಆದರೆ ಕೇಂದ್ರದಿಂದ ಇನ್ನು ಮಾಶಾಸನ ಪ್ರಾರಂಭವಾಗಿಲ್ಲ. ಅನೇಕ ಕಾರ್ಯಕ್ರಮಗಳಲ್ಲಿ ಇವರನ್ನು ಕರೆದು ಸನ್ಮಾನ ಮಾಡಿದ್ದಾರೆ. ಹೋರಾಟದ ದಿನಗಳ ನೆನಪನ್ನು ನೆನಪಿಸಿದರೆ ಅವರಿಗೆ ಒಂದು ತರಹದ ಆವೇಶ, ಸ್ಫೂರ್ತಿ, ಹುಮ್ಮಸ್ಸು ಬಂದಂತಾಗುವುದು ಈ ಮೇಲಿನ ಎಲ್ಲ ಮಾಹಿತಿಯನ್ನು ಸಂದರ್ಶನದ ಮೂಲಕ ಕಲೆಹಾಕಲಾಗಿದೆ (ಸಂದರ್ಶನ : ವೆಂಕನಗೌಡ ೦೪.೦೨.೨೦೦೬, ೨೭.೦೨.೨೦೦೬; ಸಂಗಪ್ಪ ಉದ್ದನ್ನ ೦೮.೦೨.೨೦೦೬; ಮಹಾದೇವಪ್ಪ ಹೂಗಾರ, ೦೬.೦೨.೨೦೦೬).

## ೫.೧೩. ಶ್ರೀ ತಿಮ್ಮಯ್ಯ ದರಬಾರಿ

ತಿಮ್ಮಯ್ಯ ದರಬಾರಿಯವರು ಕೂಡ ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಇವರು ಅನಕ್ಷರಸ್ಥರಾಗಿದ್ದು, ಕೇವಲ ಸಹಿ ಮಾಡುವುದನ್ನು ಮಾತ್ರ ಕಲಿತಿದ್ದರು. ಸುರಪುರ ದೊರೆಗಳ ಮನೆತನದ ಜೊತೆ ನಾಲ್ಕು ತಲೆಮಾರುಗಳಿಂದ ಸಂಪರ್ಕವನ್ನಿಟ್ಟುಕೊಂಡಿದ್ದರಿಂದ ಇವರ ಮನೆತನದ ಅಡ್ಡ ಹೆಸರು ದರಬಾರಿ ಎಂಬ ಹೆಸರು ಬಂದಿತು.



ಕಲಬುರ್ಗಿಯಿಂದ ಆರ್ಯ ಸಮಾಜದ ಮುಖಂಡರು ಆಗಾಗ ಸುರಪುರಕ್ಕೆ ಬಂದು ವೆಂಕಟಪ್ಪನಾಯಕರ ಮನೆಯಲ್ಲಿ ಆರ್ಯ ಸಮಾಜದ ಸಭೆ ನಡೆಸುತ್ತಿದ್ದರು ಅಲ್ಲಿ ದೇಶಾಭಿಮಾನ, ಸ್ವಾತಂತ್ರ್ಯದ ಕಲ್ಪನೆ, ಹಿಂದುಗಳೆಲ್ಲಾ ಒಂದು ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡುತ್ತಿದ್ದರು ಎಂದು ಸ್ವತಃ ತಿಮ್ಮಯ್ಯನವರೆ ಹೇಳಿದ್ದಾರೆ. ಇದು ತಿಮ್ಮಯ್ಯನವರ ಮನಸ್ಸಿನ ಮೇಲೆ ಸ್ವಲ್ಪ ಪ್ರಭಾವ ಬೀರಿತು. ಸುರಪುರದ ವಿಮೋಚನಾ ಹೋರಾಟದಲ್ಲಿ ಆರ್ಯ ಸಮಾಜ ಮತ್ತು ರಾಜ್ಯ ಕಾಂಗ್ರೆಸ್ ಪ್ರಮುಖ ಪಾತ್ರ ವಹಿಸಿವೆ.

ಭಾರತದ ಸ್ವತಂತ್ರವಾದ ನಂತರ ಅನೇಕರು ಸಂತೋಷದಿಂದ ಒಂದೆಡೆ ಸೇರಿ ರಮಣಪ್ಪನಾಯಕನ ಕಟ್ಟೆಯ ಮೇಲೆ ರಾಜಾ ವೆಂಕಟಪ್ಪ ನಾಯಕರ ನೇತೃತ್ವದಲ್ಲಿ ತ್ರಿವರ್ಣ ಧ್ವಜವನ್ನು ಹಾರಿಸಿದರು. ಈ ಎಲ್ಲ ಕೆಲಸವನ್ನು ಪೋಲೀಸರ ಕಣ್ಣುತಪ್ಪಿಸಿ ಮಾಡುತ್ತಿದ್ದರು. ಒಂದು ವೇಳೆ ಪೋಲೀಸರ ಎದುರಿಗೆ ಮಾಡಿದ್ದರೆ ಪೋಲೀಸರು ಇವರನ್ನು ಸೆರೆಮನೆಗೆ ತಳ್ಳುತ್ತಿದ್ದರು. ಮಹಾನವಮಿ ಹಬ್ಬದ ಸಂದರ್ಭದಲ್ಲಿ ಜನರೆಲ್ಲರು ತಮ್ಮಲ್ಲಿರುವ ಶಸ್ತ್ರಾಸ್ತ್ರಗಳನ್ನು ಒಂದೇ ಸ್ಥಳದಲ್ಲಿಟ್ಟು ಪೂಜೆ ಮಾಡಿದ್ದರು. ಈ ವಿಷಯ ತಿಳಿದ ಕೆಲವು ಮುಸ್ಲಿಂ ಮತಾಂಧರು ಪೋಲೀಸರಿಗೆ ಸುದ್ದಿ ತಿಳಿಸಿದರು. ಪೊಲೀಸರು ಬಂದು ಈ ಎಲ್ಲಾ ಸಾಮಾನುಗಳನ್ನು ತೆಗೆದುಕೊಂಡು ಹೋಗಿದ್ದರು.

ಭಾರತ ಸ್ವಾತಂತ್ರ್ಯವಾದಾಗ ಸುರಪುರ ಪ್ರದೇಶದ ಪರಿಸ್ಥಿತಿಯು ಗಂಭೀರವಾಗಿತ್ತು. ಏಕೆಂದರೆ ಯಾವ ಹೊತ್ತಿಗೆ ಏನಾಗುತ್ತದೆ ಎಂಬುದು ಗೊತ್ತಿರಲಿಲ್ಲ. ಸುರಪುರದಲ್ಲಿ ವೇಣುಗೋಪಾಲಸ್ವಾಮಿಯ ಜಾತ್ರೆಯಿತ್ತು. ಈ ಜಾತ್ರೆ ನಡೆಸಬಾರದೆಂದು ನಿಜಾಂ ಸರ್ಕಾರ ಆದೇಶ ನೀಡಿತ್ತು. ಸುರಪುರದ ಅಮೀನಸಾಬರು ಕೂಡ ರಾಜಾ ವೆಂಕಟಪ್ಪನಾಯಕರಿಗೆ ಮೇಲಿಂದ ಬಂದ ಆದೇಶ ಕೊಟ್ಟರು. ಯಥಾ ರೀತಿ ಜಾತ್ರೆ ನಡೆಯಿತು. ಈ ಕಾರಣದಿಂದ ನಿಜಾಂ ಸರ್ಕಾರ ರಾಜಾ ವೆಂಕಟಪ್ಪನಾಯಕರನ್ನು ಹಿಡಿಯಲು ಆದೇಶ ಹೊರಡಿಸಿ ಅವರನ್ನು ಹಿಡಿದು ಕೊಟ್ಟವರಿಗೆ ೨೫೦೦೦ ರೂ. ಬಹುಮಾನ ಕೊಡುವುದಾಗಿ

ಘೋಷಣೆ ಮಾಡಿತು. ಆದರೆ ಅಮೀನಸಾಬನು ರಾಜಾ ವೆಂಕಟಪ್ಪನಾಯಕರ ಮೇಲೆ ತುಂಬಾ ಗೌರವ ಇಟ್ಟಿದ್ದರಿಂದ ಅವರನ್ನು ಬ್ರಿಟಿಷ್ ಪ್ರದೇಶದ ಕಡೆ ಹೋಗಲು ತಿಳಿಸಿದರು. ರಾಜಾ ವೆಂಕಟಪ್ಪನಾಯಕರನ್ನು ಹೇಗೆ ಬಂಧಿಸಬೇಕು ಎನ್ನುವ ವಿಚಾರದಲ್ಲಿದ್ದಾಗ ಒಂದು ವಿಷಯ ಅವರಿಗೆ ಹೊಳೆಯಿತು. ಅವರಿಗೆ ಹತ್ತಿರದ ವ್ಯಕ್ತಿಯೆಂದರೆ ತಿಮ್ಮಣ್ಣದರಬಾರಿ. ಅವರನ್ನು ಕರೆದು ನಿಮ್ಮ ರಾಜಾ ವೆಂಕಟಪ್ಪನಾಯಕರಿಗೆ ಬಂಧನದ ವಾರಂಟ್ ಬಂದಿದೆ. ಅವರನ್ನು ನಾನು ಬಂಧಿಸುವಂತಿಲ್ಲ. ನಿಮಗೊಂದು ಪತ್ರ ಕೊಡುವೆನು ಅದನ್ನು ನೀವು ಓದದೇ ಅವರಿಗೆ ಕೊಡಬೇಕೆಂದು ಹೇಳಿದರು. ಯಾವಾಗಲೂ ರಾಜಮನೆತನದೊಡನೆ ನಿಕಟ ಸಂಪರ್ಕವಿಟ್ಟುಕೊಂಡ ಇವರು ಒಡೆಯನಿಗೆ ಬಂಧನ ವಾರಂಟ್ ಹೊರಡಿಸಿದರಲ್ಲಾ ಎಂದುಕೊಂಡು ಹೇಗಾದರೂ ಮಾಡಿ ಅವರ ಬಂಧನವಾಗದಂತೆ ತಡೆಯಲು ತಾಳಿಕೋಟೆಗೆ ಹೋಗಿ ರಾಜಾ ವೆಂಕಟಪ್ಪನಾಯಕರಿಗೆ ಪತ್ರ ತಲುಪಿಸಿದರು.

ತಿಮ್ಮಯ್ಯ ದರಬಾರಿ ತಾಳಿಕೋಟೆ ಶಿಬಿರದ ಕಾರ್ಯಕರ್ತರಾಗಿ ಕಾರ್ಯನಿರ್ವಹಿಸಿದರು. ಮುಸ್ಲಿಂರು ಹಿಂದುಗಳಿಗೇನಾದರೂ ಬಯ್ದರೆ, ಹೊಡೆದರೆ, ದೌರ್ಜನ್ಯ ಎಸಗಿದರೆ ಯಾರೂ ಏನನ್ನು ಅನ್ನಬಾರದು ತಾಳ್ಮೆಯಿಂದಿರಬೇಕೆಂದು ರಾಜಾ ವೆಂಕಟಪ್ಪನಾಯಕರು ಶಿಬಿರಾರ್ಥಿಗಳಿಗೆ ಕಟ್ಟಾ ಆದೇಶ ನೀಡಿದರು. ನಾಗರಬೆಟ್ಟ, ಬಂಟನೂರ, ಸಾಲವಾಡಗಿ ಮತ್ತು ತಾಳಿಕೋಟೆ ಈ ಶಿಬಿರಗಳು ಇವರು ಕೆಲಸ ಮಾಡುವ ಕಾರ್ಯಕ್ಷೇತ್ರಗಳಾಗಿದ್ದವು. ಎಲ್ಲಾದರೂ ಏನಾದರೂ ಗಲಾಟೆಯಾದರೆ ತಕ್ಷಣ ಅಲ್ಲಿಗೆ ಹೋಗಿ ಜನರನ್ನು ರಕ್ಷಿಸುವ ಕೆಲಸ ಇವರದಾಗಿತ್ತು. ತಿಮ್ಮಯ್ಯನವರು ರಾಜಾ ವೆಂಕಟಪ್ಪನಾಯಕರ ಅಂಗರಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ.

ಒಮ್ಮೆ ಎಣ್ಣೆ ವಡಗೇರಿಯಲ್ಲಿ ರಜಾಕಾರರು ಹಿಂದೂಗಳ ಮನೆಯವರ ಮನೆಯಲ್ಲಿ ಆಶ್ರಯ ಪಡೆದಿದ್ದರು. ಈ ಮಾಹಿತಿಯನ್ನು ತಿಳಿದುಕೊಂಡು ಶಿಬಿರದ ಜನ ರಜಾಕಾರರನ್ನು ಹಿಡಿಯಲು ಹೊರಟರು. ಇವರನ್ನು ನೋಡಿದ ರಜಾಕಾರರು ಇವರ ಮೇಲೆ ಗುಂಡಿನ ಮಳೆಗರೆದರು. ಶಿಬಿರಾರ್ಥಿಗಳ ಮತ್ತು ರಜಾಕಾರರ ನಡುವೆ ಗುಂಡಿನ ಚಕಮಕಿ ನಡೆಯಿತು. ಈ ಘರ್ಷಣೆಯಲ್ಲಿ ರಜಾಕಾರರಲ್ಲಿ ಇಬ್ಬರು ಸತ್ತರು ಇದನ್ನು ನೋಡಿ ಉಳಿದ ರಜಾಕಾರರು ಹೆದರಿ ಓಡಿಹೋದರು. ನಂತರ ಶಿಬಿರಾರ್ಥಿಗಳು ರಜಾಕಾರರಿಗೆ ಆಶ್ರಯ ನೀಡಿದ್ದ ಹಿಂದೂ ಮನೆಗೆ ಪ್ರವೇಶಿಸಿ ಅವರಿಗೆ ಧೈರ್ಯ ಹೇಳಿ ಅವರ ಮನೆಯಲ್ಲಿದ್ದ ೨ ಒಂಟೆಗಳು, ೧ ಕುದುರೆ ಮತ್ತು ಕೆಲವು ಕುರಿಗಳನ್ನು ತೆಗೆದುಕೊಂಡು ಹೋಗಿ ಸಂತೆಯಲ್ಲಿ ಮಾರಾಟ ಮಾಡಿದರು. ಈ ಘಟನೆಯಲ್ಲಿ ಭಾಗಿಯಾಗಿದ್ದ ತಿಮ್ಮಯ್ಯನವರು ಮಾಹಿತಿ ನೀಡಿದ್ದಾರೆ.

ರಾಜಾ ವೆಂಕಟಪ್ಪನಾಯಕರು, ಅಪ್ಪಾರಾವ ವಕೀಲರು, ವಿರುಪಾಕ್ಷಪ್ಪಗೌಡರು, ವೆಂಕನಗೌಡರು, ಉದ್ದನ್ನ ಸಂಗಪ್ಪ ಮತ್ತು ಜಿ.ಸುಬ್ಬಯ್ಯ ಇವರೆಲ್ಲರು ಶಿಬಿರದ ಪ್ರಮುಖರು. ಇವರು ಹಳ್ಳಿಗಳಲ್ಲಿ

ತಿರುಗಾಡಿ ಸುದ್ದಿ ಸಂಗ್ರಹಿಸಿ ಅದನ್ನು ಶಿಬಿರದ ನಾಯಕರಿಗೆ ಕೊಡುತ್ತಿದ್ದರು. ಬಂಟನೂರು, ನಾಗರಬೆಟ್ಟ ಊರಿನ ಸುತ್ತಮುತ್ತಲಿನ ಹಳ್ಳಿಗಳನ್ನು ರಜಾಕಾರರಿಂದ ಸ್ವತಂತ್ರಗೊಳಿಸಿ ಇಲ್ಲಿ ಸ್ವತಂತ್ರ್ಯ ಆಡಳಿತ ನಡೆಸಿದರು.

ಆರ್ಯ ಸಮಾಜ ಹಾಗೂ "ರಾಜ್ಯ ಕಾಂಗ್ರೆಸ್" ಸಭೆಗಳು ಆಗಾಗ ನಡೆಯುತ್ತಿದ್ದವು. ತಿಮ್ಮಯ್ಯನವರು ಪ್ರತಿ ಕಾರ್ಯಕ್ರಮಗಳಲ್ಲಿ ಭಾಗಿಗಳಾಗುತ್ತಿದ್ದರು. ಬೆಂಗಳೂರಿನಿಂದ ಮತ್ತು ದಿಲ್ಲಿಯಿಂದ ಕೆಲವು ಹಿರಿಯರು ತಾಳಿಕೋಟೆ ಶಿಬಿರಗಳಿಗೆ ಭೇಟಿ ನೀಡಿ ಯೋಗಕ್ಷೇಮ ವಿಚಾರಿಸಿ ಇವರಿಗೆ ಬೇಕಾಗುವ ಸೌಲಭ್ಯಗಳನ್ನು ಒದಗಿಸುತ್ತಿದ್ದರು. ಹೋರಾಟದಲ್ಲಿ ಇವರ ನಾಯಕರು ರಾಜಾ ವೆಂಕಟಪ್ಪ ನಾಯಕರು ಮತ್ತು ಅಪ್ಪಾರಾವ್ ವಕೀಲರಾಗಿದ್ದರು. ಡಾ.ಜಿ.ಸುಬ್ಬಯ್ಯ, ಹಣಮಂತರಾಯ ದರಬಾರಿ, ಅಚ್ಚಪ್ಪಗೌಡ ಸಗರ, ವೆಂಕನಗೌಡ ಪಾಟೀಲ್, ವಿರುಪಾಕ್ಷಪ್ಪಗೌಡರು ಇವರ ಸಂಗಡಿಗರಾಗಿದ್ದರು. ಈ ವಿಮೋಚನಾ ಹೋರಾಟದಲ್ಲಿ ಇವರ ಮನೆಯವರು ಕೂಡಾ ಸಹಕಾರ ನೀಡಿದ್ದಾರೆ. ಹೈದರಾಬಾದ್ ವಿಮೋಚನೆ ಯಾಗುವುದು ಇನ್ನು ಎರಡು ದಿನವಿತ್ತು. ತಿಮ್ಮಯ್ಯನವರು ಸುರಪುರದ ಸ್ಥಿತಿಗತಿಯನ್ನು ತಿಳಿದುಕೊಂಡು ಹೋಗಲು ತಾಳಿಕೋಟೆಯಿಂದ ಕೋಳ್ಯಾಳ ಸುಭೇದಾರನ ಕುದುರೆಯೇರಿ ಸುರಪುರಕ್ಕೆ ಪ್ರವೇಶಿಸಿದರು. ಸುರಪುರದ ವಿಷಯವನ್ನು ತಿಳಿದುಕೊಂಡು ವಾಪಸ್ಸು ಹೊರಟು ಹೋದರು. ಹೈದರಾಬಾದ್ ವಿಮೋಚನೆಯ ನಂತರ ರಾಜಾ ವೆಂಕಟಪ್ಪನಾಯಕರ ನಾಯಕತ್ವದಲ್ಲಿ ಎಲ್ಲರೂ ಸುರಪುರ ಪ್ರವೇಶ ಮಾಡಿದರು. ನಿಜಾಂ ಪೊಲೀಸರು ಮತ್ತು ರಜಾಕಾರರು ಸುರಪುರದಿಂದ ಪಲಾಯನ ಮಾಡಿದರು.

ಹೈದರಾಬಾದ್ ಸಂಸ್ಥಾನ ಭಾರತದಲ್ಲಿ ವಿಲೀನವಾದ ಮೇಲೆ ಹಲವಾರು ವರ್ಷಗಳ ಗುಲಾಮಗಿರಿಯ ಜೀವನದಿಂದ ಮುಕ್ತರಾಗಿ ಸ್ವಾತಂತ್ರ್ಯ ಹೊಂದಿದೆಯಲ್ಲಾ ಎಂದು ತಿಮ್ಮಯ್ಯನವರು ಖುಷಿಯಾದರು. ಇವರು ಕೈಗೊಂಡ ಉದ್ದೇಶ ಸಫಲವಾಯಿತೆಂಬ ಮನಸ್ಸಿನ ಇಚ್ಛೆ ಪೂರ್ತಿಗೊಂಡಿತು ಎಂದು ಹೇಳಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಹಿಂದೂ-ಮುಸ್ಲಿಂರಲ್ಲಿ ಸಾಮರಸ್ಯವಿಲ್ಲ, ಇವರೆಲ್ಲರು ಪರಸ್ಪರ ಸಾಮರಸ್ಯದಿಂದ ಜೀವನ ಸಾಗಿಸಿದಾಗ ಈ ಹೋರಾಟಕ್ಕೊಂದು ಅರ್ಥ ಸಿಗುತ್ತದೆ ಎಂದಿದ್ದಾರೆ. ಇವರು ಕೇಂದ್ರ ಸರ್ಕಾರದಿಂದ ಪಿಂಚಣಿ ಸೌಲಭ್ಯವನ್ನು ಹೊಂದಿದ್ದಾರೆ. ಈ ಪ್ರದೇಶವನ್ನು ವಿಮೋಚನೆಗೊಳಿಸಬೇಕೆಂಬ ತಮ್ಮ ಆಸೆ ಈಡೇರಿತು. ಇದಕ್ಕಾಗಿ ರಜಾಕಾರರಿಂದ ಅಪಾರ ಹಾನಿಯನ್ನು ಅನುಭವಿಸಿದ ಇವರು ಈ ಪ್ರದೇಶದ ಸ್ವಾತಂತ್ರ್ಯದಿಂದ ಅದೆಲ್ಲವನ್ನು ಮರೆತಿದ್ದಾರೆ (ಸಂದರ್ಶನ : ತಿಮ್ಮಯ್ಯ ದರಬಾರಿ, ೫-೨-೨೦೦೬, ೨೫-೨-೨೦೦೬).

## ೫.೧೪. ಮಹಾದೇವಪ್ಪ ಹೂಗಾರ

ಮಹಾದೇವಪ್ಪನವರು ಮೂಲತಃ ಸುರಪುರ ತಾಲೂಕಿನ ಹೆಮನೂರಿನವರು. ಸುರಪುರದಲ್ಲಿ ಇವರು ಉರ್ದು ಮಾಧ್ಯಮದಲ್ಲಿ ೫ನೇ ತರಗತಿಯವರೆಗೆ ಓದಿದರು. ಒಂದು ಪೇಪರು ಕನ್ನಡವಿತ್ತು. ಶಾಲೆಯಲ್ಲಿ ಹಿಂದೂ-ಮುಸ್ಲಿಂ ವಿದ್ಯಾರ್ಥಿಗಳು ಕೂಡಿಯೇ ಕಲಿಯುತ್ತಿದ್ದರು. ಸಣ್ಣಪುಟ್ಟ ಕಾರಣಕ್ಕಾಗಿ ಆಗಾಗ ಹಿಂದೂ-ಮುಸ್ಲಿಂ ವಿದ್ಯಾರ್ಥಿಗಳ ನಡುವೆ ಜಗಳಗಳಾಗುತ್ತಿದ್ದವು. "ವ್ಯರ್ಥವಾಗಿ ಹಿಂದೂ ವಿದ್ಯಾರ್ಥಿಗಳಿಗೆ ಬಯ್ಯುವುದು, ಹೊಡೆಯುವುದನ್ನು ಶಿಕ್ಷಕರು ಮಾಡುತ್ತಿದ್ದರು ಇದಲ್ಲದೇ ಹಿಂದೂಗಳನ್ನು ಹೀನಾಯವಾಗಿ ಕಾಣುತ್ತಿದ್ದರು" ಎಂದು ಸ್ವತಃ ಮಹಾದೇವಪ್ಪನವರು ತಮ್ಮ ವಿದ್ಯಾರ್ಥಿ ಜೀವನದ ಅನುಭವವನ್ನು ತಿಳಿಸಿದ್ದಾರೆ.



೧೯೪೨ರಲ್ಲಿ ಸುರಪುರದಲ್ಲಿ ಅಣ್ಣಾರಾವ ಗುಣಮುಖಿಯವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನ ಜರುಗಿತು. ಮಹಾದೇವಪ್ಪನವರು ಆ ಅಧಿವೇಶನದಲ್ಲಿ ಭಾಗಿಯಾಗಿದ್ದರು. ಭಾರತ ಸ್ವಾತಂತ್ರ್ಯ ಪೂರ್ವ ಅಂದರೆ ೧೫ ಆಗಸ್ಟ್ ೧೯೪೭ರ ಪೂರ್ವದಲ್ಲಿ ವಿದ್ಯಾರ್ಥಿಗಳು ಸತ್ಯಾಗ್ರಹ ನಡೆಸಿದರು. ಶಾಲೆಯ ಪಕ್ಕದಲ್ಲಿ ಪೋಲೀಸ ಕಛೇರಿಯಿತ್ತು. ಸತ್ಯಾಗ್ರಹ ನಡೆಸಿದ್ದಕ್ಕಾಗಿ ಪೊಲೀಸರು ವಿದ್ಯಾರ್ಥಿಗಳಿಗೆ ಹೊಡೆದರು. ಸುರಪುರದಲ್ಲಿ ಕೆಲವು ಹಿಂದೂಗಳನ್ನು ಮುಸ್ಲಿಂ ಧರ್ಮಕ್ಕೆ ಮತಾಂತರ ಮಾಡಿದಾಗ ಈ ಮತಾಂತರವಾದ ಜನರಿಂದಲೇ ಕಿರುಕುಳ ಹೆಚ್ಚಾಯಿತು ಎಂದು ಮಹಾದೇವಪ್ಪ ಹೂಗಾರರು ಹೇಳಿದ್ದಾರೆ.

೧೫ ಅಗಸ್ಟ್ ೧೯೪೭ ರಂದು ಭಾರತ ಸ್ವಾತಂತ್ರ್ಯದ ದಿನದಂದು ಮಹಾದೇವಪ್ಪನವರು ಮುದ್ನೂರಿಗೆ ಹೋಗಿ ಅಲ್ಲಿ ತ್ರಿವರ್ಣ ಧ್ವಜ ಹಾರಿಸಿದರು. ಇವರು ಗಿಡ ಏರಿ ಧ್ವಜ ಹಾರಿಸುವಾಗ ಕೆಳಗೆ ಬಿದ್ದು ಗಾಯಮಾಡಿಕೊಂಡಿದ್ದರು. "ಹಿಂದೂಗಳಲ್ಲಿ ಆಗ ಒಗ್ಗಟ್ಟು ಇರಲಿಲ್ಲ. ಮಂದಿರಗಳ ಮೇಲೆ ದಾಳಿ ಮಾಡಿ ಮುಸ್ಲಿಂರು ಹಿಂದೂಗಳ ಮನಸ್ಸಿಗೆ ನೋವುಂಟು ಮಾಡುತ್ತಿದ್ದರು" ಎಂದು ಮಹಾದೇವಪ್ಪ ಹೂಗಾರರು ಸಂದರ್ಶನದಲ್ಲಿ ತಿಳಿಸಿದ್ದಾರೆ. "೧೯೪೭ರಲ್ಲಿ ಸ್ವಾತಂತ್ರ್ಯ ಸಿಕ್ಕ ಮೇಲೆ ರಜಾಕಾರರು ದೋರನಹಳ್ಳಿ ಊರನ್ನು ಸುಟ್ಟರು. ಕೆಲವು ಹಿಂದೂಗಳು ಜೀವ ಉಳಿಸಿಕೊಳ್ಳಲು ಬಣಿವೆಗಳಲ್ಲಿ ಅಡಗಿ ಕುಳಿತರು. ಅಬ್ದುಲ್ ಖಾದರ ಎನ್ನುವವರು ಸುರಪುರದ ಮುಸ್ಲಿಂ ಮುಖಂಡರು ಜನತೆಗೆ ಬೇಕಾಗುವ ಎಲ್ಲಾ ಸಾಮಾನುಗಳನ್ನು ತನ್ನ ರೇಶನ ಅಂಗಡಿಯಿಂದಲೇ ಪೂರೈಕೆ ಮಾಡುತ್ತಿದ್ದರು. ಹಿಂದೂಗಳು ಹೆಚ್ಚು ಹಣಕೊಟ್ಟರೂ ವಸ್ತುಗಳು ಸಮರ್ಪಕವಾಗಿ ಸಿಗುವಂತಿರಲಿಲ್ಲ" ಎನ್ನುವ ಹೂಗಾರ ಅವರು ಮುಸ್ಲಿಂರ ಕಾರ್ಯಚಟುವಟಿಕೆ ಗಳಿಂದ ಬೇಸತ್ತು ಅವರ ವಿರುದ್ಧ ಸಂಘಟನೆ ಮಾಡಿ ಸತ್ಯಾಗ್ರಹ ಹೂಡಿ ಈ ಚಳುವಳಿ ಕೈಗೊಳ್ಳಲು ಈ ಮೇಲಿನ ಎಲ್ಲಾ ಅಂಶಗಳು ಕಾರಣವಾದವು.

ಆರ್ಯ ಸಮಾಜದವರು ಆಗಾಗ್ಗೆ ಕಲಬುರ್ಗಿಯಿಂದ ಸುರಪುರದಲ್ಲಿ ಸಭೆ ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ಆ ಸಭೆ ಸಮಾರಂಭಗಳಲ್ಲಿ "ಭಾರತವಾಸಿಗಳಾದ ನಾವೆಲ್ಲ ಒಂದು, ಎಲ್ಲರ ಜಾತಿ ಮಾನವ ಜಾತಿಯಾಗಿದೆ ಎಂಬ ತತ್ವ ಆರ್ಯ ಸಮಾಜದಲ್ಲಿ ಅಡಗಿತ್ತು ಎಂದು ಸಂದರ್ಶನದಲ್ಲಿ ಹೇಳಿದ್ದಾರೆ. ಮಹಾದೇವಪ್ಪನವರು ತಾಳಿಕೋಟೆ ಶಿಬಿರದಲ್ಲಿದ್ದಾಗ ಇವರ ಜೊತೆಗೆ ೪೦-೫೦ ಜನ ಶಿಬಿರಾರ್ಥಿಗಳಿದ್ದರು. ಈ ಶಿಬಿರದಲ್ಲಿ ೩ ವರ್ಗದ ಜನರಿದ್ದರು. ಅವರೆಂದರೆ

೧. ಹಳ್ಳಿ ಹಳ್ಳಿಗೆ ಹೋಗಿ ಅಲ್ಲಿಯ ವಿಷಯಗಳನ್ನು ತಿಳಿಕೊಂಡು ಬರುವ ಜನ.

೨. ರಜಾಕಾರರು ನಡೆಸುವ ಕಾರ್ಯಚಟುವಟಿಕೆಗಳಿಗೆ ಪ್ರತಿಯಾಗಿ ಅದನ್ನು ಪ್ರತಿಭಟಿಸುವ ಜನ.

೩. ಅಡುಗೆ ಹಾಗೂ ಸಾಮಾನುಗಳನ್ನು ತರುವ ಮತ್ತು ಒಯ್ಯುವ ಜನ.

ಮಹಾದೇವಪ್ಪ ಹೂಗಾರರ ತಾಯಿಯು ಮಗನ ಈ ಹೋರಾಟದಲ್ಲಿ ಸಹಕಾರ ನೀಡಿದ್ದಾರೆ. ಅವರು ತಮ್ಮ ಮಗನಿಗೆ ಈ ಹೋರಾಟದಲ್ಲಿ ನೀನು ನಿಜಾಂ ಅವರ ವಿರುದ್ಧ "ಹೋರಾಟ ಮಾಡಿ ಬಾ, ಇಲ್ಲವೆ ಮಡಿದು ಬಾ" ಎಂದು ಹೇಳುತ್ತಿದ್ದರು. ಈ ಒಂದು ಹೇಳಿಕೆ ಅವರು ಈ ಹೋರಾಟದಲ್ಲಿ ಧುಮಕಲು ಪ್ರೇರಣೆ ನೀಡಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಹೀಗೆ ಹೇಳುತ್ತಿದ್ದ ತಾಯಂದಿರ ಸಂಖ್ಯೆ ಈಗ ಕಡಿಮೆ.

ಮಹಾದೇವಪ್ಪನವರು ಇತರ ಶಿಬಿರಾರ್ಥಿಗಳೊಡನೆ ರಜಾಕಾರರ ಜೊತೆ ಕುರುಬನತಳ್ಳಿ, ಹೂವಿನ ಹಳ್ಳಿಗಳಲ್ಲಿ ಹೋರಾಡಿದರು. ಬೈಚಬಾಳದಲ್ಲಿ ರಜಾಕಾರರ ತಂಡವಿತ್ತು. ಕೆಲವು ಹಿಂದೂಗಳು ರಜಾಕಾರರ ಪರವಾಗಿದ್ದರು. ಇವರ ಜೊತೆ ಅಪ್ಪಾರಾವ್ ವಕೀಲ, ಸಂಗಪ್ಪ ಉದ್ದನ್ನ, ದರ್ಜಿಬಸ್ಸಣ್ಣ, ವೆಂಕನಗೌಡ, ತಿಮ್ಮಣ್ಣ ದರಬಾರಿ ಮತ್ತು ವಿರುಪಾಕ್ಷಪ್ಪಗೌಡ ಹೀಗೆ ಅನೇಕ ಕಾರ್ಯಕರ್ತರಿದ್ದರು. ಶಿಬಿರದಲ್ಲಿದ್ದವರಿಗೆ ೮ ದಿನಕ್ಕೊಮ್ಮೆ ೪ ಆಣೆ ನೀಡುತ್ತಿದ್ದರು. ಅದರಲ್ಲಿ ಅವರು ಜೀವನಾವಶ್ಯಕ ವಸ್ತುಗಳನ್ನು ಕೊಳ್ಳುತ್ತಿದ್ದರು. ಹೋರಾಟದಲ್ಲಿ ತಮ್ಮ ಕಡೆಯವರಿಗೆ ಏನಾದರೂ ಆದರೆ ಅವರನ್ನು ಅಲ್ಲೆ ಬಿಟ್ಟು ಹೋಗುತ್ತಿದ್ದರು. ಏಕೆಂದರೆ ಪಠಾಣರ, ಅರಬರ ಮತ್ತು ರೋಹಿಲ್ಲರ ಕೈಯಲ್ಲಿ ಸಿಗಬಾರದೆನ್ನುವುದಕ್ಕೆ ಒಂದು ಸಲ ರಾಜಾ ವೆಂಕಟಪ್ಪನಾಯಕ ಮತ್ತು ಅಪ್ಪಾರಾವರು ಕೂಡಿಕೊಂಡು ದಿಲ್ಲಿಗೆ ಹೋದರು. ಅಲ್ಲಿ ಸರ್ದಾರ ವಲ್ಲಭಭಾಯಿ ಪಟೇಲರನ್ನು ಕಂಡು ತಮಗೆ ಈ ನಿಟ್ಟಿನಲ್ಲಿ ಬೇಕಾಗುವ ಶಸ್ತ್ರಾಸ್ತ್ರಗಳನ್ನು ಹಾಗೂ ಪೊಲೀಸ ರಕ್ಷಣೆಯನ್ನು ಕೊಡಬೇಕೆಂದು ಕೇಳಿದಾಗ ಪಟೇಲರು ಇದಕ್ಕೆ ಒಪ್ಪಿದರು. ಈ ಶಿಬಿರದ ಕಾರ್ಯಕರ್ತರು ರಜಾಕಾರರೊಂದಿಗೆ ಹೋರಾಡಿ ಆ ಹೋರಾಟದಲ್ಲಿ ರಜಾಕಾರರು ಸೋತು ಪಲಾಯನ ಮಾಡಿದಾಗ ಈ ಹೋರಾಟಗಾರರು ಆ ಹಳ್ಳಿಯನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತಿದ್ದರು. ಈ ಹೋರಾಟದಲ್ಲಿ ಮುದ್ನೂರಿನ ಸುತ್ತಲಿನ ಕೆಲವು ಹಳ್ಳಿಗಳು ಇವರ

ಸ್ವಾಧೀನಕ್ಕೆ ಬಂದವು. ರಜಾಕಾರರೂ ಕೂಡ ಅಂತಹ ಹೇಳಿಕೊಳ್ಳುವಂತಹ ಧೈರ್ಯವುಳ್ಳವರಾಗಿರಲಿಲ್ಲ. ಬೀದಿಗಳಲ್ಲಿ ರಜಾಕಾರರು 'ನೆಹರಾಯೇ ತಕದೀರ ಅಲ್ಲಾ ಹೋ ಅಕ್ಬರ್' ಎಂದು ಘೋಷಣೆಗಳನ್ನು ಕೂಗುತ್ತಾ ಹೋಗುತ್ತಿದ್ದರು. ಎಲ್ಲ ಕಡೆ ರಜಾಕಾರರದೇ ಪ್ರಭಾವವಿತ್ತು.

೧೩ ಸೆಪ್ಟೆಂಬರ್ ೧೯೪೮ ರಂದು 'ಪೊಲೀಸ್ ಕಾರ್ಯಚರಣೆ'ಯ ನಿಜಾಂ ಸೈನ್ಯದ ವಿರುದ್ಧ ಆರಂಭವಾಯಿತು. ಪೋಲೀಸ್ ಕಾರ್ಯಾಚರಣೆಯು ಯಶಸ್ವಿಯಾಗಿದ್ದರಿಂದ ನಿಜಾಂ ಅವರು ಮತ್ತು ರಜಾಕಾರರು ಭಾರತದ ಸೈನ್ಯಕ್ಕೆ ಶರಣಾಗತರಾದರು. ೧೯೪೮ ಸೆಪ್ಟೆಂಬರ್ ೧೮ ರಂದು ಹೈದರಾಬಾದ್ ಸಂಸ್ಥಾನ ವಿಮೋಚನೆ ಹೊಂದಿ ಭಾರತ ದೇಶದೊಂದಿಗೆ ವಿಲೀನವಾಯಿತು. ಹೈದರಾಬಾದ್ ಸಂಸ್ಥಾನದಲ್ಲಿರುವ ಪ್ರಾಂತ್ಯಗಳು ಸ್ವತಂತ್ರವಾದವು. ರಜಾಕಾರರು ಶರಣಾದ ನಂತರ ಎಲ್ಲ ಪ್ರದೇಶಗಳ ಜನರು ಸಮಾಧಾನದ ನಿಟ್ಟುಸಿರು ಬಿಟ್ಟರು. ತಿಮ್ಮಯ್ಯ ದರಬಾರಿಯವರು ಸುರಪುರದ ವಿಷಯವನ್ನು ತಿಳಿದುಕೊಂಡು ಬಂದು ಶಿಬಿರದ ನಾಯಕರಾದ ರಾಜಾ ವೆಂಕಟಪ್ಪನಾಯಕರಿಗೆ ತಿಳಿಸಿದರು. ನಂತರ ಎಲ್ಲರು ಒಂದು ಒಳ್ಳೆಯ ಮೂಹೂರ್ತದಲ್ಲಿ ಸುರಪುರವನ್ನು ಪ್ರವೇಶಿಸಿದರು. ಜನರು ಈ ಹೋರಾಟಗಾರರನ್ನು ಅತ್ಯಂತ ಆದರಾಭಿಮಾನದಿಂದ ಸ್ವಾಗತಿಸಿದರು.

ಹೋರಾಟದಲ್ಲಿ ಹೆಚ್ಚಿನ ಜನರು ಉನ್ನತ ವರ್ಗದ ಜನರಿದ್ದರು. ಕೆಳವರ್ಗದ ಜನರು ಒಬ್ಬರು ಇಲ್ಲವೇ ಇಬ್ಬರೂ ಇದ್ದರು. ಏಕೆಂದರೆ ಕೆಳವರ್ಗದ ಜನರು ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿ ರಜಾಕಾರರ ಪರವಾಗಿ ಕಾರ್ಯನಿರ್ವಹಿಸುತ್ತಿದ್ದರು. ರಜಾಕಾರರ ಕಾರ್ಯ ಚಟುವಟಿಕೆಗಳು ಉನ್ನತ ವರ್ಗದ ಜನರಿಗೆ ಕಿರಿಕಿರಿಯನ್ನುಂಟು ಮಾಡಿದ್ದವು. ಸಾಮಾಜಿಕ ಸಂಬಂಧಕ್ಕೆ ಸಂಬಂಧಿಸಿದಂತೆ ಮೇಲ್ವರ್ಗದ ಜನ ಮತ್ತು ಕೆಳವರ್ಗದ ಜನರ ನಡುವೆ ಸಾಮರಸ್ಯವಿತ್ತು. ಕೆಳವರ್ಗದ ಜನರನ್ನು ಸುಧಾರಿಸಲು ಮೇಲ್ವರ್ಗದ ಜನರು ಕೂಡ ಯತ್ನಿಸುತ್ತಿದ್ದರು.

ನಿಜಾಂ ಸರ್ಕಾರ ಭಾರತದಲ್ಲಿ ವಿಲೀನಗೊಂಡ ಮೇಲೆ ಸ್ವಾತಂತ್ರ್ಯ ಹೋರಾಟಗಾರರಿಗೆ ಸರ್ಕಾರ ಪಿಂಚಣಿ ಮಂಜೂರು ಮಾಡಿತು. ಆದರೆ ಇವರು ಸರ್ಕಾರದ ಯಾವ ಸೌಲಭ್ಯವನ್ನು ಪಡೆಯಲಿಲ್ಲ. ಪಿಂಚಣಿ ಯಾಕೆ ತೆಗೆದುಕೊಳ್ಳುತ್ತಿಲ್ಲ ಅಂದರೆ ದೇವರು ನನಗೆ ಯಾವ ರೀತಿಯ ಕೊರತೆ ಮಾಡಿಲ್ಲ ಎಂದು ಹೇಳುತ್ತಾರೆ. ನಮ್ಮ ಉದ್ದೇಶ ಹೈದರಾಬಾದ್ ನಿಜಾಂ ಅವರಿಂದ ನಾವು ಬಿಡುಗಡೆಯಾಗಬೇಕಿತ್ತು ಬಿಡುಗಡೆಯಾದೆವು ಅಷ್ಟೇ ಖುಷಿ. ಇದಕ್ಕಿಂತ ಹೆಚ್ಚಿನದೇನು ಇಲ್ಲ. ನಮ್ಮ ಭಾಗ್ಯದ ಮುಂದೆ ಯಾರ ಭಾಗ್ಯವು ಇಲ್ಲ ಎಂದು ಮಹಾದೇವಪ್ಪ ಹೂಗಾರರು ಹೇಳಿದ್ದಾರೆ (ಸಂದರ್ಶನ : ಮಹಾದೇವಪ್ಪ ಹೂಗಾರ ೦೬.೦೨.೨೦೦೬, ೨೭.೦೨.೨೦೦೬; ತಿಮ್ಮಯ್ಯ ದರಬಾರಿ ೦೫.೦೨.೨೦೦೬).

## ೫.೧೫. ಶ್ರೀಸಂಗಪ್ಪ ಉದ್ದನ

ಸಂಗಪ್ಪನವರು ೧೯೧೭ರಲ್ಲಿ ಕೊಡೇಕಲ್‌ನಲ್ಲಿ ಜನಿಸಿದರು. ಇವರು ೪ನೇ ತರಗತಿಯವರೆಗೆ ಉರ್ದುವಿನಲ್ಲಿ ಓದಿರುವುದರ ಜೊತೆಗೆ ಕನ್ನಡ ಬಾಲಬೋಧೆ ಓದಿದ್ದರು. ಜೀವ ಹೋದರು ಪರಿವೆಯಿಲ್ಲ, ರಜಾಕಾರರಿಂದ ಹೈದ್ರಾಬಾದ್ ರಾಜ್ಯವನ್ನು ಬಿಡುಗಡೆ ಮಾಡಿ ಭಾರತದ ಒಕ್ಕೂಟದಲ್ಲಿ ಸೇರಿಸುವ ಮನೋಭಾವ ಹೊಂದಿದ್ದರು. ಭಾರತದ ಸ್ವಾತಂತ್ರ್ಯದ ಜೊತೆಗೆ ಹೈದ್ರಾಬಾದ್ ವಿಮೋಚನೆಯಿಂದ ಸ್ವತಂತ್ರವಾಗುವುದು ಎಂಬ ಉದ್ದೇಶ ಹೊಂದಿದ್ದರು. “ಗುಲಾಮಗಿರಿ ಜೀವನ, ಜೀವನವಲ್ಲ, ಮನುಷ್ಯನಾದ ಮೇಲೆ ಜೀವನದಲ್ಲಿ ಏನಾದರೂ ಒಂದು ಗುರಿಯನ್ನು ಸಾಧಿಸಬೇಕೆನ್ನುವ ಛಲ” ಇವರಲ್ಲಿತ್ತು.



ಭಾರತ ಸ್ವಾತಂತ್ರ್ಯವಾದ ಮೇಲೆ ಮೊಟ್ಟ ಮೊದಲು ಈ ಪ್ರದೇಶದಲ್ಲಿ ಭಾರತದ ತಿರಂಗಾ ಝುಂಡಾವನ್ನು ಕೊಡೇಕಲ್ಲಿನ ಪ್ಯಾಟಿ ಗುಡಿ ಮೇಲೆ ಇವರೇ ಹಾರಿಸಿದರು. ಧ್ವಜವನ್ನು ಹಾರಿಸಿದ್ದಕ್ಕಾಗಿ ಜಹಂಗೀರ ಎನ್ನುವವನು ಇವರಿಗೆ ಬಯ್ದನು. ಅದನ್ನು ತಾಳದೇ ನೀನೇನು ಮಾಡುತ್ತೀಯಾ ಮಾಡು, ನಾನು ಮಾಡಬೇಕಾದುದನ್ನು ಮಾಡುತ್ತೇನೆಂದು ಹೇಳಿ ಅವನ ತಲೆಯ ಮೇಲೆ ಸಂಗಪ್ಪನವರು ಕಲ್ಲು ಹಾಕಿದರೆಂದು ಸಂದರ್ಶನದಲ್ಲಿ ಹೇಳಿದ್ದಾರೆ. ನಂತರ ಅಲ್ಲೇ ಎತ್ತರವಿರುವ ಬಸರಿಗಿಡದ ಮೇಲೆಯೂ ಕೂಡ ಧ್ವಜವನ್ನು ಹಾರಿಸಿದರು. ಆ ಧ್ವಜವನ್ನು ಯಾರೂ ಇಳಿಸಲಿಲ್ಲ. ತಾನಾಗಿಯೇ ಕಾಲಾಂತರದಲ್ಲಿ ಮಾಸಿ ಹೋಯಿತು.

ಸ್ವಪ್ರೇರಣೆಯಿಂದಲೇ ತಾಳಿಕೋಟೆ ಶಿಬಿರಕ್ಕೆ ಹೋಗಿ ಸೇರಿದರು. ಮುಂದೆ ಈ ಶಿಬಿರದಲ್ಲಿ ವಿರುಪಾಕ್ಷಪ್ಪಗೌಡ, ವೆಂಕನಗೌಡರೂ ಬಂದು ಸೇರಿದರು. ಶಿಬಿರದಲ್ಲಿ ಶಿಬಿರಾರ್ಥಿಗಳ ಸಂಖ್ಯೆ ದಿನದಿನಕ್ಕೂ ಹೆಚ್ಚಾಯಿತು. ರಾಜಾ ವೆಂಕಟಪ್ಪ ನಾಯಕರು ಶಿಬಿರದಲ್ಲಿ ಕುಳಿತು ಯೋಜನೆ ಹಾಕಿಕೊಡುತ್ತಿದ್ದರು. ಅದನ್ನು ಅಪ್ಪಾರಾವರು ಶಿಬಿರಾರ್ಥಿಗಳಿಂದ ಕಾರ್ಯರೂಪಕ್ಕೆ ತರುತ್ತಿದ್ದರು. ಅಪ್ಪಾರಾವ ವಕೀಲರು ಇವರ ಜೊತೆ ಹಳ್ಳಿ ಹಳ್ಳಿಗಳಲ್ಲಿ ಸುತ್ತಾಡಿ ಜನರಿಗೆ ಧೈರ್ಯ ಹೇಳಿ ನಾವು ರಕ್ಷಣೆಗೆ ಇರುತ್ತೇವೆಂದು ಹೇಳುತ್ತಿದ್ದರು. ರಜಾಕಾರರ ಕಡೆಗೆಯಿದ್ದ ಇಲ್ಲಿಯವರ ಹೆಸರು ಕೇಳಿ ಅವರಿಗೆ ಸರಿಯಾಗಿ ಬುದ್ಧಿ ಕಲಿಸುತ್ತಿದ್ದರು.

ಮಾರಲಭಾವಿ, ತೀರ್ಥ ಮತ್ತು ಹಗರಟಗಿ ಕರೋಡಗಿರಿ ನಾಕಾಗಳ ಮೇಲೆ ಮತ್ತು ಹೆಂಡದ ಅಂಗಡಿಗಳ ಮೇಲೆ ದಾಳಿ ಮಾಡಿ ಕಟ್ಟಡಗಳಿಗೆ ಬೆಂಕಿ ಹಚ್ಚಿದರು. ಅಗ್ನಿ, ಅರಕೇರಿಗಳಲ್ಲಿ ಕುಲಕರ್ಣಿಯವರು ವಸೂಲಿ ಮಾಡಿದ ಹಫ್ತೆ ಹಣವನ್ನು ತಿಜೋರಿಯಲ್ಲಿಟ್ಟಿದ್ದರು. ಅನಾಮತು ಕೆಲವರು ಕೂಡಿ

ತಿಜೋರಿಯನ್ನು ಹೊತ್ತು ತಂದರು. ಅನ್ಯಾಯ ಕಂಡರೆ ಸಹಿಸುತ್ತಿರಲಿಲ್ಲ. ಕೆಲವು ಕಡೆ ತಾನೇ ಕೈಯೆತ್ತಿ ಹೊಡೆದುದುಂಟು. ಸಾಲವಾಡಗಿಯಲ್ಲಿ ಚಂದ್ರಗುಪ್ತ ಗುರೂಜಿ ಮತ್ತು ಅಪ್ಪಾರಾವ್ ವಕೀಲರು ಕೂಡಿ ಬಂದೂಕು ಚಲಾಯಿಸುವ ತರಬೇತಿಯನ್ನು ನೀಡಿದರು. ಹೋರಾಟಗಾರರು ರಜಾಕಾರರೊಡನೆ ಮುಖಾಮುಖಿ ಹೋರಾಟ ನಡೆಸಿ ರಜಾಕಾರರನ್ನು ಚಾಣಾಕ್ಷತನದಿಂದ ಕೊಲೆ ಮಾಡಿ ಓಡಿ ಹೋಗುತ್ತಿದ್ದರು. ಹಗರಟಗಿಯಲ್ಲಿ ರಜಾಕಾರರಿಗೂ ಇವರಿಗೂ ಘರ್ಷಣೆ ನಡೆಯಿತು. ರಜಾಕಾರರು. ೩೦-೪೦ ಜನ ಇದ್ದರು. ಸಂಗಪ್ಪ ಅವರು ಒಂದು ಕೈಬಾಂಬನ್ನು ಅವರ ಮೇಲೆ ಎಸೆದು ಕುಲ್ಕರ್ಣಿಯವರ ಸಜ್ಜೆ ಬೆಳೆಯಲ್ಲಿ ಅಡಗಿ ಕುಳಿತರು. ಹೀಗೆ ಅನೇಕ ಕ್ರಾಂತಿಕಾರಕ ಹೋರಾಟವನ್ನು ಮಾಡಿದ್ದಾರೆ.

ನಂತರ ನಾಗರಬೆಟ್ಟ ಮತ್ತು ಬಂಟನೂರ ಶಿಬಿರಗಳಿಗೆ ಹೋದರು. ಈ ಎರಡು ಶಿಬಿರಗಳು ಭಾರತ ಯುನಿಯನ್ ಪ್ರದೇಶದ ಮಧ್ಯಭಾಗದಲ್ಲಿದ್ದುದರಿಂದ ರಜಾಕಾರರ ಮತ್ತು ನಿಜಾಮನ ಸೈನ್ಯದ ಅಂಜಿಕೆ ಇರಲಿಲ್ಲ. ಈ ಶಿಬಿರಗಳಿಗೆ ಸಂಬಂಧಪಟ್ಟ ಗ್ರಾಮಗಳ ಹಫ್ತೆಯನ್ನು ವಸೂಲಿ ಮಾಡಿ ಶಿಬಿರಗಳ ಖರ್ಚಿಗೆ ಉಪಯೋಗ ಮಾಡಿಕೊಳ್ಳುತ್ತಿದ್ದರು. ಹಫ್ತೆ ವಸೂಲಿಯ ಬಗ್ಗೆ ಯಾವುದೇ ತರನಾದ ಲೆಕ್ಕಪತ್ರಗಳನ್ನು ಇವರು ಇಟ್ಟಿಲ್ಲ. ಈ ಶಿಬಿರಗಳಿಗೆ ಆಗಾಗ ಮುಂಬೈ ಕರ್ನಾಟಕದ ಅಧಿಕಾರಿಗಳು ಬಂದು ಮೇಲ್ವಿಚಾರಣೆ ಮಾಡಿಕೊಂಡು ಹೋಗುತ್ತಿದ್ದರು. ಇವರ ಉಗ್ರ ಹೋರಾಟದ ಫಲವಾಗಿ ಇವರ ಮೇಲೆ ನಿಜಾಂ ಸರ್ಕಾರದಿಂದ ವಾರಂಟ್ ಬಂದಿತು. ಆ ಸಮಯದಲ್ಲಿ ಅತಿ ಎಚ್ಚರಿಕೆ ವಹಿಸಿದ ಇವರು ಪೊಲೀಸರಿಗೆ ಹಾಗೂ ರಜಾಕಾರರ ಕೈಗೆ ಸಿಗದೆ ತಪ್ಪಿಸಿಕೊಂಡರು.

ಒಮ್ಮೆ ರಜಾಕಾರರು ಕೊಡೇಕಲ್ಲಿನ ಮಠದಲ್ಲಿದ್ದ ಹೊತ್ತಿಗೆಯನ್ನೊಯ್ದರು. ಅವರ ಶೋಧ ನಡೆಯಿತು. ಆ ಹೊತ್ತಿಗೆ ಹೈದ್ರಾಬಾದಿನ ರಜಾಕಾರರೊಬ್ಬರ ಹತ್ತಿರ ಈ ಹೊತ್ತಿಗೆಯಿತ್ತು. ಇವರು ಹೋಗಿ ಆ ಹೊತ್ತಿಗೆಯನ್ನು ಅವರಿಂದ ತೆಗೆದುಕೊಂಡು ಬಂದು ಪುನಃ ಮಠದಲ್ಲಿಟ್ಟರು.

ಇವರಿಗೆ ಈಗ ರಾಜ್ಯದಿಂದ ೧೫೦೦ ರೂ, ಕೇಂದ್ರದಿಂದ ೬೦೦೦ ರೂ. ಮಾಶಾಸನಗಳು ಸಿಗುತ್ತವೆ. ಶುಭ್ರ ಖಾದಿಧಾರಿಗಳಾದ ಇವರು ಕಾಂಗ್ರೆಸ್ಸಿನಲ್ಲಿ ಸೇರಿಕೊಂಡು ಅನೇಕ ಅಧಿವೇಶನಗಳಲ್ಲಿ ಭಾಗಿಯಾಗಿದ್ದಾರೆ. ಒಮ್ಮೆ ಹರಿಜನರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾದಾಗ ಅವರನ್ನು ಪುನಃ ಹಿಂದೂಗಳನ್ನಾಗಿ ಮಾಡಿದರು. ಸದ್ಯ ಇವರಿಗೆ ೮೭ ವರುಷ. ಅವರಿಗೆ ಹೋರಾಟದ ನೆನಪು ಇನ್ನು ನೆನಪಿನಂಗಳದಲ್ಲಿ ಹಚ್ಚಹಸಿರಾಗಿಯೇ ಉಳಿದಿದೆ. ಈ ಮೇಲಿನ ಎಲ್ಲ ಮಾಹಿತಿಯನ್ನು ಸಂದರ್ಶನ ಮೂಲಕ ಕಲೆ ಹಾಕಲಾಗಿದೆ (ಸಂದರ್ಶನ : ಸಂಗಪ್ಪ ಉದ್ದನ್ನ ೦೮.೦೨.೨೦೦೬).

ಈ ಹೋರಾಟಗಾರರಲ್ಲದೆ ಇನ್ನು ಅನೇಕ ಜನ ಹೋರಾಟಗಾರರು ದಾಖಲೆಗೆ ಸೇರದೆ ಹೊರಗುಳಿದಿದ್ದಾರೆ. ಅಂತಹವರಲ್ಲಿ ಮಹಾಂತಪ್ಪಗೌಡ, ಬಸವಂತರಾಯಗೌಡ, ನಿಂಗಣ್ಣರೊಟ್ನಡಗಿ,

ಅಚ್ಚಪ್ಪಗೌಡ ಮತ್ತು ಹಣಮಂತರಾಯ ದರಬಾರಿ ಮುಂತಾದವರು ಸುರಪುರ ವಿಮೋಚನಾ ಹೋರಾಟದಲ್ಲಿ ಭಾಗಿಯಾಗುವುದರ ಮೂಲಕ ಈ ಪ್ರದೇಶವನ್ನು ನಿಜಾಂ ಅವರ ಆಳ್ವಿಕೆಯಿಂದ ಮುಕ್ತಗೊಳಿಸಿದ್ದಾರೆ. ಇವರ ಬಗ್ಗೆ ನಿಖರವಾದ ಮಾಹಿತಿಗಳು ದೊರಕದ ಕಾರಣ ಪ್ರಸ್ತುತ ಅಧ್ಯಾಯದಲ್ಲಿ ಕೇವಲ ಇವರ ಹೆಸರು ಉಲ್ಲೇಖವಾಗಿವೆಯೇ ಹೊರತು ಎಲ್ಲೂ ವಿವರವಾದ ಮಾಹಿತಿಯಿಲ್ಲಿ. ಮಹಾಂತಪ್ಪಗೌಡರು ವಿರುಪಾಕ್ಷಗೌಡರ ಬಲಗೈ ಬಂಟರಾಗಿದ್ದರು. ವಿರುಪಾಕ್ಷಪ್ಪಗೌಡರ ಪ್ರತಿಯೊಂದು ಕಾರ್ಯಚಟುವಟಿಕೆಯಲ್ಲೂ ಮಹಾಂತಪ್ಪಗೌಡರು ಇರುವುದು ಸಂದರ್ಶನಗಳಿಂದ ತಿಳಿದುಬಂದಿದೆ. ಮಹಾಂತಪ್ಪಗೌಡ ಮತ್ತು ಬಸವಂತರಾಯಗೌಡ ಇವರಿಬ್ಬರು ಸುರಪುರ ತಾಲೂಕಿನ ಹಗರಟಗಿಯವರು. ಇವರು ತಾಳಿಕೋಟೆ ಶಿಬಿರ, ಬಂಟನೂರ ಮತ್ತು ಸಾಲವಾಡಗಿ ಶಿಬಿರಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಹಣಮಂತರಾಯ ದರಬಾರಿಯವರು ತಿಮ್ಮಯ್ಯ ದರಬಾರಿಯವರ ಸಹೋದರರಾಗಿದ್ದಾರೆ. ಇವರು ಕೂಡಾ ತಾಳಿಕೋಟೆ ಶಿಬಿರದಲ್ಲಿ ಕಾರ್ಯ ನಿರ್ವಹಿಸಿದವರು. ಈ ಹೋರಾಟಗಾರರ ಬಗ್ಗೆ ಮಾಹಿತಿ ದೊರೆತಿಲ್ಲ. ತಿಳಿದವರು ಇವರ ಮಾಹಿತಿ ನೀಡಿದರೆ ಇವರನ್ನು ಕೂಡಾ ದಾಖಲೆಗೆ ಸೇರಿಸಲು ಸಾಧ್ಯವಾಗುತ್ತದೆ.

ಸುರಪುರ ಪ್ರದೇಶಕ್ಕೆ ಸಂಬಂಧಿಸಿದ 'ವಿಮೋಚನಾ' ಹೋರಾಟದ ವಿವಿಧ ಘಟ್ಟಗಳನ್ನು ಅಭ್ಯಾಸ ಮಾಡಿ ಅವುಗಳ ಮಾಹಿತಿಗಳನ್ನು ಒಂದೆಡೆ ಕಲೆ ಹಾಕಿ ಈಗಾಗಲೇ ಪ್ರಚಲಿತವಿರುವ 'ಒಪ್ಪಿಕೊಳ್ಳಲಾದ' ಚರಿತ್ರೆಯನ್ನು ಅಲ್ಲಲ್ಲಿ ವಿಮರ್ಶಿಸುವ ಪ್ರಯತ್ನವನ್ನು ಪ್ರಸ್ತುತ ನಿಬಂಧದುದ್ದಕ್ಕೂ ಮಾಡಲಾಗಿದೆ. ಲಭ್ಯವಿರುವ ಪ್ರಕಟಿತ, ಅಪ್ರಕಟಿತ ಮಾಹಿತಿಗಳನ್ನು ಮತ್ತು ಈ ಹೋರಾಟದಲ್ಲಿ ಪಾಲ್ಗೊಂಡ ಬದುಕುಳಿದ ಹೋರಾಟಗಾರರ ಸಂದರ್ಶನಗಳ ಮೂಲಕ ಅನೇಕ ವಿವರಗಳನ್ನು ಕಲೆ ಹಾಕಲಾಗಿದೆ.

ಹೈದರಾಬಾದ ಕರ್ನಾಟಕಕ್ಕೆ ಸಂಬಂಧಿಸಿದಂತೆ ಪ್ರಕಟವಾದ ಅನೇಕ ಕೃತಿಗಳು ಬಹುತೇಕವಾಗಿ 'ಹಿಂದೂ ರಾಷ್ಟ್ರೀಯವಾದ'ವನ್ನು ಮುಖ್ಯವಾಗಿಟ್ಟುಕೊಂಡಿವೆ. ಈ ನಿಬಂಧವನ್ನು ರೂಪಿಸಲಿಕ್ಕೆ ಇವುಗಳ ಸಹಾಯವನ್ನು ಪಡೆದರೂ, ಇವುಗಳ ಸೈದ್ಧಾಂತಿಕತೆಯನ್ನು ಅಲ್ಲಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ಬಹಳ ಮುಖ್ಯವಾಗಿ ಹಿಂದೂ ಪರ ಧೋರಣೆ, ಮುಸ್ಲಿಂ ವಿರೋಧಿ ಪೂರ್ವಗ್ರಹ, ಹಿಂದೂ-ಮುಸ್ಲಿಂ ಘರ್ಷಣೆಗಳಿಗೆ ಸಂಬಂಧಿಸಿದ ವಿವರಗಳು, ರಜಾಕಾರ ಮತ್ತು ಶಿಬಿರಗಳ ನಡುವಿನ ಸಂಘರ್ಷಗಳಿಗೆ ಸಂಬಂಧಪಟ್ಟ ವಿಚಾರಗಳಲ್ಲಿ ಅಡಗಿರುವ ಸೈದ್ಧಾಂತಿಕತೆಯ ಮಿತಿಗಳನ್ನು ಪರಿಶೀಲಿಸಲಾಗಿದೆ.

ಹೈದರಾಬಾದ ಕರ್ನಾಟಕ "ವಿಮೋಚನಾ" ಹೋರಾಟಕ್ಕೆ ಸಂಬಂಧಿಸಿದಂತೆ ಬಹಳ ಮುಖ್ಯವಾಗಿ ಧಾರ್ಮಿಕ ಧೋರಣೆಗಳೇ ಚರಿತ್ರೆಯನ್ನು ರಚಿಸಲಿಕ್ಕೆ ಕಾರಣವಾಗಿರುವುದನ್ನು ನಾವು ನೋಡಬಹುದು. ಚರಿತ್ರೆಯ ಇನ್ನೊಂದು ಮಗ್ಗಲಿನಿಂದ ನೋಡಿದರೆ "ರಾಜ್ಯಾಧಿಕಾರವೇ" ಇಡೀ ಘಟನೆಯ ಕೇಂದ್ರವಾಗಿದೆ ಎಂಬುದನ್ನು ನಿಬಂಧದುದ್ದಕ್ಕೂ ನಾವು ನೋಡಬಹುದು. ಒಂದು ವೇಳೆ ಹಿಂದೂ ರಾಷ್ಟ್ರೀಯವಾದಿ ಬರಹಗಾರರು ಹೇಳುವಂತೆ ವಿಮೋಚನಾ ಹೋರಾಟದ ಘಟನೆಗಳು ಹಿಂದೂ-ಮುಸ್ಲಿಂ ಸಂಘರ್ಷ ಮಾತ್ರವೇ ಆಗಿದ್ದ ಪಕ್ಷದಲ್ಲಿ ಅನೇಕ ಮುಸ್ಲಿಂರು ಹಿಂದೂಗಳನ್ನು, ಹಿಂದೂಗಳು ಮುಸ್ಲಿಂರನ್ನು "ಹಿಂದೂ-ಮುಸ್ಲಿಂ ಘರ್ಷಣೆಗಳಲ್ಲಿ" ಪರಸ್ಪರ ರಕ್ಷಿಸಿಕೊಂಡ ಉದಾಹರಣೆಗಳು ಸುರಪುರದ ಹೋರಾಟದಲ್ಲಿ ಏಕೆ ಕಂಡುಬರುತ್ತವೆ ಎನ್ನುವ ಪ್ರಶ್ನೆಯೂ ಇಲ್ಲಿ ಮುಖ್ಯವಾಗುತ್ತದೆ.

** ** **

ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟ ಭಾರತದ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದಿರುವುದು ಸರಿಯಷ್ಟೆ. ಆದರೆ, ಇದರ ಒಳಸುಳಿಗಳನ್ನು ಗಮನಿಸಿದರೆ ಇದು ಕೆಳವರ್ಗಗಳ, ಕೆಳಜಾತಿಗಳ, ದಲಿತರ ಮತ್ತು ಮಹಿಳೆಯರನ್ನು ಒಳಗೊಳ್ಳದಿರುವುದು ಗೋಚರಿಸುತ್ತದೆ. ಹಿಂದೂ ಧರ್ಮದ ಶ್ರೇಣೀಕೃತ ವ್ಯವಸ್ಥೆಯಲ್ಲಿ ಪ್ರಬಲ ಜಾತಿಗಳ ನಾಯಕರು ಹೋರಾಟದ ಮುಖಂಡತ್ವವನ್ನು

ವಹಿಸಿರುವುದು ಕಾಕತಾಳಿಯವೇನಲ್ಲ. ರಾಜ್ಯದಲ್ಲಿ ಪ್ರಬಲವಾಗಿದ್ದ ನಿಜಾಂ ಅವರು ಮುಸ್ಲಿಂ ಧರ್ಮಕ್ಕೆ ಸೇರಿದವರಾಗಿರುವುದು ಮತ್ತು ಇದರಿಂದ ಸಹಜವಾಗಿಯೇ ಮುಸ್ಲಿಂ ಸಮುದಾಯದ ಉನ್ನತ ವರ್ಗದವರು ರಾಜ್ಯಾಡಳಿತದ ಸುಖವನ್ನು ಅನುಭವಿಸುತ್ತಿದ್ದದ್ದು ಹಿಂದುಗಳ ಪ್ರಬಲ ಜಾತಿಗಳ ಯಜಮಾನರಿಗೆ ಅಪಥ್ಯವಾಗಿದ್ದು ಸರಿಯಷ್ಟೆ. ರಾಜ್ಯಾಡಳಿತಕ್ಕೆ ಸಂಬಂಧಿಸಿದಂತೆ ಸಮಾನಾಸಕ್ತಿಯನ್ನು ಬೆಳೆಸಿಕೊಳ್ಳಲು ಈ ಕಾರಣದಿಂದಲೇ ಹಿಂದೂಗಳ ಪ್ರಬಲ ಜಾತಿಗಳ ಜನರಿಗೆ ಸಾಧ್ಯವಾಯಿತು. ಹೀಗಾಗಿ ಅವರು ಅಧಿಕಾರ ರಾಜಕೀಯದ ವರ್ತುಲಗಳ ಪ್ರಶ್ನೆಗಳಿಗಾಗಿ ಮುಸ್ಲಿಂರ 'ದೌರ್ಜನ್ಯದ' ಬಗ್ಗೆ ಬೊಟ್ಟು ತೋರಿಸಿದ್ದು ಸಹಜವೇ ಆಗಿದೆ. ಅವರಿಗೆ ಹಿಂದೂ ಧರ್ಮದ ಒಳಗೆ ಕೆಳಜಾತಿಗಳ, ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯಗಳ ಬಗ್ಗೆ ಯಾವುದೇ ಸಿಂಪಥಿಯಿಲ್ಲದಿರುವುದು ಅಷ್ಟೇ ಸಹಜವಾದ ಅಂಶವಾಗಿದೆ. ಹೀಗಾಗಿ ಇದು ಮೇಲ್ಜಾತಿಗಳ ಮೇಲ್ವರ್ಗದ ಜನರ ಹೋರಾಟವಾಗಿದೆ ವಿನಹ ಸಮಸ್ತವರ್ಗಗಳನ್ನು ಒಳಗೊಂಡ ರಾಷ್ಟ್ರೀಯ ಹೋರಾಟವಾಗಿಲ್ಲದಿರುವುದು ಕಂಡುಬರುತ್ತದೆ. ಒಂದು ವೇಳೆ ಅಲ್ಲಲ್ಲಿ ಕೆಳಜಾತಿಗಳ, ಕೆಳವರ್ಗದವರ ಭಾಗವಹಿಸುವಿಕೆ ಇದ್ದರೂ ಅವುಗಳು ಬಹುತೇಕವಾಗಿ ಯಜಮಾನರ ಆಜ್ಞೆಯನ್ನು ಪರಿಪಾಲಿಸಲಿಕ್ಕೆ ಎಂದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ.

** ** **

ಸುರಪುರವನ್ನು ಕೇಂದ್ರವಾಗಿಟ್ಟುಕೊಂಡು ಮಾಡಿದ ಅಧ್ಯಯನಗಳಲ್ಲಿ ಹಿಂದೂ ರಾಷ್ಟ್ರೀಯವಾದಿ ಬರಹಗಳ ಮಿತಿಗಳೇನೆ ಇದ್ದರೂ ಅವುಗಳು ನೀಡಿರುವಂತಹ ಮಾಹಿತಿಗಳು ಇಂದಿನ ಸಂದರ್ಭದಲ್ಲಿ ಬಹಳ ಮುಖ್ಯವಾಗಿವೆ. ಇವುಗಳು ಆಯಾ ಕಾಲದ ಪ್ರಬಲವಾದ ಸನ್ನಿವೇಶಗಳಿಂದ ಪ್ರೇರಿತವಾಗಿರುವುದು ಒಂದು ಮಿತಿಯಾದರೂ, ಇವುಗಳು ವಿವರಿಸುವ ಬಹುತೇಕ ಘಟನೆಗಳನ್ನು, ವ್ಯಕ್ತಿ ವಿವರಗಳನ್ನು ಅರ್ಥ ಮಾಡಿಕೊಳ್ಳುವುದು ಆ ಕಾಲದ ಸಂಕೀರ್ಣ ಸಂಬಂಧಗಳಿಗೆ ಒಳ್ಳೆಯ ಉದಾಹರಣೆಯಾಗಬಲ್ಲದು. ಆ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಜೀವವನ್ನೆ ಕಳೆದುಕೊಂಡ ಈ ಭಾಗದ ಹೋರಾಟಗಾರರಲ್ಲಿ ರಾಜನಕೋಳೂರಿನ ವಿರುಪಾಕ್ಷಪ್ಪಗೌಡ ಮತ್ತು ಇವರ ಬಲಗೈ ಬಂಟ ಮಹಾಂತಪ್ಪಗೌಡ ಪ್ರಮುಖರಾಗಿದ್ದಾರೆ. ಹೋರಾಟದಲ್ಲಿನ ಇವರುಗಳ ಪಾತ್ರ ನಿಜಕ್ಕೂ ಮನಮುಟ್ಟುತ್ತದೆ. ವಿಚಾರವಂತರಾದ ರಾಜಾ ವೆಂಕಟಪ್ಪನಾಯಕರು ಹಿಂದೂ ಮುಸ್ಲಿಂರ ಬಾಂಧವ್ಯದ ಬಗ್ಗೆ ಅನೇಕ ರೀತಿ ಮಾತನಾಡಿದರೂ ಸುರಪುರ ವಿಮೋಚನೆ ಸಂದರ್ಭದಲ್ಲಿ ಅವರ ಅನುಯಾಯಿಗಳು ಮಸೀದಿ ಕೆಡವಿರುವ ಪ್ರಸಂಗವು ಆ ಕಾಲದ ಸಂಘರ್ಷಗಳ ಸಂಕೀರ್ಣ ಮುಖಗಳನ್ನು ಪರಿಚಯಿಸಿ ಕೊಡುತ್ತದೆ (ಈ ಅಂಶಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳಿಗಾಗಿ ''ವಿಮೋಚನಾ ಹೋರಾಟದ ರೂವಾರಿಗಳು'' ಎಂಬ ಅಧ್ಯಾಯವನ್ನು ನೋಡಿ).

ಸುರಪುರಕ್ಕೆ ಸಂಬಂಧಿಸಿದ ವಿಮೋಚನಾ ಹೋರಾಟದ ವಿವಿಧ ಮಗ್ಗುಲುಗಳನ್ನು ಅರ್ಥಮಾಡಿಕೊಳ್ಳಲು ಲಭ್ಯವಿರುವ ಬಹುತೇಕ ಮಾಹಿತಿಗಳನ್ನು ಆಧರಿಸಲಾಗಿದೆ. ಸಂದರ್ಶನಾಧಾರಿತ ವಿಷಯಗಳನ್ನು ಅಲ್ಲಲ್ಲಿ ಈ ನಿಬಂಧಕ್ಕಾಗಿ ಕಲೆ ಹಾಕಲಾಗಿದೆ. ಒಪ್ಪಿತವಾದ ಚರಿತ್ರೆಗೆ ಸಮನಾಂತರವಾದ ಇನ್ನೊಂದು ಮಗ್ಗಲಿನ ಚರಿತ್ರೆ ಬರವಣಿಗೆಯನ್ನು ಮಾಡಲು ಪ್ರಸ್ತುತ ನಿಬಂಧವು ಒಂದು ಸಣ್ಣ ಹೆಜ್ಜೆಯನ್ನಿಡಲು ಪ್ರಯತ್ನಿಸಿದೆ.

## ಗ್ರಂಥಸೂಚಿ

### ಅ. ಪ್ರಕಟಿತ ಗ್ರಂಥಗಳು

೧. ಅನಂತರಾಮಯ್ಯ ಆರ್.ಎಲ್., **ಸ್ವಾತಂತ್ರ್ಯದ ಹೋರಾಟ**, ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ ನವದೆಹಲಿ, ೧೯೭೨ (೨೦೦೧).

೨. ಅಮರೇಶ ನುಗಡೋಣಿ, **ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦.

೩. ಅಮರೇಶ ನುಗಡೋಣಿ, **ಹೈದರಾಬಾದು ಕರ್ನಾಟಕ ಹಾಡು-ಪಾಡು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೩.

೪. ಆದಿತ್ಯ ನಾರಾಯಣ, **ಚರಿತ್ರೆಯ ವಿಕೃತಿಕರಣ**, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೪.

೫. ಈಶ್ವರಯ್ಯ ಮಠ, **ವಚನವಾಹಿನಿ**, ತಾಲೂಕ ಕನ್ನಡ ಸಾಹಿತ್ಯ ಪರಿಷತ್ತು, ಸುರಪುರ, ೨೦೦೪

೬. ಕಪಟರಾಳ ಕೃಷ್ಣರಾಯ, **ಸುರಪುರ ಸಂಸ್ಥಾನದ ಇತಿಹಾಸ**, ಆರ್ .ಸಿದ್ದಯ್ಯ, ಬೆಂಗಳೂರು, ೧೯೭೭.

೭. ಕಲಬುರ್ಗಿ ಎಂ.ಎಂ. ಮತ್ತು ಪಾಟೀಲ್ ಎಸ್.ಎಚ್., ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣ ಲಿಂಗಾಯತರ ಪಾತ್ರ, ವೀರಶೈವ ಅಧ್ಯಯನ ಸಂಸ್ಥೆ, ಗದಗ.

೮. ಕೃಷ್ಣ ಎ., **ಸಗರನಾಡ ದರ್ಶನ**, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫

೯. ಕೃಷ್ಣ ಎ., **ತವನಿಧಿ**, ಸ್ಮರಣ ಸಂಚಿಕೆ, ತಾಲೂಕ ಕನ್ನಡ ಸಾಹಿತ್ಯ ಪರಿಷತ್ತು, ಸುರಪುರ, ೧೯೯೬

೧೦. ಕೃಷ್ಣಮಾಚಾರ್ಯ ಬಿ., **ಸ್ವಾತಂತ್ರ್ಯ ಹೋರಾಟಗಾರ ಶ್ರೀ ಕಾಂಗ್ರೆಸ್ ಬಸಣ್ಣನವರು**, ಮಹಾಕವಿ ಲಕ್ಷೀಶ ವಾಚನ ಸಂಘ, ಸುರಪುರ, ೧೯೯೨

೧೧. ಕೃಷ್ಣಮಾಚಾರ್ಯ ಬಿ., **ಮರೆಯಲಾರದ ಸುರಪುರ ರಾಜರ ಚರಿತ್ರೆ**, ಶ್ರೀಮತಿ ರಂಜನಾ ಪ್ರಕಾಶಚಂದ ಜೈನ್, ಸುರಪುರ, ೨೦೦೩

೧೨. ಕೃಷ್ಣಮೂರ್ತಿ ಎಚ್.ಆರ್. ಮತ್ತು ಅಶ್ವತ್ಥಪ್ಪ ಕೆ.ಎನ್., **ಕರ್ನಾಟಕ ಇತಿಹಾಸ ಪರಿಚಯ**, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೧

೧೩. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., **ಕರ್ನಾಟಕದ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರ, ೧೯೬೦

೧೪. ಗೋಪಾಲರಾವ್ ಹೇಜೀಬ್, **ಹೈದರಾಬಾದ ಮುಕ್ತಿ ಸಂಘರ್ಷ**, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧

೧೫. ಗೋಪಾಲರಾವ್ ಎಚ್.ಎಸ್., **ಕರ್ನಾಟಕ ಏಕೀಕರಣ ಇತಿಹಾಸ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

೧೬. ಚಿದಾನಂದಮೂರ್ತಿ ಎಂ., **ಕರ್ನಾಟಕ ಸಂಸ್ಕೃತಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧

೧೭. ಚಿನ್ನಾಸ್ವಾಮಿ ಸೋಸಲೆ, **ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೮. ಚುರ್ಚಿಹಾಳಮಠ ಸಿ.ಎಮ್., **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ ವಿಮೋಚನಾ ಹೋರಾಟ**, ಮುಂಡರಗಿ ತಾಲೂಕಾ ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ ೧೯೯೯

೧೯. ಚಂದ್ರಶೇಖರ ಎಸ್., **ಆಧುನಿಕ ಕರ್ನಾಟಕ ಆಂದೋಲನಗಳು**, ನಮ್ಮ ಪ್ರಕಾಶನ, ಬಿಳಿಗೆರೆ, ೨೦೦೨

೨೦. ಚಂದ್ರಶೇಖರ ಲೋಖಂಡೆ, **ಹೈದರಾಬಾದ ಮುಕ್ತಿ ಸಂಗ್ರಾಮ ಕಾ ಇತಿಹಾಸ**, ಶ್ರೀ ಘುಡಮಲ ಪ್ರಹ್ಲಾದಕುಮಾರ ಆರ್ಯ ಧರ್ಮಾರ್ಥ ಟ್ರಸ್ಟ್, ಹಿಂಡೌನ ಸಿಟಿ, ೨೦೦೪

೨೧. ಚಂದ್ರಶೇಖರ ಟಿ.ಜಿ., **ಭಾರತದ ಇತಿಹಾಸ**, ಸಂ.೩, ಪೂರ್ಣಪ್ರಕಾಶನ, ಶಿವಮೊಗ್ಗ, ೨೦೦೦

೨೨. ಜಾಗೀರದಾರ ಆರ್.ಜಿ. ಮತ್ತು ಲಿಂಗಸುಗೂರ ವಿಠ್ಠಲರಾವ್, **ಹೈದರಾಬಾದ ಕರ್ನಾಟಕ**, ಪ್ರೇಮಸಾಗರ ಮುದ್ರಣಾಲಯ, ಹೈದರಾಬಾದ, ೧೯೪೧

೨೩. ದಿವಾಕರ ಆರ್.ಆರ್., **ಕರ್ನಾಟಕ ಏಕೀಕರಣ ಕಥೆ**, ಲೋಕಶಿಕ್ಷಣ ಟ್ರಸ್ಟ್ ಗ್ರಂಥಮಾಲಾ, ಹುಬ್ಬಳ್ಳಿ, ಬೆಂಗಳೂರು, ೧೯೯೨

೨೪. ನಾಗಪ್ಪ ತ್ರಿವೇದಿ, **ವಜ್ರದೀಪ್ತಿ ಸ್ಮರಣ ಸಂಚಿಕೆ**, ವಜ್ರ ಮಹೋತ್ಸವ ಸ್ವಾಗತ ಸಮಿತಿ, ರಂಗಪೇಟೆ, ೨೦೦೪

೨೫. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೨

೨೬. ನಟರಾಜ ಹುಳಿಯಾರ್, ಮಾರ್ಕ್ಸ್, ಗಾಂಧಿ, ಸಮಾಜವಾದ, ಭಾಗ ೧ (ರಾಮಮನೋಹರ ಲೋಹಿಯಾ ಬರಹಗಳು ಸಂ ೬), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೨೭. ನಲವಡಿ ಶ್ರೀಕಂಠಶಾಸ್ತ್ರಿ, ಹೈದರಾಬಾದ ರಜಾಕಾರ ಲಾವಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೨೮. ಪಾಟೀಲ್ ಎಚ್.ಎಸ್., ವಿಮೋಚನೆ, ಜಿಲ್ಲಾ ಆಡಳಿತ, ಕೊಪ್ಪಳ, ೧೯೯೯

೨೯. ಪಾಟೀಲ್ ಎಂ.ಎಸ್., ಕಲ್ಲರಳಿ ಹೂವಾಗಿ, ಕಲಬುರ್ಗಿ ಜಿಲ್ಲಾ ೬ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ವಾಗತ ಸಮಿತಿ, ಶಹಬಾದ್ , ೨೦೦೦

೩೦. ಬರಗೂರ ರಾಮಚಂದ್ರಪ್ಪ, ಕೋಮುವಾದ, ಕರ್ನಾಟಕ ರಾಜ್ಯ ಬಂಡಾಯ ಸಾಹಿತ್ಯ ಸಂಘಟನೆ, ಬೆಂಗಳೂರ, ೧೯೯೨

೩೧. ಬರಗೂರ ರಾಮಚಂದ್ರಪ್ಪ, ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರ, ೨೦೦೨

೩೨. ಬಸವರಾಜ ಪೊಲೀಸ ಪಾಟೀಲ್, ಬಿಡುಗಡೆ, ಅಮರ ಪ್ರಕಾಶನ, ಗುಲಬರ್ಗಾ, ೨೦೦೨

೩೩. ಬಸವರಾಜ ಮಲಶೆಟ್ಟಿ, ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೩೪. ಬಾ.ರಾ.ಗೋಪಾಲ, ಕರ್ನಾಟಕದ ಇತಿಹಾಸ, ಪ್ರಸಾರಾಂಗ, ಕನ್ನಡ ಅಧ್ಯಯನ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೬

೩೫. ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೩೬ ಭಾಸ್ಕರ ಟಿ.ಎಂ., ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೩೭. ಭಾಸ್ಕರರಾವ್ ಮೂಡಬೂಳ, ಮರೆತು ಹೋದ ಸುರಪುರ ಇತಿಹಾಸ, ಎಸ್.ಜಿ.ಪ್ರೋಸೆಸ್, ಬೆಂಗಳೂರು, ೨೦೦೧

೩೮. ಮಹಾಬಲೇಶ್ವರಪ್ಪ ಬಿ.ಸಿ., **ಹೈದರಾಬಾದ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ,** ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೩೯. ಮಹಾಬಲೇಶ್ವರಪ್ಪ ಬಿ.ಸಿ., **ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು,** ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭

೪೦. ಮಾಧವಿ ಭಂಡಾರಿ, **ಮಹಿಳೆ ಮತ್ತು ಕೋಮುವಾದ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮

೪೧. ಮುಜುಂದಾರ ಪಿ.ಆರ್. ಮತ್ತು ಇತರರು, **ಭಾರತ ಸ್ವಾತಂತ್ರ ಸಂಗ್ರಾಮ,** ಚೇತನಬುಕ್ ಹೌಸ್, ಮೈಸೂರು, ೧೯೯೮

೪೨. ಮುಜುಂದಾರ ಪಿ.ಆರ್. ಮತ್ತು ಇತರರು, ದಕ್ಷಿಣ ಭಾರತದ ಇತಿಹಾಸ, ಚೇತನಬುಕ್ ಹೌಸ್, ಮೈಸೂರು, ೧೯೯೯

೪೩. ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೪. ರಾಮಚಂದ್ರ ಸಿ.ಎನ್., ಎಡ್ವರ್ಡ್ ಸೈಯದ್, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೪೫. ರಾಮಾನುಜಂ ಪಿ.ಎಸ್., **ಕರ್ನಾಟಕ ಪರಂಪರೆ ೧,** ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು

೪೬. ರಾಮಸ್ವಾಮಿ. ಎಸ್.ಆರ್., **ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು,** ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ೧೯೯೭(೧೯೯೮)

೪೭. ರೇವಣಸಿದ್ದಯ್ಯ ಆರ್., **ಶೋರಾಪುರ ತಾಲೂಕಾ ದರ್ಶನ,** ಐ.ಬಿ.ಎಚ್ .ಪ್ರಕಾಶನ, ಬೆಂಗಳೂರ, ೧೯೮೬

೪೮. ರೋಮಿಲಾಥಾಪರ ಮತ್ತು ಇತರರು, **ಕೋಮುವಾದ ಮತ್ತು ಭಾರತೀಯ ಇತಿಹಾಸ ಲೇಖನ,** ಬೆಂಗಳೂರು, ೧೯೯೮

೪೯. ಲಕ್ಷ್ಮಣ ತೆಲಗಾವಿ, **ಸ್ಥಳೀಯ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೫೦. ಲಕ್ಷ್ಮಣ ತೆಲಗಾವಿ, **ಮೌರ್ಯ ಮತ್ತು ಶಾತವಾಹನಯುಗ (ಕ್ರಿ.ಪೂ.೩-ಕ್ರಿ.ಶ.೩),** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೫೧. ವಸು, **ಮೌಖಿಕ ಚರಿತ್ರೆ,** ಅಂಕಿತ ಪುಸ್ತಕ, ಬೆಂಗಳೂರು, ೨೦೦೪

೫೨. ವಸಂತ ಕುಷ್ಟಗಿ, ಸುಶೀಲ ಸುಬ್ಬಯ್ಯ ಸಂಸ್ಮರಣ ಗ್ರಂಥ, ಸುಶೀಲ ಸುಬ್ಬಯ್ಯ ಪ್ರತಿಷ್ಠಾನ, ಸುರಪುರ, ೨೦೦೩

೫೩. ವಿಜಯ್ ಪೂಣಚ್ಚತಂಬಂಡ, ಚರಿತ್ರೆ ಸಂಪುಟ ವಿಶ್ವಕೋಶ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೫೪. ವೆಂಕಟರತ್ನಂ ಎಂ.ವಿ., ಮತ್ತು ಪದ್ಮಾ ಎಂ.ಬಿ., ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು, ಪ್ರಿಟಿಂಗ್ ಆಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು, ೧೯೮೫ (೧೯೯೧, ೧೯೯೯, ೨೦೦೩)

೫೫. ಶಂಕರನಾರಾಯಣರಾವ್ ಎನ್.ಪಿ., ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರ, ೧೯೯೧

೫೬. ಶಿವರುದ್ರಸ್ವಾಮಿ ಎಸ್.ಎನ್., ಆಧುನಿಕ ಭಾರತದ ಇತಿಹಾಸ, ಪೌರಸ್ತ್ಯ ಪ್ರಕಾಶನ, ಎಂ.ಆರ್.ಆಗ್ರೊ ಎದುರು, ಶಾರದಾನಗರ, ತಿಪಟೂರು, ೨೦೦೧

೫೭. ಶೇಷಾದ್ರಿ ಬಿ. ಮತ್ತು ಚಂದ್ರಶೇಖರ ಟಿ.ಆರ್., ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೫೮. ಷೇಕ್ ಅಲಿ(ಪ್ರ.ಸಂ.), ಕರ್ನಾಟಕ ಚರಿತ್ರೆ ಸಂಪುಟ ೬ ಮತ್ತು ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೫೯. ಸಾಲತೊರೆ ಬಿ.ಎ. ಮತ್ತು ದೇಸಾಯಿ ಪಿ.ಬಿ., ಕನ್ನಡ ನಾಡಿನ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೪೧ (೧೯೪೮, ೧೯೫೩, ೧೯೬೪, ೧೯೭೯)

೬೦. ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೨, ಗೀತಾ ಬುಕ್ ಹೌಸ್, ಮೈಸೂರ, ೧೯೭೭

೬೧. ಸೂರ್ಯನಾಥ ಕಾಮತ್, ಸ್ವಾತಂತ್ರ ಸಂಗ್ರಾಮದ ಸ್ಮೃತಿಗಳು ಸಂ.೩., ಗೀತಾ ಬುಕ್ ಹೌಸ್, ಮೈಸೂರು, ೧೯೮೦

೬೨. ಸ್ವಾಮಿ ಆರ್.ಎಸ್. ಮತ್ತು ಹಿಪ್ಪರಗಿ ಎನ್.ಎಂ.(ಸಂ), ಭಾರತ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸ್ಮರಣ ಸಂಪುಟ ಆಳಂದ ತಾಲೂಕಿನ ಸಂಪೂರ್ಣ ದರ್ಶನ, ಭಾರತ ಸ್ವಾತಂತ್ರ್ಯ ಸುವರ್ಣಮಹೋತ್ಸವದ ಸಮಿತಿ, ಆಳಂದ, ೧೯೯೭

೬೩. ಸ್ವಾಮಿರಾವ್ ಕುಲಕರ್ಣಿ ಮತ್ತು ರವೀಂದ್ರ ಕರ್ಜಗಿ (ಸಂ), **ಜಗನ್ನಾಥರಾವ್ ಚಂಡ್ರಿಕಿ ಅಭಿನಂದನ ಗ್ರಂಥ**, ಜಗನ್ನಾಥರಾವ್ ಚಂಡ್ರಿಕಿಯವರ ಸನ್ಮಾನ ಸಮಿತಿ, ಗುಲಬರ್ಗಾ, ೧೯೯೭

೬೪. ಹನುಮಾಕ್ಷಿಗೋಗಿ, **ಸುರಪುರ ತಾಲೂಕಿನ ಶಾಸನಗಳು**, ಮಹಿಳಾ ಸಾಹಿತ್ಯಿಕಾ, ೧೯೯೫

೬೫. ಹನುಮಾಕ್ಷಿ ಗೋಗಿ, **ಕಲಬುರ್ಗಿ ಜಿಲ್ಲೆಯ ಶಾಸನಗಳು**, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ೧೯೯೬

೬೬. Bipanchandra, **India's Struggle For Indipendence,** Penguine Books, India, 1987(1988, 1989)

೬೭. Desai A.R., **Social Background of Indian Nationalism**, Popular Prakashan, Bombay, 1948(1976)

೬೮. Desai.V.H and Sudarshan.C, **The Saga of Hyderabad liberation Struggle in India's Freedom movement**, Swami Ramananda Tirth memorial Trust, Hyderabad, 2000

೬೯. John Hutchinson and Anthony D.Smith, **Nationalism,** Oxford University Press, Oxford Newyark, 1994


## ಆ. ಅಪ್ರಕಟಿತ ಗ್ರಂಥಗಳು


೧. Kulkarni N.H., **British Relations with the principality of Surpur,** Ph.D.Theises, Gulbarga University, Gulbarga, 1972

೨. Manjula Chincholi, **Depressed Classes in Hyderabad Karnataka Area**(Under the Nizam Dominian), Ph.D.Theises, Gulbarga University, Gulbarga, 1989

೩. Prabhat Padma Naina, **Freedom Movement in Hyderabad,** Karnataka Area, Ph.D.Theises, Gulbarga University, Gulbarga, 1992

೪. Usha Desai, **Freedom Movement in Raichur District,** Ph.D.Theises, Gulbarga University, Gulbarga, 1994

೫. Venkat Rao Palati, **Role of Freedom Fighters in Bidar District(1890-1948),** Ph.D.Theises, Gulbarga University, Gulbarga, 2002

೬. ಅಶ್ವಥ ಡಿ.ಎಸ್., **ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ**, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೭. ಸುಭಾಷಚಂದ್ರ ದೊಡ್ಮನಿ, **ಹೈದರಾಬಾದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ**, ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೮. ಶರಣಪ್ಪ ಉಮಚಗಿ, **ಹೈದರಾಬಾದ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು**, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

**ಇ. ಗ್ಯಾಸೆಟಿಯರ್‌ಗಳು**

೧. ಪಾಟೀಲ್ ಎಂ.ಬಿ.(ಪ್ರ.ಸಂ) **ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು, ೧೯೯೭

೨. ಸೂರ್ಯನಾಥ ಯು.ಕಾಮತ್(ಪ್ರ.ಸಂ), **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು, ೧೯೬೪

**ಈ. ವರದಿಗಳು**

ಜನಗಣತಿ ವರದಿ ೨೦೦೧

ಆಡಳಿತ ವರದಿ ೨೦೦೧




ಭಾರತದ ಪ್ರಧಾನಮಂತ್ರಿಯಾಗಿದ್ದ ರಾಜೀವಗಾಂಧೀಯವರ ವಿಮೋಚನಾ ಹೋರಾಟಗಾರರಾದ ಡಾ.ಜಿ.ಸುಬ್ಬಯ್ಯ ಅವರಿಗೆ ನೀಡಿದ ತಾಮ್ರಪತ್ರ




ವಿಮೋಚನಾ ಹೋರಾಟಗಾರರಾದ ತಿಮ್ಮಯ್ಯ ದರಬಾರಿಯವರಿಗೆ ಭಾರತದ ಪ್ರಧಾನಮಂತ್ರಿಯಾಗಿದ್ದ ರಾಜೀವಗಾಂಧೀಯವರು ನೀಡಿದ ತಾಮ್ರಪತ್ರ

## ಕರ್ನಾಟಕದಲ್ಲಿ ಹೈದರಾಬಾದ ಕರ್ನಾಟಕದ ಪ್ರದೇಶಗಳು

ಬೀದರ

ಗುಲಬರ್ಗಾ

ರಾಯಚೂರು

ಕರ್ನಾಟಕದಲ್ಲಿ ಹೈದರಾಬಾದ ಕರ್ನಾಟಕ ವಿಮೋಚನೆ
ಸಂದರ್ಭದಲ್ಲಿದ್ದ ಭೂಪ್ರದೇಶಗಳು



## ಹೈದರಾಬಾದ ಸಂಸ್ಥಾನದ ಅಧೀನದಲ್ಲಿದ್ದ ಪ್ರಾಂತ್ಯಗಳು
## (ಕ್ರಿ.ಶ.೧೭೨೪ ರಿಂದ ಕ್ರಿ.ಶ.೧೯೪೮ರವರೆಗೆ)



## ಗುಲಬರ್ಗಾ ಜಿಲ್ಲೆ



## ರಜಾಕಾರರ ದಾಳಿಗೆ ತುತ್ತಾದ ಸುರಪುರ ತಾಲೂಕಿನ ಗ್ರಾಮಗಳು



## ಬಿಜಾಪುರ ಜಿಲ್ಲೆ


ಉ
ಪ
ಪೂ
ದ
ಗುಲಬರ್ಗಾ ಜಿಲ್ಲೆ
ಮಹಾರಾಷ್ಟ್ರ
ಬೆಳಗಾಂ
ಮುದ್ದೇಬಿಹಾಳ
ಕೃಷ್ಣಾ ನದಿ
ಬಾಗಲಕೋಟೆ ಜಿಲ್ಲೆ
ಮುದ್ದೇಬಿಹಾಳ
(ಶಿಬಿರಗಳು ಕೇಂದ್ರಿಕೃತವಾದ ಪ್ರದೇಶಗಳು)

## ವಿಮೋಚನಾ ಹೋರಾಟಗಾರರು ಸ್ಥಾಪಿಸಿದ ಶಿಬಿರಗಳ ಕೇಂದ್ರಗಳು



